# ಕಸ್ತೂರಿ

## ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಆರ್.ಎ. ಉಪಾಧ್ಯ

ಸಹಸಂಪಾದಕ:
ಮಾಧವ ನಾ. ಮಹಿಷಿ

ಮುಖಪುಟ:
ಕಾಳಿಂಗಮರ್ದನ

ವರ್ಣಪಾರದರ್ಶಿಕೆ-ಕೃಪೆ
ತಮಿಳುನಾಡು ಕರಕುಶಲ ಕಲಾಭಿವೃದ್ಧಿ ನಿಗಮ

# ಬೆಳಕಿಂಡಿ

● ಸಮಸ್ಯೆಯು ತುರ್ತುಪರಿಸ್ಥಿತಿಯಾಗಿ ಮಾರ್ಪಡುವ ಮೊದಲೇ ಅದನ್ನು ಗುರುತಿಸಬಲ್ಲವನೇ ನಿಜವಾದ ಧುರೀಣ.

- ಅರ್ನಾಲ್ಡ್ ಗ್ಲಾಸ್‌ಗೋ

● ಏಕಾಂತವನ್ನೂ ಸಾಹಚರ್ಯವನ್ನೂ ಒಂದುಗೂಡಿಸುವ ಸ್ವರ್ಣಿಲ ಮಾಧ್ಯಮವೆಂದರೆ ಪತ್ರವ್ಯವಹಾರ.

- ರೇನಾಲ್ಡ್

● ಹೊಸ ವಿಚಾರವುಳ್ಳಾತ ಆ ವಿಚಾರವನ್ನು ಬಹುಜನರು ಒಪ್ಪುವವರೆಗೆ ವಿಕ್ಷಿಪ್ತನೆಂದೇ ಪರಿಗಣಿಸಲ್ಪಡುತ್ತಾನೆ

- ಮಾರ್ಕ್‌ಟ್ವೇನ್

● ವಯಸ್ಸಾದ ಹಾಗೆಲ್ಲ ಅವರ ವಿಚಾರಗಳಿಂದಲ್ಲ, ಅವರ ಚಾರಿತ್ರ್ಯದಿಂದ ಇತರರನ್ನು ಅಳೆಯುವ ಪ್ರವೃತ್ತಿ ನನ್ನಲ್ಲಿ ಬೆಳೆಯುತ್ತಾ ಇದೆ.

- ಜವಾಹರಲಾಲ್ ನೆಹರೂ

● ಮ್ಯಾಕ್ಸಿ: ಗಂಡಸರಿಗೆ ಗೊತ್ತಿದ್ದ ವಿಷಯದ ಬಗೆಗೇ ಇನ್ನಷ್ಟು ಕುತೂಹಲವನ್ನು ಹುಟ್ಟಿಸುವಂಥ ವಸ್ತು.

- ಜಿ.ಜಿ.

ಹೊಸ ಚಂದಾ ದರಗಳು:

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

KASTURI, APRIL 1989

ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

# ಸಹಚಿಂತನ

**ಬಾಬಾ ಆಮ್ಟೆ**

ಅಸಹ್ಯವನ್ನು ಸಹ್ಯವಾಗಿಸಿ, ಭಯವನ್ನು ಅಭಯವಾಗಿಸುವ ಬಾಬಾ ಆಮ್ಟೆ ಈ ಶತಮಾನದ ಕೆಲವೇ ನಿಜವಾದ ಮನುಷ್ಯರಲ್ಲಿ ಒಬ್ಬರು. ಅವರ ಕುರಿತು ಚಂದ್ರಶೇಖರ ಭಂಡಾರಿ ಬರೆದ ಲೇಖನ 'ಕಸ್ತೂರಿ'ಯ (ಮಾರ್ಚ್ 89) ತೂಕವನ್ನು ಹೆಚ್ಚಿಸಿದೆ. ನಮಗಂತೂ ಇಂಥ ಲೇಖನಗಳು ಬದುಕನ್ನು ಬಾಳುವುದಕ್ಕೆ ಪ್ರೇರಣೆ ನೀಡುತ್ತವೆ.

ರಾಮಾಪುರ — ಪ್ರಕಾಶ ಜೋಶಿ

ಬಾಬಾ ಆಮ್ಟೆಯವರ ಕುರಿತು ಓದಿದಾಗ ನನ್ನ ಮೈ ಮನಗಳೆರಡೂ ಒಮ್ಮೆಲೇ ಅವರಿಗೆ ಬಾಗಿದವು.

ನೇರಲಕೆರೆ — ಸುಬ್ಬಲಕ್ಷ್ಮಿ ಹೆಚ್.ಕೆ

**ಸಾವು...**

ಎಸ್. ರವಿಕುಮಾರರ ಲೇಖನ ('ಕಸ್ತೂರಿ', ಮಾರ್ಚ್' 89) ನಮಗೆ ಸಾವಿನ ಕುರಿತ ಸರಿಯಾದ ಮಾಹಿತಿ ನೀಡಿ ಅದು ಭಯಾವಹವಾಗುವುದನ್ನು ತಪ್ಪಿಸಿದೆ.

ಆದರೆ 'ಕಸ್ತೂರಿ' ಸಾವಿನ ಬಗ್ಗೆಯೇ ಇಷ್ಟೇಕೆ ಒತ್ತು ಕೊಟ್ಟಿದೆ? ಪ್ರಭುಶಂಕರರ ಹರಟೆಯೂ ಇದೇ ರೀತಿ ಸಾವಿನ ಸುತ್ತ ಸುತ್ತುತ್ತಿತ್ತು.

ಹೆಜಮಾಡಿ — ಪ್ರಭಾಕರ ಶೆಟ್ಟಿ

ಪ್ರಭುಶಂಕರರ ಹರಟೆ 'ನಾನು ಸತ್ತದ್ದು' ಓದಿ ಕೊನೆಗೆ ಅವರೆಸೆದ ಕೆಲ ಪ್ರಶ್ನೆಗಳಿಗೆ ("ಸತ್ತ ನಂತರ ಉಪಕಾರಿಯಾಗುವುದು ಹೇಗೆ?") ವೈದ್ಯಕೀಯ ವಿದ್ಯಾರ್ಥಿನಿಯ ತಾಯಿಯಾದ ನಾನು 'ಕಸ್ತೂರಿ' ಸಂಚಿಕೆಯಲ್ಲಿಯೇ ಉತ್ತರವಿದೆಯೆಂದು ('ಮರಣೋತ್ತರ ಶವದಾನ' ಲೇಖನ) ಈ ಮೂಲಕ ಹೇಳ ಬಯಸುತ್ತೇನೆ.

ಬೆಂಗಳೂರು — ಸರೋಜಾ ಸುಂಕದ

ನವಿರಾದ ಹಾಸ್ಯದ ಮೂಲಕ ದಿನನಿತ್ಯದ ಸಮಸ್ಯೆಗಳತ್ತ ನಮ್ಮನ್ನು ನೋಡುವಂತೆ ಮಾಡಿದ ಪ್ರಭುಶಂಕರರಿಗೆ ನಮೋ ಎಂಬೆ.

ಬೆಂಗಳೂರು — ರಜನಿ ಪ್ರಕಾಶ್

**ಹೀಗೇ ಎಷ್ಟು ದಿನ?**

ಗೌರೀಶ ಕಾಯ್ಕಿಣಿಯವರು ಬರೆದ 'ಕನ್ಯಾಬಲಿ' ಓದಿ ಮರುಗಿದೆ. ಅವರು "ಇದು ಹೀಗೇ ಎಷ್ಟು ದಿನ?" ಎಂದು ಕೇಳಿದ್ದಾರಲ್ಲ- ನಾವು ಮನುಷ್ಯರಾಗುವವರೆಗೂ ಎಂದು ಹೇಳಲೆ?

ಲಕ್ಷ್ಮೇಶ್ವರ — ಗೀತಾ ಕುಲಕರ್ಣಿ

**ದೇವಾಲಯ!?**

ಶ್ರೀಕಾಂತ ಹಾದಿಮನಿಯವರು ಬರೆದ 'ದೇಶ ದೇವಾಲಯ' (ಮಾರ್ಚ್ 89ರ ಸಂಚಿಕೆ)ವೆಂಬ 'ಪುಟಕೊನೆ'ಯಲ್ಲಿ ಅಮೆರಿಕದ ಕೃಷ್ಣಸಂಥೀಯರ ವಿಚಾರಧಾರೆಯಿಂದ ನಾವು ಪುಳಕಿತರಾಗಬಹುದಾದರೂ ಇಂದು ನಮ್ಮ ದೇಶ ದೇವಾಲಯವಾಗಿ ಉಳಿದಿದೆಯೆ ಎಂಬ ಸಂಶಯವೂ ಉಂಟಾಗುತ್ತದೆ. ನಿತ್ಯ ಕೊಲೆ-ಸುಲಿಗೆ, ರಾಜಕೀಯ ಬೂಟಾಟಿಕೆ, ಅತ್ಯಾಚಾರ- ಅಸಮಾನತೆಗಳೇ ತಾಂಡವವಾಡುವುದಾದರೆ ಇದು ದೇವಾಲಯವೆ?

ಬದಾಮಿ — ರಾಜಶೇಖರ ದೊಡ್ಡಮನಿ

'ಬಲಿ' ಕಥೆ ಹಾಗೂ 'ನಮ್ಮ ನಡುವಿನಲ್ಲೊಬ್ಬ' ಕವನಗಳು ಈ ಸಂಚಿಕೆಯ ಶ್ರೇಷ್ಠ ಬರಹಗಳು. ಇವನ್ನು ಬರಿ ಬರಹಗಳೆಂದು ಓದಿ ಮರೆಯುವ ಹಾಗಿಲ್ಲ. ನಮ್ಮ ಮನೋವ್ಯಾಪಾರದ ಪ್ರತೀಕಗಳಾಗಿ ಮೂಡಿ ಬಂದಿವೆ ಇವು. ಆ ಕಥೆಗಾರನಿಗೂ ಕವಿಗೂ ಕೈ ಮುಗಿವೆ.

ಬೀದರ — ಬಸವರಾಜ ದಂಡಿನ

**ಮನಿಪ್ಲಾಂಟ್**

ಪರರ ಒಳಿತಿಗಾಗಿ ಶರೀರ ಸವೆಸಿ, ಹೂವಿಲ್ಲದ ಹಣ್ಣಿಲ್ಲದ ಮನಿಪ್ಲಾಂಟಿನಂತೆ ನೀರಸ ಜೀವನ ಸಾಗಿಸುವ ಮಾಧವಿ ನನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ಕೂತಳು. ಸಮಾಜದಲ್ಲಿ ಇರುವ ಮಾಧವಿಯಂಥ ನತದೃಷ್ಟೆಯರತ್ತ ಓದುಗರು ಒಳಗಣ್ಣು ತೆರೆದು ನೋಡುವಂತೆ ಮಾಡಿದ ಕಥೆಗಾತಿಗೂ ಅನುವಾದಕರಿಗೂ ಧನ್ಯವಾದಗಳು.

ಕುಮಟಾ — ಲಲಿತಾಪತಿ

**ಕೀಚಕ ಇಂಥವನೆ?**

ಮಾರ್ಚ್ 89ರ 'ಕಸ್ತೂರಿ'ಯಲ್ಲಿ (ಪುಟ 23) 'ಕೈಲಾಸಂ ದೃಷ್ಟಿಯಲ್ಲಿ..' ಎಂಬ ಪುಟ್ಟ ಲೇಖನದಲ್ಲಿ ಕೀಚಕನ ಕುರಿತ ವರ್ಣನೆ ಬಂದಿದೆಯಷ್ಟೆ: ಆದರೆ ನಾನು ಓದಿದ ಯಾವ ಭಾರತದಲ್ಲೂ ನನಗಿಂಥ ವರ್ಣನೆ ಕಂಡು ಬಂದಿಲ್ಲ. ಅವನನ್ನು ಹಾಗೆ ಕೈಲಾಸಂ ಯಾವ ಆಧಾರದ ಮೇಲೆ ಕಂಡರು? ಬೆಳಗೆರೆ ಕೃಷ್ಣಶಾಸ್ತ್ರಿಗಳಾದರೂ ನನ್ನ ಈ ಸಂಶಯವನ್ನು ಪರಿಹರಿಸುವರೆ?

**ಮುನವಳ್ಳಿ** **ಎಚ್.ಡಿ. ಚೋಪದಾರ್**

**ಒಂದು ನೆನಪು**

ಮಾರ್ಚ್ 89ರ ಸಂಚಿಕೆಯಲ್ಲಿ ಪಿಆರ್ಪಿ ಬರೆದ 'ಮಾನವಶಕ್ತಿ' ಎಂಬ ಕಿರುಲೇಖನ ಓದಿ ನನಗೊಂದು ಸಂಗತಿ ನೆನಪಾಯಿತು.

ಬಹುವರ್ಷಗಳ ಹಿಂದೆ 50ರ ದಶಕದಲ್ಲಿ ನಮ್ಮೂರಲ್ಲೊಂದು ಮದುವೆ. ವತನದಾರ ಮನೆತನದು. ವರ ಸಾಕಷ್ಟು ಓದಿದವ. ವಧುವೂ ಸುಶಿಕ್ಷಿತೆ. ಬೀಗರಲ್ಲಿ ಮದುವೆಯ ನಂತರದ ಮೆರವಣಿಗೆಯ ಸಂಬಂಧ ಸ್ವಲ್ಪ ಭಿನ್ನಾಭಿಪ್ರಾಯವಿತ್ತು. ಓಪನ್ ಕಾರಿನಲ್ಲೇ ಮೆರವಣಿಗೆಯಾಗಲೆಂದು ಗಂಡಿನವರು. ಬೇಡ, ಬಂಡಿ ಕಟ್ಟಿಸುವೆ ಎಂದು ಹೆಣ್ಣಿನವರು. ಕೊನೆಗೂ ಗಂಡಿನವರ ಹಟವೇ ಗೆದ್ದಿತು. ಕಾರೊಂದು ಮದುವೆಯ ಮನೆಯೆದುರು ಅಲಂಕಾರಗೊಂಡಿತು. ನವದಂಪತಿ ಕಾರನ್ನೇರಿ ಕುಳಿತಿತು. ಬ್ಯಾಂಡು ಬಾರಿಸತೊಡಗಿತು.

ಆದರೆ ಎಷ್ಟೇ ಮಾಡಿದರೂ ಕಾರು ಜಪ್ಪೆನ್ನಲಿಲ್ಲ. ಏನೇ ಪ್ರಯತ್ನಿಸಿದರೂ ಮುಂದೆ ಸರಿಯಲಿಲ್ಲ.

ಕೊನೆಗೆ ಆರು ಜನ ಗಟ್ಟಿಯಾಳುಗಳು ಕಾರಿನ ಹಿಂಭಾಗದಲ್ಲಿ ನಿಂತು ಥಕಲತೊಡಗಿದರು. ಊರೆಲ್ಲ ಮೆರವಣಿಗೆ ಹೀಗೇ ಸಾಗಿತು.

**ಹಾವನೂರು** **ಶ್ರೀನಿವಾಸ ಪಾಟೀಲ**

**'ಗ್ರಾಮಾಂತರ'**

ಕಸ್ತೂರಿಯ ಮಾರ್ಚ್ 89ರಲ್ಲಿ ಎತ್ತಿಕೊಂಡ ಪುಸ್ತಕ ವಿಭಾಗ 'ಗ್ರಾಮಾಂತರ'ದಲ್ಲಿ ಪ್ರೊ. ಎಚ್.ವಿ. ನಾಗೇಶರು ಭಾರತೀಯ ಹಾಗೂ ವಿದೇಶಗಳ ಕೆಲವಾರು ಹಳ್ಳಿಗಳ ಜ್ವಲಂತ ಸಮಸ್ಯೆಗಳನ್ನು ಮನೋಜ್ಞವಾಗಿ ಚಿತ್ರಿಸಿರುವರಾದರೂ, ಲೇಖನವು ಬಹಳೇ ದೊಡ್ಡದಾಯಿತಲ್ಲವೆ?

**ಸಾಗರ** **ಯೋಗಿರಾಜ್**

ಇಂಥ ಗ್ರಾಮಗಳ ಪರಿಚಯ ಅನನ್ಯವಾದದ್ದು, ಅಪರೂಪದ್ದು. ಈ ಮೂಲಕ ಜಗದ್ದರ್ಶನ ಮಾಡಿಸಿದ 'ಕಸ್ತೂರಿ'ಗೆ ಆಭಾರಿ.

**ಪುಣೆ** **ಜಿ.ಎಸ್. ಕುರ್ತಕೋಟಿ**

**ಅಪ್ಪಲ್ಲ-ಇಪ್ಪು**

'ಗಾಂಧಿಯನ್ನು ನಾನು ಕೊಂದೆ' ಲೇಖನವಲ್ಲಿ ನುಸುಳಿದ ತಪ್ಪನ್ನು ಸರಿಪಡಿಸಲು ಹೋದ ದೇಶಪಾಂಡೆಯವರು (ಫೆಬ್ರವರಿ ಸಂಚಿಕೆ) ಮತ್ತೆ ತಪ್ಪನ್ನೇ ಮಾಡಿದ್ದಾರೆ. ಭಾರತ ಪಾಕಿಸ್ತಾನಕ್ಕೆ ಕೊಡಬೇಕಾಗಿದ್ದ ಹಣ 55 ಕೋಟಿ ರೂಪಾಯಿಗಳು.

ಆಗಿನ ಗೃಹಮಂತ್ರಿ ಸರದಾರ ವಲ್ಲಭಭಾಯಿ ಪಟೇಲರು, ಪಾಕಿಸ್ತಾನ ಕಾಶ್ಮೀರದ ಮೇಲೆ ದಾಳಿ ಮಾಡಿದ್ದಕ್ಕೆ ಪ್ರತಿಯಾಗಿ ಅದನ್ನು ತಾತ್ಕಾಲಿಕವಾಗಿ ತಡೆಹಿಡಿದಿದ್ದರು.

**ಹೊರಬೈಲು** **ಶಂಕರನಾರಾಯಣ**

**ಅಪರೂಪದ ವ್ಯಕ್ತಿ ಚಿತ್ರ**

ರಿಚರ್ಡ್ ಹ್ಯಾಡ್ಲಿ ಜೀವನ ಸಾಧನೆಯ ಚಿತ್ರಕ್ಕಾಗಿ (ಮಾರ್ಚ್ '89) ಸಂಜೀವ ಪ್ಯಾಟಿ ಕ್ರೀಡಾಭಿಮಾನಿಗಳ ಆದರಕ್ಕೆ ಪಾತ್ರರಾಗಿದ್ದಾರೆ. ಹಾಗೆಯೇ ನಮ್ಮ ನೆಚ್ಚಿನ ಕ್ರೀಡಾ ಪತ್ರಿಕೆಯ ನಿವೃತ್ತಿಯ ಬಗೆಗಿನ 'ಗುಡ್‌ಬಾಯ್ SPORTS WEEK' ಮೂಲಕ ಆ ಪತ್ರಿಕೆ ಬೆಳೆದು ಬಂದ ಬಗೆಯನ್ನು ಪರಿಚಯಿಸಿದ 'ಕಸ್ತೂರಿ' ಕೂಡ.

**ಮೈಸೂರು** **ಕೆ. ಚಿರಂತನ**

**ದೂರ(?)ದರ್ಶನ!**

ಮಾರ್ಚ್ 89ರ ಕಸ್ತೂರಿಯಲ್ಲಿ ಪ್ರಕಟಗೊಂಡ ವಿಶ್ವನಾಥ ಕೋಳಿವಾಡರ 'ಅಮೆರಿಕದಲ್ಲಿ ದೂರದರ್ಶನ ಹಾಗೂ ಮಕ್ಕಳು' ಎಂಬ ಶೀರ್ಷಿಕೆಯ ಲೇಖನ ಎಲ್ಲ ದೇಶಗಳ ಪಾಲಕರನ್ನು ಎಚ್ಚರಿಸುವಂತಿದೆ. ಪ್ರಭಾವಶಾಲಿ ಹಾಗೂ ಶಕ್ತಿಶಾಲೀ ಮಾಧ್ಯಮವಾದ ದೂರದರ್ಶನದ ಅನೇಕ ಕಾರ್ಯಕ್ರಮಗಳು ಪುಟಾಣಿಗಳ ಕೋಮಲ ಮನಸ್ಸನ್ನು ಹೇಗೆ ಕದಡುತ್ತವೆ ಹಾಗೂ ಶರೀರದ ಮೇಲೆ ಯಾವ ರೀತಿ ದುಷ್ಪರಿಣಾಮ ಬೀರುತ್ತವೆ. ಮತ್ತು ಹಿಂಸೆ, ಕ್ರೌರ್ಯತ್ವಗಳಿಗೆ ಅವರನ್ನು ಹೇಗೆ ಪ್ರೇರೇಪಿಸುತ್ತವೆ. ಕ್ರಿಯಾತ್ಮಕ ಚಟುವಟಿಕೆಗಳನ್ನು ಮೊಟಕುಗೊಳಿಸಿ ಅವರ ಏಳಿಗೆಗೆ ಕುಠಾರಪ್ರಾಯವಾಗಿವೆ ಎಂಬೆಲ್ಲ ಕಳವಳಕಾರಿ ಅಂಶಗಳನ್ನು ಹೊರಗೆಡಹಿದೆ.

**ಬೆಂಗಳೂರು** **ಜ್ಞಾನಾನಂದ**

ಕಸ್ತೂರಿ

ವರ್ಷ: ೩೩ ಏಪ್ರಿಲ್ ೧೯೮೯ ಸಂಚಿಕೆ: ೮

# ಮೊರದ ಬಾಗಿನ

ಸಂಗ್ರಹ: ಎಚ್. ಪಾಂಡುರಂಗ ವಿಠಲ

ಹನ್ನೆರಡು ಮಕ್ಕಳಲ್ಲಿ ಏಕಮಾತ್ರ ಪುತ್ರ ನರಸಿಂಹನನ್ನು ಒಲ್ಲದ ಮನಸ್ಸಿನಿಂದ ಪೀಠಾಧಿಪತಿಗಳಾಗಿಸಲು ಒಪ್ಪಿದರು, ಮಹಾಲಕ್ಷ್ಮಿ ಅಮ್ಮನವರು. ಇಂತು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಿಗೆ ತುರೀಯಾಶ್ರಮ ಪಟ್ಟವಾದದ್ದು ಪರಿಧಾವಿ ಸಂವತ್ಸರದಲ್ಲಿ. ಆ ವರ್ಷ ಮಠದ ಪದ್ಧತಿಯ ಪ್ರಕಾರ ಸ್ವರ್ಣಗೌರೀವ್ರತಕ್ಕಾಗಿ ಸೌ. ಲಕ್ಷ್ಮೀ ಅಮ್ಮನವರಿಗೆ ಮೊರದ ಬಾಗಿನಗಳು, ಸೀರೆಗಳು, ಮಂಗಳ ದ್ರವ್ಯಗಳು ಕೊಡಲ್ಪಟ್ಟವು. ಪೀಠಾಧಿಪತಿಗಳ ತಾಯಿಯವರಾಗಿರುವ ಕಾರಣ ಇವರನ್ನು ಶ್ರೀಮಂತರೆಂದು ಭ್ರಮಿಸಿದ ಕೆಲವು ಸುವಾಸಿನಿಯರು ತಮಗೂ ಬಾಗಿನ, ಸೀರೆ ಖಣಗಳನ್ನು ಕೊಡಬೇಕೆಂದು ಪೀಡಿಸಿದರು. ತಮಗಾಗಿ ಯಾವುದೂ ಬೇಡವಾಗಿದ್ದರೂ ಬೇಡಿದ ಸುವಾಸಿನಿಯರಿಗೆ ಬಾಗಿನವನ್ನು ಕೊಡಬೇಕೆಂದು ಇಚ್ಛಿಸಿ ಅಧಿಕಾರಿಗಳಿಗೆ ಹೇಳಿಕಳಿಸಿದರು. ಆದರೆ ಅವರು ಮಾಮೂಲಿಗಿಂತಲೂ ಹೆಚ್ಚಾಗಿ ಕೊಡಲು ಸಾಧ್ಯವಿಲ್ಲವೆಂದು ಪ್ರತ್ಯುತ್ತರವನ್ನು ಕಳುಹಿಸಿದರು. ಮಾ. ಸೌ. ಲಕ್ಷ್ಮಿ ಅಮ್ಮನವರಿಗೆ ಅವಮಾನ, ದುಃಖಗಳ ಕಾರ್ಮೋಡಗಳು ಕವಿದಂತಾಗಿ ಕಣ್ಣೀರಿನ ಮಳೆಗರೆಯುವಂತಾಯಿತು. ಕಾಂತಿಹೀನರಾಗಿದ್ದರು. ಎಂದಿನಂತೆ ಮಾತೃವಂದನೆಗಾಗಿ ಬಂದ ಶ್ರೀಗಳವರು ದುಃಖಕ್ಕೆ ಕಾರಣವನ್ನು ವಿಚಾರಿಸಿ, "ಅಮ್ಮಾ ಈ ಜನ್ಮದಲ್ಲಿ ಬಡವರಾಗಿ ಹುಟ್ಟುವುದಕ್ಕೆ ಎರಡು ಕಾರಣಗಳೆಂದು ಶಾಸ್ತ್ರ, ಅನುಭವಗಳಿಂದ ತಿಳಿಯಬರುತ್ತದೆ. ಮೊದಲನೆಯದು, ದೇವರು ಅನುಕೂಲವನ್ನು ಕೊಟ್ಟಿದ್ದರೂ ಸತ್ಪಾತ್ರದಾನ ಮಾಡದೇ ಇದ್ದುದು. ಎರಡನೆಯದು, ಮಠ, ದೇವಾಲಯ ಮುಂತಾದ ಧರ್ಮವೃತ್ತಿಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡದ್ದು. ನಿಮ್ಮ ಇಂದಿನ ಬಡತನಕ್ಕೂ ಇವೆರಡರಲ್ಲಿ ಒಂದು ಕಾರಣವಿರಬಹುದೆಂದು ಊಹಿಸಬಹುದು. ಈಗ ಪದ್ಧತಿಯಂತೆ ಶ್ರೀ ಮಠದಿಂದ ಕಳುಹಿಸಿರುವುದನ್ನು ಸ್ವೀಕರಿಸುವುದೇ ಅಪರಾಧವಾಗಿರುವಾಗ, ಅದಕ್ಕಿಂತ ಹೆಚ್ಚಾಗಿ ಅಪೇಕ್ಷಿಸುವುದು ಎಲ್ಲ ದೃಷ್ಟಿಯಿಂದಲೂ ಮಹಾಪರಾಧ, ದುರಾಸೆ, ಪ್ರತಿಷ್ಠೆ. ನಾವು ಜಗದ್ಗುರು ಪೀಠದಲ್ಲಿ ಕುಳಿತಿರುವುದರಿಂದ ಶ್ರೀಮಠವೂ ಇದರ ಸರ್ವಸ್ವವೂ ನಮ್ಮದೆಂದು ತಪ್ಪಾಗಿ ತಿಳಿದು ಜನರು ನಿಮ್ಮನ್ನು

ಶ್ರೀಮಂತರೆಂದು ಭಾವಿಸಿಬಿಟ್ಟಿದ್ದಾರೆ. ಅವರು ತಪ್ಪಾಗಿ ತಿಳಿದರೂ ನೀವು ಹಾಗೆ ತಿಳಿಯಬಾರದು. ಬಡವರೆಂದೇ ಭಾವಿಸುತ್ತಿರಬೇಕು. ನಮ್ಮ ಹಿರಿಯರ ಕಾಲದಿಂದಲೂ ನಿಮಗೆ ಪ್ರತಿ ತಿಂಗಳೂ ಬರುತ್ತಿರುವ ಎಂಟು ರೂಪಾಯಿಗಳಲ್ಲೇ ನೀವು ತೃಪ್ತರಾಗಿರಬೇಕು. ಈ ಮಠದ ಸರ್ವಸ್ವವೂ ಜಗದ್ಗುರು ಸಂಸ್ಥಾನದ್ದು, ಇದರಲ್ಲಿ ನಮಗೆ ಯಾವ ಹಕ್ಕೂ ಇಲ್ಲ. ಹಡಗು ನೀರಿನಲ್ಲಿ ನೂರು ವರ್ಷಗಳು ಬೇಕಾದರೂ ಇರಬಹುದು. ಆದರೆ ನೀರು ಹಡಗಿನೊಳಕ್ಕೆ ಬರಬಾರದು. ಹಾಗೆಯೇ ಯಾರು ಬೇಕಾದರೂ ಶ್ರೀಮಂತಿಕೆಯ ಮಧ್ಯದಲ್ಲಿರಬಹುದು, ತಾವು ಶ್ರೀಮಂತರೆಂಬ ಮಮಕಾರವು ಮನಸ್ಸಿನೊಳಗೆ ಬರಬಾರದು.

"ಬೇಡಮ್ಮ, ಬೇಡಿ. ಖಂಡಿತವಾಗಿಯೂ ಹೆಚ್ಚು ಅಪೇಕ್ಷಿಸಬೇಡಿ. ಪೂಜ್ಯಪಾದ ಶಂಕರ ಭಗವತ್ಪಾದರ ದಕ್ಷಿಣಾಮ್ನಾಯ ಪೀಠಕ್ಕೆ ನಿಮ್ಮ ಜೀವನದ ಸರ್ವಸ್ವವಾದ ಏಕಮಾತ್ರ ಪುತ್ರನನ್ನೇ ದಾನಮಾಡಿರುವ ನಿಮಗೆ ಮೋಕ್ಷವನ್ನೀಯಲು ಶಂಕರನು ಕೈಲಾಸದ ಬಾಗಿಲಲ್ಲಿ ನಿಂತು ಕೈ ನೀಡಿ ಕರೆಯುತ್ತಿರುವಾಗ ಅದಕ್ಕಿಂತಲೂ ಹೆಚ್ಚು ಭಾಗ್ಯವು ಈ ಮೊರದ ಬಾಗಿನದಿಂದ ದೊರೆಯುವುದೇ? ಯೋಚಿಸಿ. ಊಟ ಮಾಡುವಾಗ ಸೇರಕ್ಕಿಯ ಅನ್ನವನ್ನು ಉಂಡರೂ ಯಾರೂ ಆಕ್ಷೇಪಿಸುವುದಿಲ್ಲ. ಮನೆಯಲ್ಲಿನ ಮಗುವಿಗೆಂದು ಒಂದು ತುತ್ತು ಅನ್ನವನ್ನು ಗಂಟು ಕಟ್ಟಿದರೂ ಅವನನ್ನು ಕಳ್ಳನೆನ್ನುತ್ತಾರೆ. ತಾನಾಗಿ ಮನೆಯ ಬಾಗಿಲಿಗೆ ಬಂದಿರುವುದು ನಮ್ಮದು ಈಶ್ವರದತ್ತವಾದುದು. ನಾವು ದುರಾಸೆಯಿಂದ ಇತರರನ್ನು ಪೀಡಿಸಿ, ಅನ್ಯಾಯ ಮಾಡಿ, ಮೋಸ ಮಾಡಿ, ಸಂಪಾದಿಸುವುದು ಮುಂದಿನ ಜನ್ಮಕ್ಕೆ ದುಃಖ, ದಾರಿದ್ರ್ಯಗಳ ಗಂಟು" ಎಂದು ಸಮಾಧಾನಪಡಿಸಿದರು.

(ಗಮಕಿ ರಾಮಕೃಷ್ಣ ಶಾಸ್ತ್ರಿಗಳ 'ಶ್ರೀ ಶೃಂಗಗಿರಿ ಮಹಾತಪಸ್ವಿ' ಗ್ರಂಥದಿಂದ ಆಯ್ದುದು.)

# ಅರ್ಜುನ – ಅಶ್ವತ್ಥಾಮ

ಮಹಾಭಾರತದಲ್ಲಿಯ ಒಂದು ಪ್ರಸಂಗ ಹೀಗಿದೆ. ಹದಿನೆಂಟು ದಿನ ಕುರುಪಾಂಡವರು ಕುರುಕ್ಷೇತ್ರದಲ್ಲಿ ಯುದ್ಧ ಮಾಡಿದರು. ಕೊನೆಯ ದಿನ ವೈಶಂಪಾಯನ ಸರೋವರದ ತೀರದಲ್ಲಿ ಭೀಮಸೇನ ದುರ್ಯೋಧನರ ನಡುವೆ ಘನಘೋರ ಯುದ್ಧ ನಡೆಯಿತು. ಭೀಮನ ಗದಾಘಾತಕ್ಕೆ ದುರ್ಯೋಧನನು ಧರಾಶಾಯಿಯಾದ. ಅಂದು ರಾತ್ರಿ ಶ್ರೀ ಕೃಷ್ಣ ಪಾಂಡವರು ಹಾಗೂ ದ್ರೌಪದಿಯೊಂದಿಗೆ ಶಿಬಿರದಿಂದ ದೂರ ಹೋಗಿ ವಿಶ್ರಮಿಸಿದನು. ಅದೇ ರಾತ್ರಿ ಕಳ್ಳತನದಿಂದ ಪಾಂಡವರ ಶಿಬಿರವನ್ನು ಪ್ರವೇಶಿಸಿ ಪಾಂಡವ ಸೈನಿಕರು, ಸೇನಾನಿಗಳನ್ನು ಹಾಗೂ ಉಪಪಾಂಡವರನ್ನು ಅಶ್ವತ್ಥಾಮನು ಕೊಲೆ ಮಾಡಿದನು. ಮರುದಿನ ಬೆಳಿಗ್ಗೆ ಪಾಂಡವರು ಶಿಬಿರಕ್ಕೆ ಬಂದಾಗ ಇದೆಲ್ಲ ತಿಳಿಯಿತು. ಅವರು ಅಶ್ವತ್ಥಾಮನನ್ನು ಹುಡುಕುತ್ತಾ ಹೊರಟರು. ಅವನು ಕಾಣಿಸುತ್ತಲೇ ಅರ್ಜುನನು ಬಾಣ ಹೂಡಿದ. ಅಶ್ವತ್ಥಾಮ ಅರ್ಜುನರ ನಡುವೆ ಭೀಕರ ಹೋರಾಟ ನಡೆಯಿತು. ಅಶ್ವತ್ಥಾಮನು ಎಲ್ಲ ಅಸ್ತ್ರಗಳನ್ನು ಪ್ರಯೋಗಿಸಿ ಅರ್ಜುನನ್ನು ಸೋಲಿಸಲಾರದೆ ಕೊನೆಗೆ ಭಯಂಕರವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಅರ್ಜುನನೂ ನಿರುಪಾಯನಾಗಿ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದಾಗ ಈ ಎರಡೂ ಘೋರ ಅಸ್ತ್ರಗಳ ತಿಕ್ಕಾಟದಿಂದ ಪ್ರಪಂಚಕ್ಕೆ ಕ್ಷೋಭೆಯುಂಟಾಯಿತು. ಇದನ್ನು ನಿಲ್ಲಿಸಲು ಶ್ರೀ ವೇದವ್ಯಾಸರು ಈ ಅಸ್ತ್ರವನ್ನು ಹಿಂತೆಗೆದುಕೊಳ್ಳಲು ಇಬ್ಬರಿಗೂ ಆದೇಶ ನೀಡಿದರು. ಅರ್ಜುನನು ತನ್ನ ಅಸ್ತ್ರವನ್ನು ಸುಲಭವಾಗಿ ಉಪಸಂಹಾರ ಮಾಡಿದನು. ಆದರೆ ನೈತಿಕ ಬಲವನ್ನು ಕಳೆದುಕೊಂಡ ಅಶ್ವತ್ಥಾಮನಿಗೆ ಇದು ಸಾಧ್ಯವಾಗದೆ ಅಪಹಾಸಕ್ಕೆ ಗುರಿಯಾದನು. ನಾವೂ ಇದೇ ಸ್ಥಿತಿಯಲ್ಲಿ ಇದ್ದೇವೆ. ಇಂದ್ರಿಯಗಳನ್ನು ವಿಷಯಗಳ ಕಡೆಗೆ ಓಡಿಸುವುದು ದೊಡ್ಡದಲ್ಲ. ಅವುಗಳನ್ನು ನಮಗೆ ಬೇಕೆನಿಸಿದಾಗ ಹಿಂತಿರುಗಿಸುವುದರಲ್ಲೇ ನಮ್ಮ ಜೀವನದ ಯಶಸ್ಸು ಅಡಗಿದೆ. ನಮಗೆ ಇಂದ್ರಿಯಗಳ ಮೇಲೆ ಇಂತಹ ಪ್ರಭುತ್ವ ಇಲ್ಲದಿರುವುದರಿಂದ ಅಶ್ವತ್ಥಾಮನ ಕೈಯಲ್ಲಿ ಸಿಕ್ಕ ಬ್ರಹ್ಮಾಸ್ತ್ರದಂತೆ ನಮ್ಮ ಇಂದ್ರಿಯಗಳ ಪ್ರವೃತ್ತಿಯು ಆಗಿರುವುದು. ನಾವು ಅದರ ಮೇಲೆ ಅಧಿಕಾರ ನಡೆಸುವ ಬದಲು ಅದೇ ನಮ್ಮ ಮೇಲೆ ಅಧಿಕಾರ ನಡೆಸುತ್ತದೆ. ಇಂದ್ರಿಯಗಳ ಒಡೆಯರಾಗಬೇಕಾದವರು ಅವುಗಳ ಗುಲಾಮರಾಗುತ್ತೇವೆ.

– ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳು
(ಅವರು ಬರೆದ 'ಗೀತಾಸಾರೋದ್ಧಾರ'ದಿಂದ)



# ಕಂಚಿನಲ್ಲಿ ಮಿಂಚಿದ ಕಲೆ

— ಪ್ರಹ್ಲಾದ —

ದೇವದೇವತೆಗಳನ್ನು ಮಾನವಾಕಾರದಲ್ಲಿ ಕಲ್ಪಿಸಿದ ಮನುಷ್ಯ ಅವರನ್ನು ಕಲ್ಲು, ಕಟ್ಟಿಗೆ, ಲೋಹಗಳನ್ನು ಕಂಡರಿಸಲು ಆಗಿನಿಂದಲೇ ಪ್ರಯತ್ನಿಸಿದ. ಈ ಮೂರ್ತಿ ಶಿಲ್ಪವು ಭಾರತದಲ್ಲಿ ತುಂಬ ಪ್ರಾಚೀನವಾದ ಕಲೆ. ದೇಶದ ಮೂಲೆ ಮೂಲೆಯಲ್ಲೂ ಇರುವ ಗುಡಿ ಗೋಪುರಗಳು ಈ ಕಲೆಯ ವೈಭವವನ್ನು ಇಂದಿಗೂ ಮೆರೆಯುತ್ತಿರುವುದೇ ಇದಕ್ಕೆ ಸಾಕ್ಷಿ. ಕಂಚಿನ ಪ್ರತಿಮೆಗಳನ್ನು ನಿರ್ಮಿಸುವಲ್ಲಿ ತಮಿಳುನಾಡು ಎಂದಿನಿಂದಲೂ ಪ್ರಸಿದ್ಧ. ಕಂಚಿನ ಎರಕದ ಪ್ರತಿಮೆಗಳನ್ನು ಮಾಡುವ ಕಲೆ ಚೋಳರ ಕಾಲದಲ್ಲಿ ಪರಾಕಾಷ್ಠೆಯನ್ನು ತಲುಪಿತ್ತು. ಪಲ್ಲವರ ಶಿಲ್ಪಗಳಿಗಿಂತ ಹೆಚ್ಚು ಪರಿಣಾಮಕಾರಿ ಹಾಗೂ ಪ್ರಭಾವಿಯಾಗಿ ಇವು ಭಾವನೆಗಳ ಅಭಿವ್ಯಕ್ತಿಯನ್ನು ನೀಡುವಲ್ಲೂ ಯಶಸ್ವಿಯಾದವು. ಎಲ್ಲ ರಸಭಾವನೆಗಳನ್ನು ನಟರಾಜನ ಶಿಲ್ಪದಲ್ಲಿ, ಶ್ರೀ ಕೃಷ್ಣನ ಪ್ರತಿಮೆಗಳಲ್ಲಿ ಗಣೇಶನ ವಿಗ್ರಹಗಳಲ್ಲಿ ಗುರುತಿಸಬಹುದಾಗಿದೆ. ಈ ಪ್ರತಿಮೆಗಳ ಪ್ರಮಾಣಬದ್ಧ ಆಕಾರ, ಮುಖ ಅಂಗಾಂಗಗಳಲ್ಲಿಯ ರಸಭಾವ ಮೊದಲಾದವು ಯಾರನ್ನೂ ಮುಗ್ಧಗೊಳಿಸು ತ್ತವೆ, ಮುದಗೊಳಿಸುತ್ತವೆ.

ತಮಿಳುನಾಡಿನಲ್ಲಿ ಕಂಚಿನ ಪ್ರತಿಮೆ ಮಾಡುವುದು ಪ್ರಾರಂಭವಾದದ್ದು ಬೌದ್ಧರಿಂದ. ಅವರು ಚಿಕ್ಕ ಚಿಕ್ಕ ಪ್ರತಿಮೆಗಳನ್ನು ತಮ್ಮ ಪೂಜೆಗೆಂದು ನಿರ್ಮಿಸುತ್ತಿದ್ದರು. ತಮಿಳು ಶಿಲ್ಪಿಯು ಈ ಕಂಚಿನ ಮೂರ್ತಿಗಳನ್ನು ಮಾಡುವ ಕಲೆಯನ್ನು ತನ್ನದಾಗಿಸಿಕೊಂಡ. ಕ್ರಿ.ಶ. 7ನೇ ಶತಮಾನದಿಂದ 12ನೇ ಶತಮಾನದವರೆಗೆ ಈ ಕಲೆಯು ಉತ್ಕರ್ಷವನ್ನು ಹೊಂದಿತ್ತಲ್ಲದೆ



ಪರಿಪೂರ್ಣತೆಯನ್ನು ಸಾಧಿಸಿತು. ಈ ಪ್ರತಿಮೆಗಳು ಕಲಾವಿಶ್ವದಲ್ಲಿ ಉನ್ನತ ಸ್ಥಾನ ಪಡೆದವು.

ತಮಿಳುನಾಡಿನ ಈ ಪ್ರತಿಮೆಗಳು ಕೇವಲ ಕಲಾಕೃತಿಗಳಾಗಿಲ್ಲ. ಅವಕ್ಕೆ ಧಾರ್ಮಿಕ ಪ್ರಾಶಸ್ತ್ಯ ಹಾಗೂ ಸ್ವರೂಪ ದೊರೆತಿವೆ. ಎರಡನೇ ರಾಜಸಿಂಹ ನರಸಿಂಹ, ರಾಣಿ ಸೆಂಬಿಯನ್ ಮಹಾ ದೇವಿ ಮೊದಲನೇ ರಾಜ ರಾಜ ಚೋಳ ಹಾಗೂ ಅವನ ಮಗ ರಾಜೇಂದ್ರ ಚೋಳ ಮೊದಲಾದ ಪಲ್ಲವ ಮತ್ತು ಚೋಳ ಅರಸರು ಅನೇಕ ಕಂಚಿನ ಪ್ರತಿಮೆಗಳನ್ನು ಮಾಡಿಸಿ ದೇವಾಲಯಗಳಿಗೆ ಅರ್ಪಿಸಿದರು. ಇಂದಿಗೂ ಆ ಪ್ರತಿಮೆಗಳು ದೇವಾಲಯಗಳಲ್ಲಿ ಸಾವಿರಾರು ಜನರಿಂದ ಪೂಜಿತವಾಗುತ್ತಿದ್ದು ಶಾಂತ ಸೌಂದರ್ಯವನ್ನು ಬೀರುತ್ತ ಆಸ್ತಿಕರಿಗೆ ಶಾಂತಿ ಸಮಾಧಾನವನ್ನು ನೀಡುತ್ತಿವೆ. ಲೋಹಗಳನ್ನು ಮೂರ್ತಿಗಳನ್ನಾಗಿ ಮಾಡುವ ಈ ಕೌಶಲ್ಯವು ಪಲ್ಲವ ಹಾಗೂ ಚೋಳ ಅರಸರೊಂದಿಗೆ ಮರೆಯಾಗ

ಲಿಲ್ಲ. ಅದಿನ್ನೂ ಜೀವಂತವಿದೆ ಹಾಗೂ ಚುರುಕಾಗಿದೆ. ಸ್ವಾಮಿಮಲೈ ಮತ್ತು ಇತರೆಡೆಗಳಲ್ಲಿ ಇಂದಿಗೂ ಸ್ಥಪತಿಗಳು ಆಗಮೋಕ್ತ ರೀತಿಯಲ್ಲಿ ಪ್ರತಿಮೆಗಳನ್ನು ಮಾಡುತ್ತಿರುವರು. ತಾಮ್ರ/ ತವರು, ಬಂಗಾರ, ಬೆಳ್ಳಿ ಮತ್ತು ಕಬ್ಬಿಣಗಳ ಮಿಶ್ರಣ- ಪಂಚಲೋಹ-ದಿಂದ ಪ್ರತಿಮೆಗಳನ್ನವರು ತಯಾರಿಸುತ್ತಿರುವರು. ಪೂಜೆಗೆಂದು ತಯಾರಾಗುವ ಮೂರ್ತಿಗಳ ಪಾದತಲದಲ್ಲಿ ನವರತ್ನಗಳನ್ನು ಕೂಡಿಸಿರುತ್ತಾರೆ. ಆದರೆ ಇಂದು ಪ್ರತಿಮೆಗಳು ಕೇವಲ ಪೂಜೆಗಾಗಿ ಮಾತ್ರ ತಯಾರಾಗುತ್ತಿಲ್ಲ. ಜಗತ್ತಿನೆಲ್ಲೆಡೆ ಅವನ್ನು ಕಲಾಕೃತಿಯೆಂದೂ ಸಂಗ್ರಹಿಸುತ್ತಾರೆ.

ಮಿಶ್ರಲೋಹದ ಈ ಪ್ರತಿಮೆಗಳನ್ನು ಮೇಣದಿಂದ ತಯಾರಿಸಿದ ಅಚ್ಚಿನಲ್ಲಿ ಎರಕ ಹೊಯ್ಯುವದು ಬಹು ಪ್ರಾಚೀನ ಕಾಲದಿಂದ ಬಂದ ವಿಧಾನ. ಈಗಲೂ ಭಾರತದೆಲ್ಲೆಡೆ ಈ ವಿಧಾನವನ್ನು ಅನುಸರಿಸುತ್ತಿರುವವರು. ಉತ್ತರ ಭಾರತದ ಕಂಚಿನ ಪ್ರತಿಮೆಗಳು ಪೊಳ್ಳಾಗಿದ್ದರೆ ತಮಿಳುನಾಡಿನ ಪ್ರತಿಮೆಗಳು ಘನಾಕಾರವಾಗಿದ್ದು ಬಹಳಷ್ಟು ಭಾರವಾಗಿರುವವು.

ಇಷ್ಟು ಭಾರ ಅವಕ್ಕೆ ಅವಶ್ಯವಿದೆ. ದಕ್ಷಿಣ ಭಾರತದ ದೇವಾಲಯಗಳಲ್ಲಿಯ ಪ್ರಧಾನ ದೇವದೇವತೆಗಳ ಮೂರ್ತಿಗಳು ಸಾಮಾನ್ಯವಾಗಿ ಶಿಲೆ ಅಥವಾ ಕಟ್ಟಿಗೆಯಲ್ಲಿ ಕೆತ್ತಿದವವಾಗಿರುತ್ತವೆ. ಅಲ್ಲದೆ ಒಂದೆಡೆ ಶಾಶ್ವತವಾಗಿ ಪ್ರತಿಷ್ಠಾಪಿತವಾಗಿರುತ್ತವೆ. ದೇವದೇವತೆಗಳ ಉತ್ಸವ ಮೂರ್ತಿಗಳನ್ನು ಜಾತ್ರೆ ಹಬ್ಬ ಉತ್ಸವಗಳಂದು ಮೆರವಣಿಗೆಯಲ್ಲಿ ಜನರು ಕರೆದೊಯ್ಯುತ್ತಾರೆ. ಈ ಉತ್ಸವ ಮೂರ್ತಿಗಳು ಭಾರವಾಗಿರುವುದರಿಂದ ಕೂಡಲೇ ಕೆಳಗುರುಳುವುದಿಲ್ಲ. ತಮಿಳುನಾಡಿನ ವಿಗ್ರಹಗಳು ಪೊಳ್ಳಾಗಿರದೆ ಗಟ್ಟಿಯಾಗಿದ್ದು ಮೇಣದ ಅಚ್ಚಿನಲ್ಲಿ ಎರಕ ಹಾಕಿ ತಯಾರಿಸಿದ್ದಾಗಿರುತ್ತವೆ. ಮೇಣದ ಅಚ್ಚನ್ನು ತುಂಬ ಜಾಗರೂಕತೆಯಿಂದ ತಯಾರಿಸಿರುತ್ತಾರೆ. ಮಣ್ಣು, ಹೊಟ್ಟು, ಅರಳೆ, ಉಪ್ಪು ಮೊದಲಾದವುಗಳನ್ನು ಈ ಅಚ್ಚಿಗೆ ಲೇಪಿಸಿರುತ್ತಾರೆ. ಕರಗಿದ ಮಿಶ್ರಲೋಹದ ರಸವನ್ನು ಅಚ್ಚಿನಲ್ಲಿ ಸುರುವುತ್ತಲೇ ಮೇಣದ ಅಚ್ಚು ನಿಧಾನವಾಗಿ ಕರಗತೊಡಗುತ್ತದೆ. ಅನಂತರ ಮಣ್ಣಿನ ಹೊದಿಕೆಯನ್ನು ಒಡೆದು ಎರಕದಿಂದ ಕಂಚಿನ ವಿಗ್ರಹವನ್ನು ಹೊರದೆಗೆಯುವರು. ಆಗ ಎರಕ ಹೊಯ್ದ ವಿಗ್ರಹವು ಒರಟೊರಟಾಗಿರುವುದು. ಅದನ್ನು ಉಳಿಯಿಂದ ಕೆತ್ತಿ, ತಿಕ್ಕಿ, ಚಾಣದಿಂದ ಎಡಿದು ಸುಂದರಗೊಳಿಸುವರು. ಮೂರ್ತಿಗೆ ಮೆರುಗು ಬಂದು ಆಕರ್ಷಣೆಯುಂಟಾಗುವುದು.

ಕಂಚಿನ ಪ್ರತಿಮೆಗಳನ್ನು ಮಾಡುವುದು ಇಂದಿಗೂ ತಮಿಳುನಾಡಿನ ವೈಶಿಷ್ಟ್ಯ. ಅದು ಹಿಂದಿನಂತೆ ಈಗಲೂ ಅಲ್ಲಿಯ ಸಂಸ್ಕೃತಿಯ ಒಂದಂಗವಾಗಿದೆ. "ಅಗ್ನಿಯಿಂದ ಕರಗಿದ ಲೋಹವನ್ನು ಅಚ್ಚಿನಲ್ಲಿ ಸುರುವಿದಾಗ ಅದು ರೂಪವನ್ನು ತಳೆಯುತ್ತದೆ. ಅದೇ ರೀತಿ ಮನಸ್ಸು ತಾನು ಧ್ಯಾನಿಸುವ ಹಾಗೂ ಚೆನ್ನಾಗಿ ಅರಿತ ವಸ್ತುವಿನ ರೂಪವನ್ನು ತಳೆಯುತ್ತದೆ" ಎಂದು ಶ್ರೀ ಶಂಕರಾಚಾರ್ಯರು ಮನಸ್ಸನ್ನು ಕಂಚಿಗೆ ಹೋಲಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ತಮಿಳುನಾಡು ಕರಕುಶಲ ಅಭಿವೃದ್ಧಿ ನಿಗಮವು ರಾಜ್ಯದಲ್ಲಿ ಹದಿನಾಲ್ಕು ಉತ್ಪಾದನಾ ಕೇಂದ್ರಗಳನ್ನು ಸ್ಥಾಪಿಸಿ ಈ ಕಲೆಯ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದೆ. ಇಲ್ಲಿಯ ಕಲಾವಿದರು ತಯಾರಿಸುವ ಕಲಾಕೃತಿಗಳನ್ನು ನಿಗಮವು ಮಾರಾಟ ಮಾಡುವುದು. ಈ ಕೇಂದ್ರಗಳಲ್ಲಿ ಕಲಾವಿದರು, ಬೆಳ್ಳಿ, ಬಂಗಾರ, ದಂತ, ಹಿತ್ತಾಳೆ, ರೇಷ್ಮೆ ಕಂಚುಗಳಲ್ಲಿ ಬೇರೆ ಬೇರೆ ವಸ್ತುಗಳನ್ನು ತಯಾರಿಸುವರು. ಅವರಲ್ಲಿ ಬಹಳಷ್ಟು ಜನರು ತಮ್ಮ ಹಿರಿಯರು ಅಜ್ಜ ಮುತ್ತಾತರು ಉಪಯೋಗಿಸಿದ ವಿಧಾನವನ್ನೇ ಅನುಸರಿಸುತ್ತಾರೆ. ನಿಗಮವು, ಅವರಿಗೆ ಜೀವನೋಪಾಯ ಕಲ್ಪಿಸಿ ಕಲೆಯು ಪ್ರಗತಿ ಹೊಂದುವಂತೆ ಪ್ರಯತ್ನಿಸುತ್ತಿರುವುದು. 'ಪೂಮ ಪುಹಾರ' ಹೆಸರಿನಲ್ಲಿ ಇದರ ಮಾರಾಟ ಮಳಿಗೆಗಳು ಇಂತಹ ಕುಶಲವಸ್ತುಗಳನ್ನು ತಮಿಳು ನಾಡಿನ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಮಾರಾಟ ಮಾಡುತ್ತಿವೆ. ●

(ಚಿತ್ರಗಳು: ತಮಿಳುನಾಡು ಕರಕುಶಲಾಭಿವೃದ್ಧಿ ನಿಗಮದ ಕೃಪೆ)

# ಎಚ್.ಎಮ್. ಶಂಕರ



ಪುಸ್ತಕ ಪ್ರಕಾಶನ ನಮ್ಮಲ್ಲಿ ಇಂದಿಗೂ ಒಂದು ಲಾಭದಾಯಕ ಉದ್ಯಮವಾಗಿ ಬೆಳೆ ದಿಲ್ಲ. ಕೊಂಡು ಓದುವ ಓದುಗರ ಸಂಖ್ಯೆ ಕಡಿಮೆ ಇರುವ ಕನ್ನಡದಲ್ಲಂತೂ ಈ ಉದ್ಯಮ ಇನ್ನೂ ಶೈಶವಾವಸ್ಥೆಯಲ್ಲೇ ಇದೆ. ಅಂತೆಯೇ ಉತ್ಸಾಹದಿಂದ ಈ ಉದ್ಯಮಕ್ಕೆ ಧುಮುಕಿ ಕೈ ಸುಟ್ಟುಕೊಂಡವರೆಷ್ಟು ಮಂದಿಯೋ! ಗುಣಮಟ್ಟದಲ್ಲಿ ಎಂದಿಗೂ ರಾಜಿ ಮಾಡಿಕೊಳ್ಳದೆಯೂ, ಪ್ರಕಟಣ ಪ್ರಪಂಚದ ಸಂಕಷ್ಟ

ಗಳನ್ನು, ಪೈಪೋಟಿಗಳನ್ನು ಎದುರಿಸಿ ಗೆಲುವು ಪಡೆದ ಪ್ರಕಾಶಕರ ಸಂಖ್ಯೆಯಂತೂ ಇಲ್ಲಿ ಬೆರಳೆಣಿಕೆಯಷ್ಟು ಮಾತ್ರ. ಈ ಬಗೆಯ ಬೆರಳೆಣಿಕೆಯ ಭಾಗ್ಯವಂತರ ಸಾಲಿನಲ್ಲಿ ಸೇರುವ ಹೆಸರು ಕನ್ನಡ ಕವಿಕಾವ್ಯಮಾಲೆಯ ಎಚ್.ಎಂ. ಶಂಕರ ನಾರಾಯಣರಾಯರದು.

ಎಚ್.ಎಂ. ಶಂಕರನಾರಾಯಣರಾವ್ ಬಹುಶಃ ಅನೇಕ ಓದುಗರಿಗೆ ಅಪರಿಚಿತವಾದ ಹೆಸರು. ಆದರೆ ಅವರ 'ಕನ್ನಡ ಕವಿಕಾವ್ಯ ಮಾಲೆ'ಯಲ್ಲಿ ಪ್ರಕಟವಾದ ಉದ್ಗ್ರಂಥಗಳ ಪರಿಚಯವಿಲ್ಲದ ಕನ್ನಡಿಗನಿರಲಿಕ್ಕಿಲ್ಲ. ಬಿ.ಎಂ.ಶ್ರೀ, ಎ.ಆರ್. ಕೃಷ್ಣಶಾಸ್ತ್ರಿ, ತೀ.ನಂ.ಶ್ರೀ, ಕೆ. ವೆಂಕಟರಾಮಪ್ಪ, ಎಸ್.ವಿ. ಪರಮೇಶ್ವರಭಟ್ಟ, ಕುವೆಂಪು, ಪು.ತಿ.ನ, ಜಿ.ಎಸ್. ಶಿವರುದ್ರಪ್ಪ, ಗುಂಡ್ಮಿ ಚಂದ್ರಶೇಖರ ಐತಾಳ, ಶ್ರೀರಂಗ, ಅಶ್ವತ್ಥ, ಗೊರೂರು, ಹಾಮಾನಾ, ಎ.ಎನ್. ಮೂರ್ತಿರಾವ್, ಎಸ್.ವಿ. ರಂಗಣ್ಣ, ಡಿ.ಎಲ್. ನರಸಿಂಹಾಚಾರ್, ಇತ್ಯಾದಿ ಕನ್ನಡದ ಖ್ಯಾತನಾಮರೆಲ್ಲರ ಗ್ರಂಥಗಳೂ ಈ ಮಾಲೆಯಲ್ಲಿ ಬೆಳಕು ಕಂಡು, ಕನ್ನಡಿಗರ ಮನೆಗಳಲ್ಲಿ ಶೋಭಿಸಿವೆ.

ಕನ್ನಡ ಕವಿಕಾವ್ಯಮಾಲೆಗೆ ಈಗ ನಲವತ್ತೈದು ವರ್ಷಗಳ ನಡುಹರೆಯ. ಇಷ್ಟೊಂದು ದೀರ್ಘಕಾಲ ನಿರಂತರವಾಗಿ ನಡೆದು ಬಂದ ಕೆಲವೇ ಸಂಸ್ಥೆಗಳಲ್ಲಿ ಇದೊಂದು. ಈ ಮಾಲೆ

> "ನೀವು ಸಾಹಿತ್ಯಕ್ಕೆ ಮಾಡಿರುವ ಉಪಕಾರ ಕೊಂಚದ್ದಲ್ಲ. 'ಕಾವ್ಯಪ್ರಕಾಶ'ದಂಥ ಸಂಸ್ಕೃತದ ಪ್ರಮಾಣಗ್ರಂಥಗಳನ್ನು, ಡಾ|| ಕೃಷ್ಣಮೂರ್ತಿಯವರಂಥ ಪ್ರಾಮಾಣಿಕರಾದ ವಿದ್ವಾಂಸರಿಂದ ಕನ್ನಡಕ್ಕೆ ಮಾಡಿಸಿ, ಇಷ್ಟು ಅಂದವಾಗಿ ಪ್ರಕಟಿಸಿರುವುದು ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಒಂದು ಭಾಗ್ಯ." ಡಿ.ವಿ.ಜಿ.

ಲೇಖನವನ್ನು ಪ್ರಕಟಿಸಬೇಕೆಂಬ ಕಾತರ ಅವರನ್ನು ಕಾಡುತ್ತಿತ್ತು. ಆದರೆ ಅದನ್ನು ಪ್ರಕಟಿಸುವವರು ಯಾರು?

ಕೊನೆಗೆ ಯುವ ಪ್ರಾಧ್ಯಾಪಕ ಶಂಕರ ನಾರಾಯಣರಾಯರು ತಮ್ಮ ಬರಹವನ್ನು ತಾವೇ ಪ್ರಕಟಿಸಲು ನಿಶ್ಚಯಿಸಿದರು. ತಮ್ಮ ಈ ಪ್ರಕಾಶನಕ್ಕೊಂದು ಹೆಸರಿದ್ದರೆ ಚೆನ್ನ. ಕೃತಿ ಒಬ್ಬ ಕನ್ನಡ ಕವಿಯನ್ನು, ಅವನ ಕಾವ್ಯಗಳನ್ನು ಕುರಿತದ್ದು. ಸರಿ, 'ಕನ್ನಡ ಕವಿಕಾವ್ಯಮಾಲೆ' ಎಂದೇಕೆ ಪ್ರಕಾಶನವನ್ನು ಹೆಸರಿಸಬಾರದು ಎಂದು ಅವರು ಯೋಚಿಸಿದರು. ಕನ್ನಡ ಕವಿ ಕಾವ್ಯಮಾಲೆ ಹುಟ್ಟಿದ್ದು ಹೀಗೆ. (-ಬೆಳ್ಳಿ ಶಾರದೆ)

ಕನ್ನಡ ಕವಿಕಾವ್ಯಮಾಲೆಯ ಮೂಲಾಕಾರ ಹುಟ್ಟಿದ್ದು ಹರಿಹರದಲ್ಲಿ. ತಂದೆ ಹರಿಹರ ದೇಗುಲದ ಅರ್ಚಕರು. ಅವರೇ ಶಂಕರ ನಾರಾಯಣನ ಮೊದಲ ವಿದ್ಯಾಗುರು. ಅನಂತರ ಬೆಂಗಳೂರಿನ ಕೋಟೆ ಹೈಸ್ಕೂಲಿ

# ನಾರಾಯಣರಾವ್

ವಿಶ್ವಾಸ

ಆರಂಭವಾದ ಬಗೆಗೆ ಹಾಮಾನಾ ಈ ರೀತಿ ಬರೆಯುತ್ತಾರೆ.

"1944ರಲ್ಲಿ ಎಚ್.ಎಂ.ಶಂಕರನಾರಾಯಣ ರಾಯರು ಆಗಷ್ಟೇ ಅಧ್ಯಾಪಕ ವೃತ್ತಿಯನ್ನು ಪ್ರವೇಶಿಸುತ್ತಿದ್ದರು. ಹೊಸ ಹರೆಯ, ಹೊಸ ಹುಮ್ಮಸ್ಸು. ಅವರ ಪ್ರಿಯ ಕವಿ ರಾಘವಾಂಕ. ಅವನನ್ನು, ಅವನ ಕಾವ್ಯಗಳನ್ನು ಕುರಿತು ಅವರೊಂದು ವಿಮರ್ಶಾತ್ಮಕ ಪ್ರಬಂಧವನ್ನು ಬರೆದಿದ್ದರು. ತಕ್ಕಷ್ಟು ಉದ್ದವಾಗಿದ್ದ ಆ

ನಲ್ಲಿ ಲೋಯರ್ ಸೆಕೆಂಡರಿ ಮುಗಿಸಿ, ದಾವಣಗೆರೆಯ ಚೆನ್ನಗಿರಿ ವಿರೂಪಾಕ್ಷಪ್ಪನವರ ಛತ್ರದಲ್ಲಿದ್ದು, ಅಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿದರು. ಮತ್ತೆ ಬೆಂಗಳೂರಿನ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಓದು. ಇನ್ನಷ್ಟು ಓದುವ ಹಂಬಲದಿಂದ ಅಲ್ಲಿಂದ ಮೈಸೂರಿಗೆ ಪಯಣ. ಮೈಸೂರಿಗೆ ಬಂದಿಳಿದಾಗ ಅಂದು ಶಂಕರನಾರಾಯಣರ ಜೇಬಿನಲ್ಲಿದ್ದುದು ವಸ್ತುತಃ ನಾಲ್ಕಾಣೆ ಮಾತ್ರ! ಆದರೆ ಹಣದ

## 'ಕಥಾಮೃತ' ಹುಟ್ಟಿದ ಬಗೆ

**ಕ**ವಿಕಾವ್ಯಮಾಲೆಯ ಒಂದೊಂದು ಗ್ರಂಥದ ಹುಟ್ಟಿನ ಹಿಂದೆಯೂ ಒಂದೊಂದು ಕತೆ ಇದೆ ಎನ್ನುತ್ತಾರೆ ಎಚ್.ಎಂ.ಎಸ್.

ಅದೊಂದು ಸುಡು ಮಧ್ಯಾಹ್ನ. ಯಾವುದೋ ಕೆಲಸಕ್ಕಾಗಿ ಎಚ್.ಎಂ.ಎಸ್. ಅವರು ಎ.ಆರ್. ಕೃಷ್ಣಶಾಸ್ತ್ರಿಗಳ ಮನೆಗೆ ಹೋಗಿದ್ದರು. ಕೈಯಲ್ಲಿ ಒಂದು ದೊಡ್ಡ ಪುಸ್ತಕವಿತ್ತು. ಮಾತನಾಡುತ್ತಿದ್ದಾಗ ಕೃಷ್ಣಶಾಸ್ತ್ರಿಗಳ ದೃಷ್ಟಿ ಆ ಪುಸ್ತಕದ ಮೇಲೆ ಬಿತ್ತು. "ಅದು ಯಾವ ಪುಸ್ತಕ?" ಎಂದರು. "ಕಥಾಸರಿತ್ಸಾಗರ" ಎಂದರು ರಾಯರು. ಶಾಸ್ತ್ರಿಗಳು ಅದನ್ನು ತೆಗೆದುಕೊಂಡು ಆಸಕ್ತಿಯಿಂದ ಕೆಲವು ಪುಟಗಳನ್ನು ತಿರುವಿ ಹಾಕಿ "ಇದನ್ನು ಇಲ್ಲೇ ಇಟ್ಟು ಹೋಗು" ಎಂದರು. ಹಾಗೆಯೇ ಮಾಡಿದ ಎಚ್.ಎಂ.ಎಸ್. ಸಂಜೆ ಮತ್ತೆ ಶಾಸ್ತ್ರಿಗಳ ಮನೆಗೆ ಹೋದಾಗ ವಿಕ್ರಮಾಂಕನ ನಾಲ್ಕು ಕತೆಗಳ ಅನುವಾದ ಸಿದ್ಧವಾಗಿ ಕೂತಿತ್ತು. "ಈ ಗ್ರಂಥ ತುಂಬ ಉತ್ತಮವಾಗಿದೆ. ಅನುವಾದ ಮಾಡೋಣ" ಎಂದರು ಶಾಸ್ತ್ರಿಗಳು. ಅನುವಾದ ಕಾರ್ಯ ಆರಂಭವಾಯಿತು. ಒಂದು ವರ್ಷದೊಳಗಾಗಿ 'ಕಥಾಮೃತ' ಸಿದ್ಧವಾಯಿತು. ಕವಿಕಾವ್ಯ ಮಾಲೆಯ ಮುಖಾಂತರ ಕನ್ನಡಿಗರ ಪಾಲಿಗೆ ಅಮೂಲ್ಯ ಆಸ್ತಿಯಾಗಿ ಹೊರಬಿತ್ತು.

ಅಭಾವ, ಕಲಿಕೆಯ ಹುಮ್ಮಸ್ಸನ್ನು ಕಡಿಮೆ ಮಾಡಲಿಲ್ಲ. ಟಿ.ಎಸ್. ವೆಂಕಣ್ಣಯ್ಯ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್ ಇತ್ಯಾದಿ ಹಿರಿಯರ ಮನೆಗಳಲ್ಲಿ ವಾರಾನ್ನದ ವ್ಯವಸ್ಥೆಯಾಯ್ತು. ಜೊತೆಗೆ ವಿದ್ಯಾಭ್ಯಾಸ ಸುಗಮವಾಗಿ ಸಾಗಿತು. ಮಹಾರಾಜ ಕಾಲೇಜಿನಲ್ಲಿ ಆನರ್ಸ್ ಮುಗಿಸಿದ ಮೇಲೆ ಎಂ.ಎ. ಪದವಿಯನ್ನು ಪಡೆದಾಯ್ತು.

ಸ್ನಾತಕೋತ್ತರ ಪದವಿ ಪಡೆದರೂ ಕೂಡಲೇ ಉದ್ಯೋಗಲಕ್ಷ್ಮಿ ಒಲಿಯಲಿಲ್ಲ. ಹಾಗೂ ಹೀಗೂ ಪ್ರಯತ್ನಿಸಿದ ಮೇಲೆ ದೊರಕಿದ್ದು ಭಗಿನೀ ಸೇವಾಸಮಾಜದಲ್ಲಿ ಒಪ್ಪೊತ್ತಿನ ಕೆಲಸ. ಅಲ್ಲಿಂದಲೇ ಉದ್ಯೋಗಪರ್ವದ ಆರಂಭ. ಅಲ್ಲಿಂದ ಬನುಮಯ್ಯ ಹೈಸ್ಕೂಲಿನಲ್ಲಿ ಕೆಲವು ವರ್ಷಗಳ ಕೆಲಸ. ಶಾರದಾ ವಿಲಾಸ ಕಾಲೇಜು 1945ರಲ್ಲಿ ಆರಂಭವಾದಾಗ ಅಲ್ಲಿ ಒಪ್ಪೊತ್ತಿನ ಉಪನ್ಯಾಸಕನಾಗಿ ನಿಯುಕ್ತಿ. ಅನಂತರ ಅಲ್ಲೇ ಕನ್ನಡ ಪ್ರಾಧ್ಯಾಪಕರಾಗಿ, ವಿಭಾಗಾಧ್ಯಕ್ಷರಾಗಿ, ಕೊನೆಗೆ ಪ್ರಾಂಶುಪಾಲರಾಗಿ ಉತ್ತಮ ಮಟ್ಟದ ಸೇವೆಸಲ್ಲಿಕೆ. ಇವು ಶಂಕರನಾರಾಯಣರು ಸಾಗಿಬಂದ ಮಜಲುಗಳು.

**ಕನ್ನಡ ಕವಿಕಾವ್ಯಮಾಲೆ:–**

ಎಚ್.ಎಂ. ಶಂಕರನಾರಾಯಣರಾಯರು ಶಾರದಾ ವಿಲಾಸ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ 'ರಾಘವಾಂಕ'ದ ಮೂಲಕ ಮಾಲೆಯ ಆರಂಭವಾಯ್ತು. ಅವರದ್ದೇ ಆದ ಕೃತಿ 'ಚಂದ್ರಗುಪ್ತ ವಿಜಯ'ದ ಮೂಲಕ ಪ್ರಕಟಣಾ ಪ್ರಪಂಚದಲ್ಲಿ ಮಾಲೆ ದಿಗ್ವಿಜಯ ಆರಂಭಿಸಿತು. ತನಗೆ ಅನ್ನವಿತ್ತ, ಪಾಠ ಹೇಳಿದ ಗುರುಗಳೆಲ್ಲರ ಬಳಿಗೆ ಹೋಗಿ ಪ್ರಾರ್ಥಿಸಿ, ಕೆಲವೊಮ್ಮೆ ಅವರನ್ನು ಕಾಡಿ ಬೇಡಿಯೂ ಅವರಿಂದ ಗ್ರಂಥಗಳನ್ನು ಪಡೆದು ಪ್ರಕಟಿಸಲಾರಂಭಿಸಿದರು. ಎ.ಆರ್. ಕೃಷ್ಣಶಾಸ್ತ್ರಿ, ತೀ.ನಂ. ಶ್ರೀಕಂಠಯ್ಯ ಮೊದಲಾದವರ ಸಹಕಾರದಿಂದ ಮಾಲೆ ಸುಪುಷ್ಟವಾಗಿ ಬೆಳೆಯಿತು. ಎಸ್.ವಿ. ಪರಮೇಶ್ವರ ಭಟ್ಟರ ಕೃತಿಗಳು ಮಾಲೆಗೆ ಹೆಸರನ್ನು, ಶಂಕರನಾರಾಯಣರಿಗೆ ಹಣವನ್ನು ತಂದವು. ಪು.ತಿ.ನ. ಅವರ 'ರಸ ಸರಸ್ವತಿ', ಡಿ.ಎಲ್. ನರಸಿಂಹಾಚಾರ್ಯರ 'ಶಬ್ದ ನಿಹಾರ', 'ವಡ್ಡಾರಾಧನೆ', ತೀ.ನಂ. ಶ್ರೀ. ಅವರ 'ಒಲುಮೆ', ಎ.ಆರ್. ಕೃಷ್ಣಶಾಸ್ತ್ರಿಗಳ 'ಕಥಾಮೃತ' ಇವುಗಳು ಮಾಲೆಯ ಕೀರ್ತಿಯನ್ನು ಗಗನಕ್ಕೇರಿಸಿದವು. ಅಲ್ಪಕಾಲದಲ್ಲಿಯೇ ವಿಶ್ವವಿದ್ಯಾಲಯದ ಸಮಸ್ತ ಕನ್ನಡ ಲೇಖಕರ ಗ್ರಂಥಗಳು ಈ ಮಾಲೆಯಲ್ಲಿ ಬೆಳಕು ಕಂಡವು.

ಪ್ರಕಟಣ ಜಗತ್ತಿನಲ್ಲಿ ರಾಯರು ಮಾಡಿದ ಎಲ್ಲಕ್ಕಿಂತ ಮಿಗಿಲಾದ ಕಾರ್ಯವೆಂದರೆ, ಪುಸ್ತಕ ಪ್ರಕಾಶಕರು, ಲೇಖಕರಿಗೆ ಸಲ್ಲಬೇಕಾದ

> ವ್ಯಾಕರಣ, ಅಲಂಕಾರ ಶಾಸ್ತ್ರ, ಸಾಹಿತ್ಯದ ಪ್ರಕಾಶಕ್ಕೆ ನಿಮ್ಮಿಂದ ಆದಷ್ಟು ಉಪಕಾರ ಕನ್ನಡ ನಾಡಿನಲ್ಲಿ ಬೇರೆ ಯಾರಿಂದಲೂ ಆಗಿಲ್ಲ. ಡಾ. ಕೃಷ್ಣಮೂರ್ತಿಗಳಂಥ ಪಂಡಿತವರ್ಯರ ಮೂವತ್ತು ಗ್ರಂಥಗಳನ್ನು ಪ್ರಕಾಶ ಪಡಿಸಿ ಪಾಂಡಿತ್ಯಕ್ಕೂ ಆಶ್ರಯದಾತರಾಗಿದ್ದಿರಿ. ಡಾ. ಕೃಷ್ಣಮೂರ್ತಿಗಳು ನಿಮಗೆ ಹೇಗೋ ಹಾಗೆ ನಾಡು ನಿಮ್ಮಿಬ್ಬರಿಗೂ ಕೃತಜ್ಞವಾಗಿದೆ.
>
> ಜಿ. ವೆಂಕಟಸುಬ್ಬಯ್ಯ
> ('ಬೆಳ್ಳಿ ಶಾರದೆ')

ಸಂಭಾವನೆಯನ್ನು, ಆದ ಮಟ್ಟಿಗೂ ಇಡಿಗಂಟಾಗಿ ಕೊಡುವ ಉತ್ತಮ ಸಂಪ್ರದಾಯವನ್ನು ಸ್ಥಾಪಿಸಿದ್ದು. 'ಪ್ರಕಾಶನ ಚಕ್ರದಲ್ಲಿ ಲೇಖಕ ಮುಖ್ಯ. ಮಿಕ್ಕೆಲ್ಲ ಅಂಶಗಳೂ ಗೌಣ. ಲೇಖಕನನ್ನು ಮುಂದು ಮಾಡಿ ತಾನೇ ಪ್ರಕಾಶಕ ಬದುಕಬೇಕು. ಹತ್ತಾರು ಸುಪ್ರಸಿದ್ಧ ಲೇಖಕರಿದ್ದರೆ ಒಂದು ಪ್ರಕಾಶನ ಸಂಸ್ಥೆಗೆ ಕೀರ್ತಿ. ಹೀಗಿರುವಲ್ಲಿ ಪ್ರಕಾಶಕನು ಲೇಖಕನನ್ನು ಕಡೆಗಣಿಸಬಾರದು'. ಕಾರವಾರದ ಸಾಹಿತ್ಯ ಸಮ್ಮೇಳನದ ಗೋಷ್ಠಿಯೊಂದರಲ್ಲಿ ತಾವು ಹೇಳಿದ ಈ ಮಾತನ್ನು ಅಕ್ಷರಶಃ ಪಾಲಿಸಿ ತೋರಿಸಿದ ಕೀರ್ತಿ ಶಂಕರನಾರಾಯಣ ರಾಯರದು.

ಕನ್ನಡ ಕವಿಕಾವ್ಯಮಾಲೆಯಲ್ಲಿ ಈವರೆಗೆ ಎಪ್ಪತ್ತಕ್ಕಿಂತ ಹೆಚ್ಚು ಲೇಖಕರ ಇನ್ನೂರೈವತ್ತಕ್ಕೂ ಮಿಕ್ಕಿ ಗ್ರಂಥಗಳು ಪ್ರಕಟವಾಗಿವೆ. ಸಾಹಿತ್ಯದ ಎಲ್ಲ ಪ್ರಕಾರಗಳೂ ಈ ಮಾಲೆಯಲ್ಲಿ ಬೆಳಕು ಕಂಡಿವೆ. ಅನೇಕ ಗ್ರಂಥಗಳು ಎರಡನೆಯ, ಮೂರನೆಯ ಪುನರ್ಮುದ್ರಣದ ಸೌಭಾಗ್ಯವನ್ನು ಕಂಡಿವೆ. ಉತ್ತಮ ಕಾಗದ, ಸೊಗಸಾದ ಅಕ್ಷರಗಳು, ತಪ್ಪಿಲ್ಲದ ಮುದ್ರಣ, ಇವು ಇವರ ಮಾಲೆಯ ಪುಸ್ತಕಗಳ ವೈಶಿಷ್ಟ್ಯ.

ಪ್ರೊ. ಎಚ್.ಎಂ. ಶಂಕರನಾರಾಯಣರಾಯರು ಸ್ವತಃ ವಿದ್ವಾಂಸರು, ವಿಮರ್ಶಕರು, ಲೇಖಕರು. ತಮ್ಮ ಮಾಲೆಗೆ ಗ್ರಂಥಗಳನ್ನು ಆಯ್ದುಕೊಳ್ಳುವಾಗಲೇ ಇವರು ತಮ್ಮ ವಿಮರ್ಶಕ ಶಕ್ತಿಯನ್ನು ಮೆರೆದಿದ್ದಾರೆ. 'ಜನ್ನನ ಯಶೋಧರ ಚರಿತೆಯ ಪ್ರಕಾಶಿಕೆ' ರಾಯರ ಅತ್ಯುತ್ತಮ ಗ್ರಂಥ. ಅವರ ಪಾಂಡಿತ್ಯ ಮತ್ತು ವಿಮರ್ಶನ ಶಕ್ತಿಗಳಿಗೆ ಹಿಡಿದ ಕೈಗನ್ನಡಿ ಈ ಗ್ರಂಥ. ಪ್ರಕಾಶನದ ಹೊಣೆ ಹೊತ್ತುದರಿಂದ ಆಯುಷ್ಯದ ಬಹುಭಾಗ ಗ್ರಂಥದ ಕರಡುಗಳನ್ನು ತಿದ್ದುವುದರಲ್ಲೇ ಕಳೆದು ಹೋಗಿ, ಸ್ವಂತ ಬರವಣಿಗೆ ಕಡಿಮೆ ಆಯ್ತು ಎಂಬ ಕೊರಗು ರಾಯರಿಗೆ ಇಲ್ಲದಿಲ್ಲ. ಮನಸ್ಸು ಮಾಡಿದ್ದರೆ ಅವರು ಇತರ ಕವಿಗಳಿಗೆ, ವಿದ್ವಾಂಸರಿಗೆ ಸರಿಸಮಾನವಾಗಿ ಕೃತಿಗಳನ್ನು ರಚಿಸಬಹುದಿತ್ತು. ಆದರೆ ಒಬ್ಬ ಕವಿಯಾಗಿ ಲೇಖಕನಾಗಿ ಮಾಡಬಹುದಾಗಿದ್ದ ಸೇವೆಗಿಂತ ಹೆಚ್ಚಿನ ಕನ್ನಡಸೇವೆಯನ್ನು ಅವರು ಪ್ರಕಾಶಕರಾಗಿ ಮಾಡಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ.

**ರಾಯರು-ಇಂದು:—**

ಮೈಸೂರಿನ ಕೃಷ್ಣಮೂರ್ತಿ ರಾಮಯ್ಯರ್ ರಸ್ತೆಯ ಮೊದಲಿನ ಮನೆಯನ್ನು ಪ್ರವೇಶಿಸಿ "ಪ್ರೊಫೆಸರ್ ಇದ್ದಾರೆಯೇ?" ಎಂದು ಕೇಳಿದರೆ ಮನೆಯವರು ಬಂದು ರೂಮಿಗೆ ನಮ್ಮನ್ನು ಕರೆದೊಯ್ಯುತ್ತಾರೆ. ಪುಸ್ತಕಗಳ ರಾಶಿಯೇ ತುಂಬಿರುವ ಆ ರೂಮಿನ ಒಂದು ಭಾಗದಲ್ಲಿ ಮಂಚದ ಮೇಲೆ ಬಿಳಿಯ ಉಡುಪು ಧರಿಸಿ ಮಲಗಿರುವ ವ್ಯಕ್ತಿಯನ್ನು ಕಂಡಾಗ ಭೀಷ್ಮಾಚಾರ್ಯರ ನೆನಪು ಬಾರದಿರದು. ಎದ್ದು ಕುಳಿತು ಕೇಳುವ ಸಾಮರ್ಥ್ಯವಿಲ್ಲದಿದ್ದರೂ ಅಲ್ಲಿಂದಲೇ ಬಂದವರನ್ನು ಸ್ವಾಗತಿಸುತ್ತಾರೆ

### ಎಚ್.ಎಂ.ಎಸ್. ಕೃತಿಗಳು

• ಕವಿ ರಾಘವಾಂಕ • ಕಾವ್ಯಾರಾಧನೆ • ಚಂದ್ರಗುಪ್ತ ವಿಜಯ • ನಳದಮಯಂತಿ • ಮುದ್ರೆ ಘುಂಗುರ • ಶ್ರೀ ಹರಿಹರ ದೇವಾಲಯ • ವ್ಯಕ್ತಿ ಮತ್ತು ವಿಚಾರ • ಸಿದ್ಧರಾಮ ಚರಿತ್ರೆಯ ಸಂಗ್ರಹದ ಕೈಗನ್ನಡಿ • ಕೆಂಪುನಾರಾಯಣ ಕವಿಶ್ರುತಿ • ಸಂಚಿ ಹೊನ್ನಮ್ಮ • ಜನಪದ ಮುಕ್ತಕಗಳು • ಅಲ್ಲಾಉದ್ದೀನ್ ಮತ್ತು ಅದ್ಭುತ ದೀಪ (ಮಕ್ಕಳಿಗಾಗಿ) ಇತ್ಯಾದಿ.

ಪ್ರಕಟಣಾ ಕಲೆಯನ್ನು ಅಕಳಂಕವಾಗಿಸಿ
ಸುಕವಿವರೇಣ್ಯರಾಪ್ತರನು ಪಡೆದೆನು
ಸಕಲರ ಮೆಚ್ಚನೀತನು
ಧುಡಿಮೆಯೊಳಷ್ಟನು ಮುಡಿಪಾಗಿ ತೆಗೆದಿಟ್ಟು,
ಕಡುಬಡತನವನುಣ್ಣುತ-ಮಾಲೆಯ
ಬಿಡದೆಯೆ ಬೆಳೆಸಿಕೊಂಡನು

— ಎಸ್.ವಿ. ಪರಮೇಶ್ವರಭಟ್ಟ
('ಶಂಕರಸೂಕ್ತ')

ಇದು ಮಲ್ಲಿಗೆಯಿದು ಸಂಪಿಗೆ
ಯಿದು ಕೇದಗೆಯೆಂದು ಮಾಲೆಗಾರನ ತೆರದಿಂ
ಪದದಾಯ್ದೆಲ್ಲವ ಪವಣಿಸು
ತೊಡವಿದ ಕೃತಿಮಾಲೆ ವಾಣಿಗಾದುದು ಹಾರಂ

— ಡಾ. ಕೆ. ಕೃಷ್ಣಮೂರ್ತಿ
('ಮೆಚ್ಚುನುಡಿ')

ರಾಯರು. ಸಮೀಪ ಹೋಗಿ ಅವರೊಂದಿಗೆ ಮಾತಿಗಾರಂಭಿಸಿದರೆ ಕನ್ನಡ ಸಾಹಿತ್ಯದ ಇತಿಹಾಸವೇ ನಿಧಾನವಾಗಿ ನಮ್ಮ ಮುಂದೆ ಬಿಚ್ಚಿಕೊಳ್ಳುತ್ತಿರುವ ಅನುಭವವಾಗುತ್ತದೆ. ವಿದ್ಯಾಗುರುಗಳಾದ ಬಿ.ಎಂ. ಶ್ರೀ., ತೀ.ನಂ. ಶ್ರೀ., ಎ.ಆರ್. ಕೃಷ್ಣಶಾಸ್ತ್ರಿಗಳ ಬಗೆಗೆ ಮಾತನಾಡುವಾಗ ಇಂದಿಗೂ ಶಂಕರನಾರಾಯಣರಾಯರು ಭಕ್ತಿಭಾವದಿಂದ ತಲೆಬಾಗುತ್ತಾರೆ. ಕನ್ನಡದ ಬಗೆಗಿನ ಅವರ ಕಾಳಜಿ ಪ್ರತಿ ಮಾತಿನಲ್ಲಿ ವ್ಯಕ್ತವಾಗುತ್ತದೆ.

ಪ್ರಾಧ್ಯಾಪಕರಾಗಿದ್ದುಕೊಂಡು, ಪ್ರಾಂಶುಪಾಲರಾಗಿದ್ದುಕೊಂಡು, ಕನ್ನಡ ಕವಿಕಾವ್ಯಮಾಲೆಯನ್ನು ಬೆಳೆಸುತ್ತ, ಸಾರ್ಥಕ ಜೀವನವನ್ನು ನಡೆಸಿದ ರಾಯರಿಗೆ ಈಗ ಎಪ್ಪತ್ತೈದು ವರ್ಷಗಳು. ಈ ಇಳಿವಯಸ್ಸಿನಲ್ಲಿಯೂ ಪುಸ್ತಕ ಪ್ರಕಾಶನದ ವ್ಯಾಮೋಹ ಅವರನ್ನು ಬಿಟ್ಟಿಲ್ಲ. ಆಗೊಂದು ಈಗೊಂದು ಪುಸ್ತಕಗಳನ್ನು ಪ್ರಕಾಶಿಸುವ ಖಯಾಲಿ ಇಂದಿಗೂ ಇದೆ. "ಪ್ರಕಾಶನದ ಉದ್ಯಮದಿಂದಾಗಿ ಆರ್ಥಿಕವಾಗಿ ಹೆಚ್ಚೇನನ್ನೂ ಸಂಪಾದಿಸಲು ಸಾಧ್ಯವಾಗಲಿಲ್ಲವಾದರೂ, ನಿರ್ವಂಚನೆಯಿಂದ ಕನ್ನಡ ಸೇವೆ ಮಾಡಿದ ತೃಪ್ತಿ ನನಗಿದೆ. ಕನ್ನಡ ನನ್ನ ಜೀವನವನ್ನು ಸಮೃದ್ಧಿಗೊಳಿಸಿದೆ. ಎಪ್ಪತ್ತೈದು ವರ್ಷಗಳ ಬದುಕನ್ನು ಕಂಡು ನಾನೀಗ ಭಗವಂತನನ್ನು ಬೇಡುವುದಿಷ್ಟೆ- 'ವಿನಾ ದೈನ್ಯೇನ ಜೀವನಂ' ನನಗೆ ಲಭಿಸಿದೆ, ಇನ್ನು 'ಅನಾಯಾಸೇನ ಮರಣಂ' ಮಾತ್ರ ಕೊಡು ತಂದೆ" ಎಂದು ವಿನೀತಭಾವದಿಂದ ಹೇಳುವ ರಾಯರು ನಿಸ್ಸಂಶಯವಾಗಿ ಕನ್ನಡ ಪ್ರಪಂಚದ ಸೀಮಾಪುರುಷರಲ್ಲೊಬ್ಬರು.

ಪ್ರೊ. ಎಚ್.ಎಂ. ಶಂಕರನಾರಾಯಣರಾಯರ ಸೇವೆಯನ್ನು ನಾವು ಗುರುತಿಸಿದರೆ ಅದೊಂದು ದೊಡ್ಡ ಕೆಲಸ ಮಾಡಿದಂತಲ್ಲ, ಕರ್ತವ್ಯವಾದೀತಷ್ಟೆ! ಗುರುತಿಸದೆ ಹೋದರೆ ಮಾತ್ರ ಖಂಡಿತ ಅಪಚಾರವಾದೀತು. ●

('ಬೆಳ್ಳಿ ಶಾರದೆ' ಸ್ಮರಣ ಸಂಚಿಕೆಯ ಆಧಾರದಿಂದ)

ಎಲ್ಲಿಯವರೆಗೆ ಹಣದ ಸಂಪಾದನೆಯಲ್ಲಿ ಆಸಕ್ತಿ ಇರುವುದೋ ಅಲ್ಲಿಯವರೆಗೆ ಮಾತ್ರ ಆತನ ಪರಿವಾರಕ್ಕೆಲ್ಲ ಅವನ ಮೇಲೆ ವಿಶ್ವಾಸವಿರುತ್ತದೆ — ಶಂಕರಾಚಾರ್ಯ

## ವಿದ್ಯುದುತ್ಪಾದನೆಗಾಗಿ
# ನೂತನ ಊರ್ಜಾಶಕ್ತಿ
# ಎಂ.ಎಚ್.ಡಿ.

— ಡಾ. ವಾ.ರಾ. ಮಲಘಾಣ

**ಪೀಠಿಕೆ:** 'ಊರ್ಜಾ' (Energy power) ಎಂಬುದು ಯಂತ್ರಚಾಲಕ ಶಕ್ತಿ- ಊರ್ಜಾ ಶಕ್ತಿಯು ಕೇವಲ ಯಂತ್ರಚಾಲಕ ಶಕ್ತಿಯಾಗಿಲ್ಲ. ನೂತನ ವಸ್ತು ನಿರ್ಮಿತಿಯಲ್ಲಿಯೂ ವೇಗದ ಉತ್ಪತ್ತಿ ಹಾಗೂ ನಿಯಂತ್ರಣಗಳಲ್ಲಿಯೂ ಒಂದಿಲ್ಲೊಂದು ಬಗೆಯ ಊರ್ಜಾ ಶಕ್ತಿಯು ಸಹಕರಿಸುತ್ತಿದೆ. ಉಷ್ಣತೆಯೆ ಊರ್ಜೆಯ ಆದ್ಯ ಸ್ವರೂಪ. ಉಷ್ಣತೆಯ ಪ್ರಚ್ಛನ್ನ ಇಲ್ಲವೆ ಪ್ರಕಟವಾದ ವಿವಿಧ ಸ್ವರೂಪಗಳೇ ಪ್ರಚಲಿತವಾದ ಊರ್ಜೆಯ ಪ್ರಕಾರಗಳಾಗಿವೆ. ಚಿಕ್ಕದೊಂದು ಆಕಸ್ಮಿಕ ಘಟನೆಯಿಂದ ಕಂಡುಹಿಡಿದ ಉಗಿಶಕ್ತಿಯು ಮೊದಲು ಊರ್ಜೆಯಾಗಿ ಮುಂದೆ ಬಂದಿತು. ಶತಶತಮಾನಗಳಿಂದ ಸೂರ್ಯನ ಉಷ್ಣತೆಯನ್ನು ಸಂಗ್ರಹಿಸಿಕೊಂಡಿರುವ ಕಲ್ಲಿದ್ದಲಿಯು ಉಗಿಶಕ್ತಿಗೆ ಇಂಧನವಾಯಿತು.

**ನೂತನ ಊರ್ಜಾ ಶಕ್ತಿಗಳ ಶೋಧ:** ನಿಸರ್ಗದ ರಹಸ್ಯಗಳಲ್ಲಿ ಒಂದಾದ ವಿದ್ಯುತ್ ಶಕ್ತಿಯನ್ನು



ಇದು ಎಂ.ಎಚ್.ಡಿ ಸಿದ್ಧಾಂತದ ಚಿತ್ರರೂಪ

ವಿಜ್ಞಾನಿಯು ತನ್ನ ಪ್ರತಿಭೆಯಿಂದ ಆಕಾಶದಿಂದ ಭೂಮಿಗೆ ಇಳಿಸಿ, ಜನತೆಗೆ ಜೀವನದ ಸೌಕರ್ಯಗಳನ್ನು ಅನಂತಮುಖವಾಗಿ ನೀಡುತ್ತಿರುವನು. ವಿದ್ಯುತ್ ಶಕ್ತಿಯು ಮಾನವ ಜೀವನದಲ್ಲಿ ಇಂದು ಹಾಸುಹೊಕ್ಕಾಗಿ ವ್ಯಾಪಿಸಿದೆ. ಅನ್ನ ನೀರುಗಳಷ್ಟೇ ಅಗತ್ಯವಾದ ವಸ್ತುವಾಗಿದೆ. ಒಂದು ರಾಷ್ಟ್ರದ ಪ್ರಗತಿಯನ್ನು ಅಲ್ಲಿಯ ಪ್ರತಿ ನಾಗರಿಕನು ನಿತ್ಯ ಜೀವನದಲ್ಲಿ ಬಳಸುವ ಸರಾಸರಿ ವಿದ್ಯುತ್ ಶಕ್ತಿಯ ಪ್ರಮಾಣದಿಂದ ಗುರುತಿಸುವುದುಂಟು. ಈ ಅಳತೆಗೋಲಿನಿಂದ ಪರೀಕ್ಷಿಸಿದರೆ, ನಮ್ಮ ಭಾರತವು ತೀರ ಹಿಂದೆ ಉಳಿದಿರುವುದು ಕಂಡುಬರುತ್ತದೆ. ನಿತ್ಯ ಜೀವನದ ಸೌಕರ್ಯವನ್ನು ಹೆಚ್ಚಿಸುವುದಕ್ಕಾಗಿ, ಉದ್ದಿಮೆಗಳ ವಿಕಾಸ ಹಾಗೂ ಅಭಿವೃದ್ಧಿಗಾಗಿ ವಿದ್ಯುತ್ ಶಕ್ತಿಯನ್ನು ಅಧಿಕ ಪ್ರಮಾಣದಲ್ಲಿ ಉತ್ಪಾದಿಸುವ ಅಗತ್ಯವು ಅನುಭವದ ಸ್ಪಷ್ಟ ಸಂಗತಿಯಾಗಿದೆ. ಅದನ್ನು ವಿವರಿಸಬೇಕಿಲ್ಲ.

**ಡಾ॥ ವಾಮನ ರಾಮರಾವ್ ಮಲಘಾಣ**
ಒಬ್ಬ ಪ್ರತಿಭಾವಂತ ಕನ್ನಡಿಗ. ವರಂಗಲ್ಲಿನ ಇಂಜಿನಿಯರಿಂಗ್ ಕಾಲೇಜಿನಿಂದ ಬಿ.ಈ. ಮತ್ತು ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಎಂ.ಈ. ಪದವಿಗಳನ್ನು ಉನ್ನತ ಶ್ರೇಣಿಯಲ್ಲಿ ಪಡೆದ ನಂತರ ಅಮೆರಿಕದ ಬಫೆಲೊ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಸಂಪಾದಿಸಿದರು. ನಂತರ ಇಂಗ್ಲಂಡಿನ ಲಿವರ್‌ಪೂಲ್ ವಿಶ್ವವಿದ್ಯಾಲಯದಲ್ಲಿ ಎರಡು ವರ್ಷ ಕೆಲಸ ಮಾಡಿ ತಮ್ಮ ವಿಷಯದಲ್ಲಿ ಹೆಚ್ಚಿನ ಜ್ಞಾನಾನುಭವಗಳನ್ನು ಗಳಿಸಿಕೊಂಡು ಕಳೆದ 11 ವರ್ಷಗಳಿಂದಲೂ ತಿರುಚಿನಾಪಳ್ಳಿಯ ಭಾರತ್ ಹೆವಿ ಇಲೆಕ್ಟ್ರಿಕಲ್‌ನಲ್ಲಿ ಎಂ.ಎಚ್.ಡಿ. ಸಂಶೋಧನದ ಪೈಲಟ್ ಪ್ಲಾಂಟ್‌ನಲ್ಲಿ ಸೀನಿಯರ್ ಮ್ಯಾನೇಜರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಈ ಮಾರ್ಗದರ್ಶಕ ಪ್ರಕಲ್ಪದ ವಿಕಾಸ ಮತ್ತು ಪ್ರಗತಿಯಲ್ಲಿ ಡಾ॥ ಮಲಘಾಣರ ಪಾತ್ರ ಹಿರಿದು. ಮೂಲ ಇಂಗ್ಲಿಷಿನಲ್ಲಿ ಅವರು ಬರೆದ ಈ ಲೇಖನವನ್ನು ಕನ್ನಡಕ್ಕಿಳಿಸಿದವರು ಹಿರಿಯ ಲೇಖಕ ಶ್ರೀ ಗಜೇಂದ್ರಗಡ ಶಾಮರಾಯರು. ●

**(ಬಿ.ಎಚ್.ಈ.ಎಲ್. ಕೃಪೆಯಿಂದ)**

ಇಂದಿನ ವಿಜ್ಞಾನ ಯುಗದಲ್ಲಿ, ಊರ್ಜಾಶಕ್ತಿಯು ವಿವಿಧ ವಸ್ತುಗಳಿಂದ, ವಿವಿಧ ವಿಧಾನಗಳಿಂದ ಉತ್ಪಾದಿಸಲ್ಪಡುತ್ತಿದೆ. ಒಂದೊಂದು ವಿಧಾನದಲ್ಲಿಯೂ ಕೆಲವೊಂದು ಪ್ರಯೋಜನಗಳಿವೆ. ಕೆಲವೊಂದು ನ್ಯೂನತೆಗಳಿವೆ. ವಿದ್ಯುತ್ ಜನಿತ್ರಕ್ಕೆ (generator) ಕಲ್ಲಿದ್ದಲಿಯು ಔಷ್ಣಿಕ (thermal) ಊರ್ಜಾಶಕ್ತಿ ಇಲ್ಲವೆ ತೈಲಶಕ್ತಿ ಊರ್ಜಾಗಳಾಗಿವೆ. ವಿದ್ಯುತ್ ಶಕ್ತಿಯ ಉತ್ಪಾದನೆಗೆ; ಜಲಶಕ್ತಿಯು ಇಂದು ಅತ್ಯಧಿಕ ಪ್ರಚಾರದಲ್ಲಿದೆ. ಜಲವಿದ್ಯುಜ್ಜನಕ ಕೇಂದ್ರಗಳು ಸಾರ್ವತ್ರಿಕವಾಗಿವೆ. ನದಿಗಳ ಜಲಪಾತಗಳು ವಿದ್ಯುತ್ತಿನ ಉತ್ಪಾದನೆಗಾಗಿ ನಿಸರ್ಗವು ನೀಡಿದ ನಿರಂತರ ಕಾಣಿಕೆಗಳಾಗಿವೆ. ಇದಲ್ಲದೆ ಅಣೆಕಟ್ಟುಗಳಿಂದ ಕೃತ್ರಿಮ ಜಲಾಶಯಗಳನ್ನು ನಿರ್ಮಿಸಿ, ವಿದ್ಯುತ್ ಜನಿತ್ರಕ್ಕೆ ಊರ್ಜಾಶಕ್ತಿಯನ್ನು ಒದಗಿಸುವುದು ಇನ್ನೊಂದು ವಿಧವಾಗಿದೆ. ಈ ಬಗೆಯ ಜಲವಿದ್ಯುತ್ ಶಕ್ತಿಗೆ 'ಬಿಳಿಯ ಕಲ್ಲಿದ್ದಲು' ಎಂದು ಮಾರ್ಮಿಕವಾಗಿ ಹೇಳುವುದುಂಟು.

**ನೂತನ ಊರ್ಜಾಶಕ್ತಿಗಳ ಬೇಡಿಕೆ-ಅಗತ್ಯ:** ಹೊಸ ಹೊಸ ಊರ್ಜಾಶಕ್ತಿ ಗಳ ಸಂಶೋಧನೆಗೆ ಹಾಗೂ ನಿರ್ಮಿತಿಗೆ ಇಷ್ಟೊಂದು ಮಹತ್ವ ಏಕೆ? ಅಪಾರ ವೆಚ್ಚದಿಂದ ನಡೆಸುವ ಪ್ರಯೋಗಗಳ ಸಾಹಸವೇಕೆ? ಎಂಬ ಪ್ರಶ್ನೆಯು ವಿಚಾರಣೀಯವಾಗಿದೆ. ಜಗತ್ತಿನ ಜನಸಂಖ್ಯೆ ಸ್ಫೋಟಕವಾಗಿ ಬೆಳೆಯ ಹತ್ತಿದೆ. 1990ರಲ್ಲಿ ಭಾರತದ ಜನಸಂಖ್ಯೆ ಎಂಭತ್ತು ಕೋಟಿಯಾಗಬಹುದೆಂಬ ನಿರೀಕ್ಷೆ ಇದೆ. ತತ್ಪರಿಣಾಮವಾಗಿ ಊರ್ಜಾಶಕ್ತಿಗಳಿಗೆ, ವಿಶೇಷವಾಗಿ, ವಿದ್ಯುತ್ ಶಕ್ತಿಗೆ, ಬರುವ ಬೇಡಿಕೆ ಪೂರೈಕೆಯನ್ನು ಮೀರಿ ಹೆಚ್ಚುತ್ತಲಿದೆ. ಮುಂಬರುವ ಕೊರತೆಯ ಎಚ್ಚರಿಕೆ ಸರಕಾರಗಳಿಗೆ, ವಿಜ್ಞಾನಿಗಳಿಗೆ ಮನವರಿಕೆಯಾಗಿದೆ. ಈ ಮುಂಜಾಗ್ರತೆಯಿಂದ ಪ್ರೇರಿತವಾಗಿ, ಹೊಸ ಹೊಸ ಊರ್ಜಾಶಕ್ತಿಗಳ ಸಂಶೋಧನೆಗಾಗಿ, ನಿರ್ಮಿತಿಗಾಗಿ

ಸಾಹಸ ಸಾಗಿದೆ, ಪ್ರಯೋಗಗಳು ನಡೆದಿವೆ.

**ಸಾಂಪ್ರದಾಯಿಕ ಊರ್ಜಾಶಕ್ತಿಗಳ ನ್ಯೂನತೆಗಳು:** ಎಷ್ಟೇ ಸಮೃದ್ಧವಾಗಿದ್ದರೂ ಭೂಗರ್ಭದಲ್ಲಿಯ ಕಲ್ಲಿದ್ದಲು ಹಾಗೂ ತೈಲ ಸಂಪತ್ತುಗಳು ಪರಿಮಿತವಾದವು. ಅವು ಮತ್ತೆ ಮತ್ತೆ ಬೆಳೆಯುವ ವಸ್ತುಗಳಲ್ಲ. ಜಲವಿದ್ಯುತ್ ಶಕ್ತಿಗೆ ಅನಿಶ್ಚಿತ ಮಳೆಗಾಲದಿಂದ ನೀರಿನ ಪೂರೈಕೆಯನ್ನು ನಂಬುವಂತಿಲ್ಲ.

ಸಾಂಪ್ರದಾಯಿಕ ಊರ್ಜಾಶಕ್ತಿಗಳ ವಿಧಾನಗಳೂ ಅಪಾಯಕಾರಿಗಳಾಗಿವೆ. ಕಲ್ಲಿದ್ದಲಿಯ ಹೊಗೆಯನ್ನು ಚಿಮ್ಮುವ ಕಾರ್ಯಾಗಾರಗಳು ಹವೆಯನ್ನು ದೂಷಿತಗೊಳಿಸುವವು. ವಿದ್ಯುದುತ್ಪಾದನೆಗೆ ವಿನಿಯೋಗವಾಗುವ ನದಿಯ ನೀರು ಪ್ರದೂಷಿತವಾಗುವ ಆತಂಕವೂ ಇಂದು ಅನುಭವಕ್ಕೆ ಬರತೊಡಗಿದೆ.

**ಎಂ.ಎಚ್.ಡಿ. ಯೋಜನೆ:** ಸಾಂಪ್ರದಾಯಿಕ ವಿಧಾನಗಳಲ್ಲಿಯ ನ್ಯೂನತೆಗಳನ್ನು ತಕ್ಕ ಮಟ್ಟಿಗೆ ದೂರೀಕರಿಸಿಕೊಂಡು ವೆಚ್ಚವನ್ನು ಮಿತಗೊಳಿಸಿ, ಉರುವಲಿನ (ಇಂಧನ) ಕೊರತೆಯನ್ನು ಕಡಿಮೆಮಾಡುವ ಒಂದು ನೂತನ ಊರ್ಜಾಶಕ್ತಿಯನ್ನು ವಿಜ್ಞಾನಿಗಳು ಸಂಶೋಧಿಸಿದ್ದಾರೆ. ಇದುವೆ ಎಂ.ಎಚ್.ಡಿ. ಯೆಂಬ ಹೆಸರಿನ ವಿದ್ಯುದುತ್ಪಾದನೆಯ ವಿಧಾನದಲ್ಲಿ ಬಳಸುವ ಊರ್ಜಾ ಆಗಿದೆ. ಅದು ಹೊಸ ಬಗೆಯ ಊರ್ಜಾಶಕ್ತಿಯಾಗಿಲ್ಲ. ಕಲ್ಲಿದ್ದಲಿಯನ್ನೇ ಉಪಯೋಗಿಸಿ, ಅದರಿಂದ ಅಧಿಕ ಊರ್ಜಾವನ್ನು ಉತ್ಪಾದಿಸುವ ವಿಧಾನವೇ ಎಂ.ಎಚ್.ಡಿ.ಯ ಗುರಿಯಾಗಿದೆ. ಪ್ರಚಾರದಲ್ಲಿರುವ ವಿಧಾನಗಳಲ್ಲಿ ಬಳಸುವ ಅಷ್ಟೇ ಪ್ರಮಾಣದ ಕಲ್ಲಿದ್ದಲಿನಿಂದ ಮೊದಲಿಗಿಂತಲೂ ಅಧಿಕ ಪ್ರಮಾಣದಲ್ಲಿ ಎಂ.ಎಚ್.ಡಿ.ಯು ವಿದ್ಯುದುತ್ಪಾದನೆಯನ್ನು ಮಾಡುವುದು. ಇದಲ್ಲದೆ ಯಾವುದೊಂದು ಮಾಧ್ಯಮವನ್ನೂ ಬಳಸದೆ, ನೇರವಾಗಿ ವಿದ್ಯುದುತ್ಪಾದನೆಯನ್ನು ಮಾಡುವುದು ಎಂ.ಎಚ್.ಡಿ. ವಿಧಾನದ ಇನ್ನೊಂದು ವೈಶಿಷ್ಟ್ಯವಾಗಿದೆ. ಒಂದು ಉದಾಹರಣೆಯಿಂದ ಈ ಮಾತನ್ನು ಸ್ಪಷ್ಟಗೊಳಿಸಬಹುದು. ಉಗಿಯು ಒಂದು ಊರ್ಜಾಶಕ್ತಿ. ಕಲ್ಲಿದ್ದಲಿಯಿಂದಲೆ ಅದು ನೇರವಾಗಿ ಜನಿಸುವುದಿಲ್ಲ. ಕಲ್ಲಿದ್ದಲಿಯಿಂದ ಉತ್ಪಾದಿಸಿದ ಉಗಿಯನ್ನು ಮಾಧ್ಯಮವಾಗಿ ಮಾಡಿಕೊಳ್ಳಬೇಕಾಗುವುದು. ಈ ಉಗಿಯು ವಿದ್ಯುತ್ ಜನಿತ್ರಕ್ಕೆ ಚಾಲನೆ ಕೊಟ್ಟು, ವಿದ್ಯುತ್ತಿನ ಉತ್ಪಾದನೆ ಮಾಡುವುದು. ನೀರನ್ನು ಉಗಿಯಾಗಿ ಪರಿವರ್ತಿಸಲು ಮಾತ್ರ ಕಲ್ಲಿದ್ದಲಿಯು ಇಂಧನವಾಗುವುದು. ಅದು ಊರ್ಜಾಶಕ್ತಿಯಲ್ಲ. ಇದರಂತೆಯೇ ಜಲವಿದ್ಯುತ್ ಶಕ್ತಿಯ ಉತ್ಪಾದನೆಗೆ, ಜಲಪಾತದಿಂದ ವೇಗದಿಂದ ತಿರುಗುವ ಜಲಚಕ್ರಿಗೆ ಮಾಧ್ಯಮವಾಗುವುದು. ಆದರೆ, ಎಂ.ಎಚ್.ಡಿ. ಯೋಜನೆಯಲ್ಲಿ ಈ ಬಗೆಯ ಮಾಧ್ಯಮದ ವಿನಿಯೋಗವಿಲ್ಲ. ಈ ನೂತನ ವಿಧಾನದಲ್ಲಿ ನೇರವಾಗಿ ವಿದ್ಯುದುತ್ಪಾದನೆಯಾಗುತ್ತದೆ. ಈ ಸಂಗತಿಯನ್ನು ಹೀಗೆ ಸ್ಪಷ್ಟಗೊಳಿಸಬಹುದು. ಕಲ್ಲಿದ್ದಲಿಯನ್ನು ಉರಿಸಲು, ಅದು ಹೊರಚೆಲ್ಲುವ ವಿವಿಧ ವಾಯುಗಳನ್ನು ಸಮನ್ವಿತಗೊಳಿಸಿದಾಗ್ಗೆ, 2700 ಡಿಗ್ರಿ (ಸೆಂಟಿಗ್ರೇಡ್) ಉಷ್ಣತೆಯುಳ್ಳ ಒಂದು ವಾಯುರೂಪದ ಹಾಗೂ ವಿದ್ಯುದ್ವಾಹಕವಾದ ವಸ್ತುವಿನ ನಿರ್ಮಾಣವಾಗುವುದು. ಈ ವಸ್ತುವನ್ನೇ ಎಂ.ಎಚ್.ಡಿ. ವಿಧಾನದಲ್ಲಿ ಪ್ಲಾಸ್ಮಾ ಎಂದು ಕರೆಯುವರು. ಪಾರಂಪರಿಕ ವಿದ್ಯುದುತ್ಪಾದನೆಯ ವಿಧಾನದಲ್ಲಿ ವಿದ್ಯುದ್ವಾಹಕಕ್ಕಾಗಿ, ತಾಮ್ರ ಮುಂತಾದ ಲೋಹಗಳನ್ನು ಉಪಯೋಗಿಸುವರು. ಆದರೆ ಎಂ.ಎಚ್.ಡಿ. ವಿಧಾನದಲ್ಲಿ ತಾಮ್ರ ಮುಂತಾದ ಲೋಹಗಳಿಗೆ ಪ್ರತಿಯಾಗಿ ವಾಯುರೂಪದ ವಿದ್ಯುದ್ವಾಹಕ ಪ್ಲಾಸ್ಮಾವೇ ಮಾಧ್ಯಮವಾಗುವುದು. ಎಂ.ಎಚ್.ಡಿ. ವಿಧಾನದಲ್ಲಿ ಇದು ಅದರ ವೈಶಿಷ್ಟ್ಯವೆನ್ನಬಹುದು. ಪ್ಲಾಸ್ಮಾ ಎಂದು ಹೇಳುವ ಈ ವಿದ್ಯುದ್ವಾಹಕ ವಾಯುವನ್ನು ಲೋಹಚುಂಬಕೀಯ ಕ್ಷೇತ್ರದಲ್ಲಿ ಒಳ್ಳೆ ವೇಗದಿಂದ ಪ್ರವಹಿಸಿದಾಗ್ಗೆ ವಿದ್ಯುತ್ತಿನ ನಿರ್ಮಾಣವಾಗುವುದು, ಉತ್ಪಾದನೆಯಾಗುವುದು. ವಿದ್ಯುತ್ತಿನ ಉತ್ಪಾದನೆಯಾಗುವಾಗ್ಗೆ ಪ್ಲಾಸ್ಮಾದ ಉಷ್ಣತೆಯು 2300 ಡಿಗ್ರಿಯವರೆಗೆ ಕೆಳಗೆ ಇಳಿಯುವುದು. ಈ ಬಗೆಯ ವಿದ್ಯುನ್ನಿರ್ಮಿತಿಯ ಯೋಜನೆಗೆ ಎಂ.ಎಚ್.ಡಿ. ಇಲೆಕ್ಟ್ರಿಕ್ ಜನರೇಟರ್ ಎನ್ನುವರು.

**ಈ ನೂತನ ವಿಧಾನದ ಮೂಲವೇನು?**

ವಿದ್ಯುತ್ ಶಕ್ತಿಯ ಆದ್ಯ ಜನಕನೆಂದು ವಿಖ್ಯಾತನಾದ ಮೈಕೆಲ್ ಫ್ಯಾರಡೆಯ ಪ್ರತಿಭೆಗೆ ಈ ನೂತನ ವಿಧಾನದ ಕಲ್ಪನೆಯು ಮೊದಲು ಹೊಳೆಯಿತು. ಕ್ರಿ.ಶ. 1832ರಲ್ಲಿ ಲಂಡನ್ನಿನ ಥೇಮ್ಸ್ ನದೀ ತೀರದಲ್ಲಿ ಈ ವಿಧವಾದ ಅತ್ಯಂತ ಸಾದಾ ಪ್ರಯೋಗವನ್ನು ಆತನು ಮಾಡಿನೋಡಿದನು. ಥೇಮ್ಸ್ ನದಿಯ ನೀರು ಉಪ್ಪಿನ ಅಂಶದಿಂದ ಯುಕ್ತವಾದುದು. ಆದುದರಿಂದ ಅದು ವಿದ್ಯುತ್ ವಾಹಕವಾದುದು. ಪೃಥ್ವಿಗೆ ಲೋಹಚುಂಬಕೀಯ ಆವರಣವಿದೆ. ಈ ಲೋಹಚುಂಬಕೀಯ ಕ್ಷೇತ್ರದಲ್ಲಿ ಲವಣ ಮಿಶ್ರಿತ ನೀರು ಹರಿಯುವಾಗ್ಗೆ ವಿದ್ಯುತ್ ಶಕ್ತಿಯ ಉತ್ಪತ್ತಿಯಾಗುವುದೆಂಬುದನ್ನು ಇಲ್ಲಿ ಮಾಡಿ ನೋಡಿದರು. ನದಿಯ ಉಭಯ ದಂಡೆಗಳಲ್ಲಿ ಎರಡು ಲೋಹದ ಪಟ್ಟಿಗಳನ್ನು ಸಮ್ಮುಖವಾಗಿ ನೆಟ್ಟು, ಅವೆರಡನ್ನೂ ವಿದ್ಯುದ್ವಾಹಕ ದೀರ್ಘ ತಂತಿಯಿಂದ ಆತನು ಜೋಡಿಸಿದನು. ಆಗ್ಗೆ ಈ ತಂತಿಯಲ್ಲಿ ವಿದ್ಯುತ್ತಿನ ಚಲನೆಯು ವಿದ್ಯುನ್ಮಾಪಕ ಯಂತ್ರದಿಂದ ತಿಳಿಯಿತು. ಆತನ ಪ್ರಯೋಗವು ಯಶಸ್ವಿಯಾಯಿತು. ಕಲ್ಪನೆಯು ಸತ್ಯಸಂಗತಿಯಾಯಿತು. ಈ ಪ್ರಥಮ ಪ್ರಯೋಗದಲ್ಲಿ ಥೇಮ್ಸ್ ನದಿಯ ನೀರನ್ನು ಬಳಸಿಕೊಂಡದ್ದರಿಂದ ಈ ನೂತನ ವಿಧಾನಕ್ಕೆ Magnetic Hydro (ಜಲಜನಿತ) Dynamics ಎಂಬ ಹೆಸರು ಬಂದಿದೆ.

**ಈ ನೂತನ ವಿಧಾನದ (ಎಂ.ಎಚ್.ಡಿ) ಪ್ರಯೋಗ ಕೇಂದ್ರಗಳು:** ನದಿಯ ಉಗಮದಂತೆ ಈ ನೂತನ ವಿಧಾನದ ಉಗಮವು ಕೂಡ ಹೀಗೆ ಬಹು ಚಿಕ್ಕದಾಗಿದೆ. ಅದು ಅನಂತರ ಬೆಳೆದುಬಂದ ಕಾಲ ಹಾಗೂ ದಾರಿ ಸುದೀರ್ಘವಾಗಿದೆ. ಫ್ಯಾರಡೆ ಅಂದು ನಡೆಸಿದ ಚಿಕ್ಕ ಪ್ರಯೋಗ ಐತಿಹಾಸಿಕ ಮಾಹಿತಿಯನ್ನು ಪಡೆಯಿತು. ಕ್ರಿ.ಶ. 1940ರ ದಶಕದಲ್ಲಿ ಅಮೆರಿಕದ ಪ್ರಸಿದ್ಧ ವೆಸ್ಟಿಂಗ್‌ಹೌಸ್ ಸಂಶೋಧನಾ ಕೇಂದ್ರವು ಈ ನೂತನ ವಿಧಾನದಲ್ಲಿ ಆಸ್ಥೆ ವಹಿಸಿ ಅದನ್ನು ಕಾರ್ಯಗತ ಮಾಡಲು ಪ್ರಯೋಗಗಳನ್ನು ಪ್ರಾರಂಭಿಸಿತು. ಎಂ.ಎಚ್.ಡಿ. ವಿದ್ಯುದುತ್ಪಾದನೆಯನ್ನು ಅಭಿವೃದ್ಧಿಗೊಳಿಸಲು ಹಾಗೂ ವ್ಯಾವಹಾರಿಕವಾಗಿ ವಿನಿಯೋಗಿಸಲು ರಶಿಯ, ಅಮೆರಿಕ, ಜಪಾನ್, ಚೀನ, ಭಾರತ ಇತ್ಯಾದಿ ರಾಷ್ಟ್ರಗಳು ತಮ್ಮ ಮುಖ್ಯ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಅದನ್ನು ಸೇರ್ಪಡೆ ಮಾಡಿಕೊಂಡಿದೆ.

ಎಂ.ಎಚ್.ಡಿ. ವಿಧಾನದಿಂದ ಜನಿಸುವ ವಿದ್ಯುತ್ತನ್ನು ಪ್ರತ್ಯಕ್ಷವಾಗಿ ಬಳಕೆಯಲ್ಲಿ ತರು



ತಿರುಚಿಯ ಬಿ.ಎಚ್.ಈ.ಎಲ್.ನಲ್ಲಿ ಎಂ.ಎಚ್.ಡಿ. ಸಂಶೋಧನಾ ಕೇಂದ್ರ

ವಲ್ಲಿ ರಶಿಯ ಅಗ್ರಣಿಯಾಗಿದೆ. ಯು-02 ಹಾಗೂ ಯು-25 ಇವು ಎಂ.ಎಚ್.ಡಿ. ಯನ್ನು ಬಳಕೆಯಲ್ಲಿ ತಂದ ಪ್ರಥಮ ಪ್ರಾಯೋಗಿಕ ಕೇಂದ್ರಗಳಾಗಿವೆ.

ಎಂ.ಎಚ್.ಡಿ.ಯ 500 ಮೆಗಾವಾಟ್ ಶಕ್ತಿಯ ಕೇಂದ್ರದ (ಯು-500) ನಿರ್ಮಿತಿ ರಶಿಯದಲ್ಲಿ ಇಂದು ಪ್ರಾರಂಭವಾಗಿದೆ. ಕ್ರಿ.ಶ. 1989ರಲ್ಲಿ ಈ ಕಾರ್ಯವು ಪೂರ್ತಿಗೊಂಡು, ಎಂ.ಎಚ್.ಡಿ. ವಿದ್ಯುತ್ ಶಕ್ತಿಯನ್ನು ಸಾರ್ವತ್ರಿಕ ಬಳಕೆಗಾಗಿ ಪೂರೈಸಬಹುದೆಂಬ ನಿರೀಕ್ಷಣೆ ಇದೆ. ರಶಿಯದ ಯು-500 ಎಂ.ಎಚ್.ಡಿ ಕೇಂದ್ರವು ಜಗತ್ತಿನಲ್ಲಿಯೇ ಪ್ರಪ್ರಥಮವೆನಿಸಲಿದೆ.

**ಎಂ.ಎಚ್.ಡಿ. ವಿದ್ಯುದುತ್ಪಾದನೆಗಾಗಿ ಭಾರತ ಸರಕಾರವು ಕೈಕೊಂಡ ಕಾರ್ಯಕ್ರಮ:** ಊರ್ಜಾ ಸಂಶೋಧನ ಕಾರ್ಯದ ಅಂಗವಾಗಿ, ಭಾರತ ಸರಕಾರದ Department of Non-conventional Energy ಕಲ್ಲಿದ್ದಲನ್ನು ಆಧರಿಸಿದ ಎಂ.ಎಚ್.ಡಿ. ಯೋಜನೆಯ ಮಾರ್ಗದರ್ಶಕ (Pilot) ಕೇಂದ್ರವನ್ನು ಈ ವಿಧಾನದ ಅಧ್ಯಯನಕ್ಕಾಗಿ ತಮಿಳುನಾಡಿನ ತಿರುಚಿನಾಪಳ್ಳಿಯಲ್ಲಿ ಸ್ಥಾಪಿಸಿದೆ. ಇದರಲ್ಲಿ ಬಿ.ಎಚ್.ಈ.ಎಲ್. (ಭಾರತ್ ಹೆವಿ ಇಲೆಕ್ಟ್ರಿಕಲ್ಸ್ ಲಿಮಿಟೆಡ್) ಹಾಗೂ ಮುಂಬಯಿಯ ಭಾಭಾ ಅಣುಶಕ್ತಿ ಸಂಶೋಧನೆ ಕೇಂದ್ರಗಳು ಸಹಭಾಗಿಗಳಾಗಿವೆ. ಆಗಸ್ಟ್ 16, 1985 ರಂದು ಈ ಯೋಜನೆಗೆ ಅಧಿಕೃತ ಮಾನ್ಯತೆ ದೊರೆಯಿತು. ಪ್ರಪ್ರಥಮವಾಗಿ ಊರ್ಜಾಶಕ್ತಿಯನ್ನು ಉತ್ಪಾದಿಸಲಾಯಿತು. ಹೆಚ್ಚಿನ ಉತ್ಪಾದನೆಗಾಗಿ ಪ್ರಯೋಗಗಳು ಮುಂದುವರಿದಿವೆ.

ಯಶಸ್ವಿಯಾಗುತ್ತಿರುವ ಈ ಕೇಂದ್ರದ ಪ್ರಯೋಗಗಳಿಂದ ಈ ತಂತ್ರಜ್ಞಾನದ ವಿಕಾಸ ಮಾಡುತ್ತಿರುವ ರಾಷ್ಟ್ರಗಳ ಗುಂಪಿನಲ್ಲಿ ಭಾರತವೂ ಸಮಾವೇಶವಾಗಿದೆ. ಬಿ.ಎಚ್.ಈ.ಎಲ್.ನ ತಿರುಚಿನಾಪಳ್ಳಿಯ ಆವಾರದಲ್ಲಿಯೇ ಈ ಕೇಂದ್ರದ ಸ್ಥಾಪನೆಯಾಗಿದೆ. ಈ ಯೋಜನೆಗಾಗಿ ಭಾರತ ಸರಕಾರವು ಹದಿನೆಂಟು ಕೋಟಿ ರೂಪಾಯಿಗಳನ್ನು ಒದಗಿಸಿದೆ. ಈ ಕೇಂದ್ರವು ಒಂದು ಸೆಕೆಂಡಿಗೆ ಒಂದು ಕೆ.ಜಿ. 5 ಎಂ.ಡಬ್ಲ್ಯೂ (ಟಿ) ಯಷ್ಟು ಪ್ಲಾಸ್ಮಾವನ್ನು ಉತ್ಪಾದಿಸುವಂತೆ ಯೋಜನೆ ಮಾಡಲಾಗಿದೆ. ಈ ಉತ್ಪತ್ತಿಯನ್ನು ಸೆಕೆಂಡಿಗೆ 3 ಕೆ.ಜಿ.ಯಷ್ಟು ಮುಂದಿನ ಹಂತದಲ್ಲಿ ಅಧಿಕಗೊಳಿಸಲಾಗುವುದು. ಎಂ.ಎಚ್.ಡಿ. ವಿದ್ಯುದುತ್ಪಾದನೆಯ ಕಾರ್ಯದಲ್ಲಿ ವಿಜ್ಞಾನದ ವಿವಿಧ ಶಾಖೆಗಳ ಸಹಾಯ, ಸಹಕಾರಗಳು ಅಗತ್ಯವಾಗಿವೆ. ಈ ಮಾರ್ಗದರ್ಶಕ ಕೇಂದ್ರದಿಂದ ಅನುಭವವನ್ನು ಪಡೆದು, ಈ ತಾಂತ್ರಿಕ ವಿಧಾನವನ್ನು ಹೆಚ್ಚು ಪ್ರಯೋಜನಕಾರಿಯಾಗಿ ಮಾಡಲು ಎಂ.ಎಚ್.ಡಿ. ಕೇಂದ್ರಗಳನ್ನು ದೇಶದಾದ್ಯಂತ ಪ್ರಸ್ಥಾಪಿಸುವುದು ಮುಂದಿನ ಮೆಟ್ಟಿಲಾಗಿದೆ.

**ಎಂ.ಎಚ್.ಡಿ. ಯಿಂದ ರಾಷ್ಟ್ರಕ್ಕೆ ಲಭಿಸುವ ಮುಖ್ಯ ಪ್ರಯೋಜನಗಳು:**

1) ಅಧಿಕ ಕಾರ್ಯಕ್ಷಮತೆ-ಸದ್ಯಕ್ಕೆ ಪ್ರಚಾರದಲ್ಲಿರುವ ಔಷ್ಣಿಕ ವಿದ್ಯುದುತ್ಪಾದನೆಯ ಕೇಂದ್ರಗಳ ಕಾರ್ಯಕ್ಷಮತೆ ಪ್ರತಿಶತ 35 ಕ್ಕಿಂತಲೂ ಕಡಿಮೆಯಾಗಿದೆ. ಇದಕ್ಕೆ ಬದಲಾಗಿ ಎಂ.ಎಚ್.ಡಿ. ಕೇಂದ್ರಗಳಲ್ಲಿ ಅದು ಪ್ರತಿಶತ 50ಕ್ಕಿಂತ ಹೆಚ್ಚಾಗುವುದು. ಇದರಿಂದ ಉರುವಲಾದ ಕಲ್ಲಿದ್ದಲಿಯ ಉಳಿತಾಯವಾಗುವುದು.

2) ಹವೆಯ ಪ್ರದೂಷಣದ ಭೀತಿಯು ದೂರವಾಗುವುದು.

3) ಈ ವಿಧಾನದಲ್ಲಿ ಉಗಿಯ ಅಗತ್ಯವಿಲ್ಲದ್ದರಿಂದ ಹೆಚ್ಚಿನ ನೀರಿನ ಪೂರೈಕೆ ಬೇಕಿಲ್ಲ. ಅಂತೆಯೇ ನೀರಿನ ಕೊರತೆ ಇರುವ ಆಸ್ಟ್ರೇಲಿಯಾ ದೇಶವು ಈ ವಿಧಾನದ ಬಗ್ಗೆ ಹೆಚ್ಚಿಗೆ ಆಸ್ಥೆ ವಹಿಸಿರುವುದು.

4) ಸಾಂಪ್ರದಾಯಿಕ ವಿಧಾನಗಳಲ್ಲಿ ಉತ್ಪನ್ನವಾಗುವ ನೈಟ್ರಿಕ್ ಆಕ್ಸೈಡುಗಳು ಹವೆಯ ಪ್ರದೂಷಣವನ್ನು ಮಾಡುವವು. ಆದರೆ ಎಂ.ಎಚ್.ಡಿ.ಯಲ್ಲಿ ಜನಿಸುವ ಪ್ರದೂಷಕ ವಸ್ತುಗಳನ್ನು ರಾಸಾಯನಿಕ ಗೊಬ್ಬರವಾಗಿ ಉಪಯೋಗಿಸಬಹುದು. ಕೃಷಿ ಪ್ರಧಾನವಾದ ನಮ್ಮ ದೇಶಕ್ಕೆ ಇದೊಂದು ವರವೆನ್ನಬಹುದು.

# 'ಪಂಚಾಂಗ'

## ಎಂದರೇನು ?

— ಶಂ.ಬಾ. ಮನಗೋಳಿ —

'ಪಂಚಾಂಗ' ಅಂದರೆ ಐದು ಅಂಗಗಳು. ಜ್ಯೋತಿಷ್ಯಶಾಸ್ತ್ರವು ವೇದಾಂಗವೆಂದು ಗಣಿಸಲ್ಪಡುತ್ತದೆ. ಅದಕ್ಕೆ ಆಧಾರ ಪಂಚಾಂಗ. ವಾರ, ನಕ್ಷತ್ರ, ಯೋಗ. ಕರಣೆಗಳನ್ನು ತಿಳಿಯಪಡಿಸುವುದು ಪಂಚಾಂಗ.

ಸಾಮಾನ್ಯವಾಗಿ ಒಂದು ಪಂಚಾಂಗವನ್ನು ತೆಗೆದುಕೊಂಡು ಅದರ ಪುಟಗಳನ್ನು ಓದುತ್ತ ಹೋದಾಗ ಮೊದಲು ಕಂಡುಬರುವುದು ಶಕೆ, ಸಂವತ್ಸರ, ಅಯನ, ಋತು, ಮಾಸ, ಪಕ್ಷ. ಅನಂತರ ಆ ಮಾಸದ ಆ ಪಕ್ಷದಲ್ಲಿ ಪ್ರಾರಂಭವಾಗುವ ತಿಥಿ, ವಾರ, ತಿಥಿಯ ಆ ದಿವಸ ಭೋಗಿಸುವ ಘಟಿಕಾ ಪಳಗಳು, ಅದರ ನಂತರ ಆ ದಿವಸ ಇರುವ ನಕ್ಷತ್ರ, ಆ ನಕ್ಷತ್ರ ಭೋಗಿಸಿ ಮುಗಿಸುವ ಘಟಿಕಾ ಪಳಗಳು, ಅನಂತರ ಆ ದಿವಸ ಇರುವ ಯೋಗ, ಆ ಯೋಗವು ಭೋಗಿಸಿ ಮುಗಿಸುವ ಘಟಿಕಾ ಪಳಗಳು, ತದನಂತರ ಇರುವುದು ಕರಣೆ, ಅದು ಭೋಗಿಸುವ ಘಟಿಕಾ ಪಳಗಳು, ಆ ನಂತರ ಬರುವುದು ದಿನಮಾನನ ಘಟಿಕಾ ಪಳಗಳು. ಪ್ರತಿಯೊಂದು ನಕ್ಷತ್ರವೂ ತಿಥಿ ಯೋಗ ಕರಣೆಗಳ ಭುಕ್ತ ಭೋಗ್ಯ ಘಟಿಕಾ ಪಳಗಳು ಒಂದೇ ಆಗಿರದೆ ಅವುಗಳ ಗತಿಯಲ್ಲಿ ಹೆಚ್ಚ ಕಡಿಮೆ ಇರುವುದು ಗಮನದಲ್ಲಿಟ್ಟುಕೊಳ್ಳಬೇಕಾದ ವಿಷಯ. ಅಂತೆಯೇ ದಿನಮಾನವು ಹೆಚ್ಚು ಕಡಿಮೆ ಇರುವುದು. ದಿನಮಾನದ ನಂತರ ಕಾಣುವುದು 'ಭಪಾದ'. ಅಂದರೆ ನಕ್ಷತ್ರದ ನಾಲ್ಕು ಪಾದಗಳಲ್ಲಿ ಪ್ರತಿಯೊಂದು ಪಾದಕ್ಕೆ ಆಗುವ ಘಟಿಕಾ ಪಳಗಳು. ಆ ನಂತರ ಬರುವುದು ರೋಮನ್ ತಾರೀಖು. ಆ ನಂತರ ಇರುವುದು ಆ ದಿವಸದ ರವಿ ಉದಯದ ವೇಳೆ ಮತ್ತು ಅದರ ಮುಂದಿರುವುದು ಸೂರ್ಯಾಸ್ತದ ವೇಳೆ. ಅದರ ಮುಂದೆ ಇರುವುದು ಚಂದ್ರನಿರುವ ರಾಶಿ. ಇವಿಷ್ಟು ವಿವರಗಳ ನಂತರ ಮುಂದೆ ಆ ದಿವಸದಲ್ಲಿ ಇರುವ ಹಬ್ಬ ಹರಿದಿನಗಳು. ಶುಭಾಶುಭ ಕಾರ್ಯಗಳ ವಿವರ, ತಿಥಿ, ವಾರ, ನಕ್ಷತ್ರಗಳ ಮಿಲನದಿಂದ ಆಗುವ ಯೋಗಗಳು, ಗ್ರಹಗಳ ಸ್ಥಾನಮಾನ ಇವೇ ಮೊದಲಾದ ವಿವರಗಳಿರುವವು. ಇದು ಪಂಚಾಂಗದ ಸ್ಥೂಲವಿವರಣೆ; ಫಲಜ್ಯೋತಿಷ್ಯಕ್ಕೆ ಇದೇ ಮೂಲಾಧಾರ. ಅದರಂತೆ ಜ್ಯೋತಿಃ ಶಾಸ್ತ್ರಕ್ಕೆ ಕಾಲಗಣನೆಯು ಅತ್ಯವಶ್ಯ. ಕಾಲವು ಎರಡು ಪ್ರಕಾರದ್ದು, ಒಂದು ಅಖಂಡ, ಎರಡನೆಯದು ಖಂಡ. ಖಂಡ ಕಾಲವು ಜ್ಞಾನಗಮ್ಯ ಒಂದು ಸೂಕ್ಷ್ಮ, ಇನ್ನೊಂದು ಸ್ಥೂಲ. ಅಮೂರ್ತಕಾಲ ಕೇವಲ ಯೋಗಿಗಳಿಗೆ ತಿಳಿಯುವಂಥದು. ಮೂರ್ತ ಕಾಲ ಎಲ್ಲರಿಗೂ ತಿಳಿಯುವಂಥದು, ಅದನ್ನು ಅಳೆಯಬಹುದಾಗಿದೆ.

ಕಾಲಗಣನೆಯಲ್ಲಿ ಕೆಳಗಿನಂತೆ 9 ಪ್ರಕಾರಗಳಿವೆ: 1) ಬ್ರಾಹ್ಮ, 2) ದಿವ್ಯ, 3) ಪೈತ್ರ್ಯ, 4) ಪ್ರಾಜಾಪತ್ಯ, 5) ಬಾರ್ಹಸ್ಪತ್ಯ, 6) ಸೌರ, 7) ಸಾವನ, 8) ಚಾಂದ್ರ, 9) ನಾಕ್ಷತ್ರ. ಆದರೆ ಮನುಷ್ಯಲೋಕದಲ್ಲಿ ಸೌರಮಾನ, ಚಾಂದ್ರಮಾನ, ನಾಕ್ಷತ್ರಮಾನ ಮತ್ತು ಸಾವನಮಾನ ಈ ನಾಲ್ಕು ಮಾತ್ರ ರೂಢಿಯಲ್ಲಿವೆ.

**ಸಂವತ್ಸರಗಳು:**

ಚಾಂದ್ರ, ಸೌರ, ಸಾವನ, ನಾಕ್ಷತ್ರ, ಬಾರ್ಹಸ್ಪತ್ಯ ಹೀಗೆ ಸಂವತ್ಸರಗಳಲ್ಲಿ ಐದು ಪ್ರಕಾರಗಳಿವೆ. 1) ಚಾಂದ್ರಸಂವತ್ಸರ ಶುಕ್ಲ ಪ್ರತಿಪದೆಯಿಂದ ಅಮಾವಾಸ್ಯೆಯವರೆಗೆ ಚೈತ್ರ ಮೊದಲ್ಗೊಂಡು 12 ತಿಂಗಳಲ್ಲಿ 354 ದಿವಸಗಳ

ಒಂದು ವರ್ಷ. ಅಧಿಕ ಮಾಸ ಬಂದಾಗ 13 ಮಾಸ ಅಂದರೆ 384 ದಿನಗಳು.

2) ಸೌರಸಂವತ್ಸರ: ಮೇಷ ರಾಶಿಯಿಂದ 12 ರಾಶಿಗಳಲ್ಲಿ ಸೂರ್ಯನು ಸಂಚರಿಸಲಿಕ್ಕೆ ಹತ್ತುವ ಕಾಲ. ಅದರ ಅವಧಿ 365 ದಿವಸ 15 ಘಟಿಕಾ 23 ಪಳ.

3) ಸಾವನ ವರ್ಷ: 360 ದಿನಗಳದು.

4) ನಕ್ಷತ್ರವರ್ಷ: 12 ನಾಕ್ಷತ್ರ ಮಾಸಗಳಿಂದ 324 ದಿನಗಳ ಒಂದು ವರ್ಷ.

5) ಬಾರ್ಹಸ್ಪತ್ಯ ವರ್ಷ: ಗುರು ಗ್ರಹವು ಒಂದು ರಾಶಿಯನ್ನು ಕ್ರಮಿಸಲಿಕ್ಕೆ ಬೇಕಾಗುವ ವರ್ಷ. ಇದಕ್ಕೆ 361 ದಿವಸಗಳಾಗುವುವು.

ಇವುಗಳಲ್ಲಿ ರೂಢಿಯಲ್ಲಿದ್ದವುಗಳೆಂದರೆ ಚಾಂದ್ರಮಾನ, ಸೌರಮಾನ ಮಾತ್ರ. ಚಾಂದ್ರ ಮಾನ ಸಂವತ್ಸರವು ಚೈತ್ರ ಶುದ್ಧ ಪ್ರತಿಪದೆ ಯಿಂದ ಪ್ರಾರಂಭವಾಗುವುದು. ಸೌರಮಾನವು ರವಿಯು ಮೇಷಕ್ಕೆ ಬಂದ ಕೂಡಲೆ ಅಂದರೆ ಮೇಷ ಸಂಕ್ರಾಂತಿಯಿಂದ ಪ್ರಾರಂಭವಾಗು ವುದು. ಸಾವನ ಸಂವತ್ಸರವು ನಿಮಗೆ ಬೇಕಾದ ದಿನದಿಂದ (360 ದಿವಸಗಳಿಗೆ) ಪ್ರಾರಂಭ ವಾಗುವುದು.

**ಶಕಪುರುಷರು**

ಕಲಿಯುಗದಲ್ಲಿ ಶಕಪುರುಷರು ಆರು ಮಹನೀ ಯರು. 1) ಹಸ್ತಿನಾಪುರದಲ್ಲಿ ಯುಧಿಷ್ಠಿರ 3044 ವರ್ಷ, 2) ಉಜ್ಜಯನಿಯಲ್ಲಿ ವಿಕ್ರಮ 135 ವರ್ಷ, 3) ಪೈಠಣಿಯಲ್ಲಿ ಶಾಲಿವಾಹನ 18000 ವರ್ಷ, 4) ಸಿಂಧು ಸಂಗಮದಲ್ಲಿ ವಿಜಯಾಭಿನಂದನ 10000 ವರ್ಷ, 5) ಗೌಡ ದೇಶದ ಧಾರಾತೀರ್ಥದಲ್ಲಿ ನಾಗಾರ್ಜುನ 4,00,000 ವರ್ಷ, 6) ಕರ್ನಾಟಕದ ಕರ ವೀರ ಪಟ್ಟಣದಲ್ಲಿ ಕಲ್ಕಿ 821 ವರ್ಷ. ಈ ಪ್ರಕಾರ ಆರು ಶಕಪುರುಷರಾದ ನಂತರ ಕಲಿ ಯುಗದ ಸಮಾಪ್ತಿ.

ಪ್ರಭವಾದಿ ಸಂವತ್ಸರ, ತಿಥಿವಾರ, ನಕ್ಷತ್ರ, ರಾಶಿ ಗ್ರಹ ರಾಶ್ಯಾಧಿಪತಿ ಮೊದಲಾದವೆಲ್ಲ ಜ್ಯೋತಿಃ ಶಾಸ್ತ್ರದ ಮೂಲ ತಳಹದಿಗಳಾದ ಪಂಚಾಂಗಗಳ ವಿವರಗಳು. ಯಾವುದೊಂದು ತಿಥಿಯ ದಿವಸ ಯಾವುದೊಂದು ನಕ್ಷತ್ರವು ಬಂದರೆ ಅದಕ್ಕೆ ಶುಭಾಶುಭ ಫಲಗಳುಂಟಾಗು ವವು.

ರವಿ, ಚಂದ್ರ ಮೊದಲಾದ ಗ್ರಹಗಳ ಪರಿ ಭ್ರಮಣ ಗತಿ ಭಿನ್ನಭಿನ್ನವಾಗಿರುವುದು. ಒಂದು ರಾಶಿಯನ್ನು ಕ್ರಮಿಸಲಿಕ್ಕೆ ರವಿಗೆ ಒಂದು ಮಾಸ, ಚಂದ್ರನಿಗೆ ಎರಡೂಕಾಲು ದಿವಸ, ಮಂಗಳನಿಗೆ 45 ದಿವಸ, ಬುಧನಿಗೆ 30, ದಿವಸ ಗುರುವಿಗೆ 13 ಮಾಸ, ಶುಕ್ರನಿಗೆ 30 ದಿವಸ, ಶನಿಗೆ 2 ವರ್ಷ ಆರು ತಿಂಗಳು, ರಾಹು ಕೇತು 18 ತಿಂಗಳು, ಇವರ ಗತಿ ವಕ್ರ. ರವಿ, ಚಂದ್ರರನ್ನು ಹೊರತುಪಡಿಸಿ ಉಳಿದ ಐದು ಗ್ರಹಗಳಿಗೆ ನಿಶ್ಚಿತ ಅವಧಿಯಲ್ಲಿ ವಕ್ರಗತಿ ಪ್ರಾಪ್ತವಾಗುವುದು; ಮತ್ತು ಅಂಶಾತ್ಮಕವಾಗಿ ರವಿಯೊಡನೆ ಕೂಡಿದಾಗ ಅಸ್ತವೂ ಆಗುವುವು.

ಇತ್ತೀಚೆಗೆ ಪ್ರಕಟವಾಗುತ್ತಿರುವ ಪಂಚಾಂಗ ಗಳಲ್ಲಿ ಸೂರ್ಯ ಸಿದ್ಧಾಂತ ಮತ್ತು ದೃಗ್ಗಣಿತ ಪದ್ಧತಿಯ ಮೂಲಕ ತಿಥಿ, ನಕ್ಷತ್ರ, ಯೋಗ, ಕರಣಗಳ ಘಟಿಕಾ ಪಳಗಳಲ್ಲಿ ಅಂತರ ಕಂಡು ಬರುವುದುಂಟು. ಅದೇ ಮೇರೆಗೆ ತಿಥಿ ವರ್ಣ ಯದಲ್ಲಿಯೂ ಅಂತರವು ಕಂಡು ಬರುವು ದುಂಟು. ಕೆಲ ವರ್ಷಗಳ ಹಿಂದೆ ಜನತೆಯಲ್ಲಿ ಜ್ಯೋತಿಃ ಶಾಸ್ತ್ರದ ಬಗೆಗೆ ಅಷ್ಟೊಂದು ಆಸಕ್ತಿ ಇದ್ದಿಲ್ಲ. ಆದರೆ ದಿನಗಳೆದಂತೆ ನಮ್ಮ ದೇಶ ದಲ್ಲಿ ಜೀವನ ನಿರ್ವಹಣೆಗೆ ಹೆಜ್ಜೆಹೆಜ್ಜೆಗೆ ಅಡ್ಡಿ ಆತಂಕಗಳು ಬರಲಾರಂಭಿಸಿದ್ದರಿಂದಲೂ ದೇಶದ ರಾಜಕೀಯದಲ್ಲಿ ದಿನ ದಿನಕ್ಕೆ ಸ್ಥಿತ್ಯಂತ ರಗಳಾಗುತ್ತ ಸಾಗಿದ್ದರಿಂದಲೂ ಸಾಮಾನ್ಯ ವಾಗಿ ವ್ಯವಹಾರಸ್ಥರು, ಮಹತ್ವಾಕಾಂಕ್ಷಿಗಳಾದ ರಾಜಕಾರಣಿಗಳು, ಅದರಂತೆ ಜನಸಾಮಾ ನ್ಯರು ಕೂಡ ಇತ್ತಿತ್ತಲಾಗಿ ಜ್ಯೋತಿಷಿಗಳ ಸಲಹೆ ಮಾರ್ಗದರ್ಶನಗಳಿಗಾಗಿ ಓಡಾಡುತ್ತಿದ್ದಾರೆ. ಈ ಪರಿಸ್ಥಿತಿಯ ದುರ್ಲಾಭ ಪಡೆದು ಅನೇಕ ಜನ ಸಮಯಸಾಧಕರು ಒಂದೆರಡು ಪುಸ್ತಕ ಗಳನ್ನು ಓದಿಕೊಂಡು ಜ್ಯೋತಿಷಿಗಳಾಗಿ ಮುಗ್ಧ ಜನತೆಯನ್ನು ವಂಚಿಸುತ್ತಲೂ ಇದ್ದಾರೆ.

ಹಲವು ಜನ ಸುಶಿಕ್ಷಿತರೆಂದುಕೊಳ್ಳುವವರು ಈ ಶಾಸ್ತ್ರವೇ ಸುಳ್ಳೆಂದು ಪ್ರಚಾರ ಮಾಡು ತ್ತಲೂ ಇದ್ದಾರೆ. ಆದರೆ ಇದೊಂದು ಗಹನ ವಾದ ವೇದಾಂಗ ಶಾಸ್ತ್ರವಾಗಿದ್ದು, ಪ್ರತಿ ಯೊಬ್ಬ ವ್ಯಕ್ತಿ ತನಗೆ ದಿನದಿನವೂ ಬೇಕಾಗುವ ಮುಹೂರ್ತಗಳನ್ನು ಶುಭಾಶುಭ ಕಾಲವನ್ನೂ ತಿಳಿಯುವುದು ಅವಶ್ಯ. ●

**ಮಲಯಾಳಂ ಕಥೆ**

# ಪಾಪ ಮನಸ್ಸು

ಮಗು ಆಗಲೂ ಅಳುತ್ತಿತ್ತು... ಒದ್ದೆಯಾದ ಕೊಳೆದುಂಬಿದ ಕೆನ್ನೆಗಳನ್ನು ಕಂಡಾಗ ಎನಿಸಿತು ಅಳಲಿ ಎಂದು.

ಅತ್ತು ಅತ್ತು...

ಬೆಚ್ಚಿ ಬಿದ್ದು ನೆನೆದೆ

ಈ ಮಗುವಿನದೇನು ತಪ್ಪು?

ಸ್ವಂತ ಮನಸ್ಸಿಗೆ ಕೆರೆದು ಘಾಸಿಪಡಿಸಲು ಗಾಯ ಮಾಡಿದುದು ಈ ಮಗುವಲ್ಲವಲ್ಲ.

ಮಗು ಮುಖವನ್ನು ತುಸು ಮೇಲೆತ್ತಿ ನೋಡಿ ಪುನಃ ಅಳತೊಡಗಿತು. ಅದೇ ಹುಬ್ಬುಗಳು...

ಒಂದು ಕೂದಲೆಳೆಯಂತರದಲ್ಲಿ ಪರಸ್ಪರ ಸೇರುವಂತಿರುವ ಹುಬ್ಬುಗಳು... ಅದೇ ನೋಟ.

ಓಡಿ ಹೋಗಿ ಕೈಗಳಲ್ಲಿ ಬಾಚಿ ಎತ್ತಿಕೊಳ್ಳ ಬೇಕೆನಿಸಿದ ಆವೇಶವನ್ನು ಅಡಗಿಸಿಕೊಂಡಾಗ ನಾನೇ ಹೇಳಿಕೊಂಡೆ... ನನಗಿನ್ನು ಇದರಿಂದ ವಿಮೋಚನೆಯಿಲ್ಲ...

ಈ ಗಾಯದಿಂದ...

ಈ ಗಾಯದ ಉರಿಯಿಂದ...

ಈ ಅಪರಾಧಿ ಭಾವದಿಂದ...

ಮಗುವನ್ನು ಹೊಡೆಯಬೇಕಾಗಿರಲಿಲ್ಲ.

ಬೀರುವಿನ ಮೇಲಿನಿಂದ ಆಟಿಕೆಯನ್ನು ಕೈ ಚಾಚಿ ಎಳೆದುಕೊಳ್ಳಲಾರಂಭಿಸಿದಾಗ ಅದನ್ನು ನೋಡುತ್ತಾ ಕುಳಿತುಕೊಳ್ಳದೆ ಕುರ್ಚಿಯಿಂದ ಮೇಲೆದ್ದು ಅದನ್ನು ತೆಗೆದುಕೊಡಬಹುದಾಗಿತ್ತು. ಏಳದೆ ಅದನ್ನು ನೋಡುತ್ತಾ ಕುಳಿತುಕೊಳ್ಳಬೇಕೆಂದೇ ಅನಿಸಿತು. ಕೊನೆಗೆ ಕೈ ತಾಗಿ ಫೋಟೋ ಕೆಳಗೆ ಬಿದ್ದಾಗ ಅನಿಸಿದ್ದಾದರೂ ಏನು?

ಸಂತೃಪ್ತಿಯೇ?

ಫೋಟೋದ ಗಾಜು ಒಡೆದು ಚೆದುರಿ ಬಿದ್ದಿತು. ಒಡೆದ ಗಾಜಿನ ಕೆಳಗೆ ನನ್ನ ಮುಖ ಕಾಣಿಸಿತು. ಪಕ್ಕದಲ್ಲಿ ಅರ್ಧ ಬೋಳಾಗಿಹ ತಲೆಯ ರೂಪ. ತಟ್ಟನೆ ಮೇಲೆದ್ದು ಮಗುವನ್ನು ಹೊಡೆಯಲು ಪ್ರೇರೇಪಿಸಿದುದು ಏನು?

"ನಾಶ...ನಾಶ... ನಾಶಮಾಡು. ಎಲ್ಲಾ ಹಾಳುಮಾಡು" ಕೈಗಳು ಮಾರ್ದವವುಳ್ಳ ಮುಖದ ಮೇಲೆ ಎರಗಿಳಿದಾಗ ತೋರಿತು.

ನಾನು ಯಾರನ್ನು ಹೊಡೆದದ್ದು?

ನನ್ನ ಮಗನನ್ನೇ? ನನ್ನನ್ನೇ?

ಕಿಟಕಿಯಿಂದ ಅಂಗಳದಲ್ಲಿ ಬಿದ್ದಿದ್ದ ಜಾರು ಬಿಸಿಲನ್ನು ನೋಡುತ್ತಾ ಆಲೋಚಿಸಿದೆ.

ಇತ್ತೀಚೆಗೆ ಸಣ್ಣಪುಟ್ಟ ವಿಷಯಗಳಿಗೂ ತಾಳ್ಮೆಗೆಡುತ್ತೇನೆ ಏಕೆ? ಎಲ್ಲಾ ಮರೆಯಲು ಸಾಧ್ಯ ಎಂದು ಭಾವಿಸಿದುದು ಸುಳ್ಳೇ?

ಇಲ್ಲ ಸ್ವಂತ ಮನಸ್ಸಿನಿಂದ ಮರೆಯಾಗಿ ಓಡಲು ಸಾಧ್ಯವಿಲ್ಲ, ಪಲಾಯನ ಯಾವುದಕ್ಕೂ ಪರಿಹಾರವಾಗೋದಿಲ್ಲ ಎಂದು ಅರಿವಾಗಲು ನಾಲ್ಕು ವರ್ಷಗಳು ಬೇಕಾದವೇ...

★

ಇಂತಹುದೇ ಒಂದು ಸಾಯಂಕಾಲವಾಗಿತ್ತು ಅದು. ಪಾದರಕ್ಷೆಗಳ ಶಬ್ದವಾದಾಗ ಸಂಶಯಿಸಿದೆ... ಅವರಿರಬಹುದೇ? ಟೂರ್ ಕ್ಯಾನ್ಸಲ್ ಮಾಡಿರಬಹುದೇ? ಅಥವಾ ಔಷಧಿ ಯಾವುದಾದರೂ ತೆಗೆದುಕೊಳ್ಳಲು ಮರೆತರೇ?

ಅದಕ್ಕೆ ಅವಕಾಶವಿಲ್ಲ. ಎಂದಿನಂತೆ ನಾನೇ ಅಲ್ಲವೇ ಔಷಧಿಗಳನ್ನು ತೆಗೆದುಕೊಟ್ಟಿದ್ದು? ಇನ್ಸುಲಿನ್‌ನ ಎರಡು ಬಾಟಲ್ ಕ್ಯಾಪ್ಸೂಲ್, ಟಾನಿಕ್ ಬಾಟಲ್ ಎಲ್ಲಾ ಕ್ರಮವಾಗಿ ಹೊಂದಿಸಿದ್ದೆ.

ಸಾಧಾರಣದಂತೆ ಅವನ್ನೆಲ್ಲಾ ಬ್ಯಾಗ್ ತೆಗೆದು ನೋಡುವಾಗ ನಾನು ಕೇಳಿಯೂ ಇದ್ದೆ: "ನನ್ನನ್ನು ಇದುವರೆಗೂ ನಂಬಲು ಆಗಲಿಲ್ಲವೆ?"

"ನಂಬಿಕೆಯ ಪ್ರಶ್ನೆಯಲ್ಲ. ಎಲ್ಲಾ ಪುನಃ ಒಮ್ಮೆ ಖಚಿತಪಡಿಸಿಕೊಳ್ಳುವುದು ಒಳ್ಳೆಯದಲ್ಲವೇ?" ಅದನ್ನು ಕೇಳಿದಾಗ ಮನದಲ್ಲಿ ಉಮ್ಮಳಿಸಿ ಬಂದ ಮಾತುಗಳನ್ನು ಅಡಗಿಸಲು ಶ್ರಮಪಡಬೇಕಾಯಿತು. ಖಚಿತಪಡಿಸಿಕೊಂಡು ಪಡೆದದ್ದಾದರೂ ಇದನ್ನೇ ತಾನೇ! ದಿನ ತಪ್ಪದೆ ಇನ್ಸುಲಿನ್ ಇಂಜಕ್ಷನ್ನೂ ತಾಳ ತಪ್ಪಿ ಮಿಡಿಯುವ ಹೃದಯವೂ ಹೇಳಲಿಲ್ಲ, ಸುಮ್ಮನೆ ಏಕೆ ಉಪದ್ರವ ಕೊಡುವುದು ಎಂದು ಭಾವಿಸಿದೆ.

★

ಮೂಲ: ಜನಾರ್ದನ ಕುರುಪ್
ಕನ್ನಡಕ್ಕೆ: ಡಾ. ಅಶೋಕಕುಮಾರ್



ಬಾಗಿಲು ತೆರೆದು ನೋಡಿದಾಗ ನನ್ನನ್ನೇ ನಂಬಲಾಗದೆ ಅರೆಕ್ಷಣ ನಿಂತುಬಿಟ್ಟೆ. ಅದನ್ನ ರಿತೇ ಇರಬೇಕು ಕೇಳಿದುದು. "ವಿಜಯಾ ನನ್ನನ್ನು ನೋಡಿ ಗಾಬರಿಯಾದೆಯಾ?"

ಅದೇ ಮುಖ, ಅದೇ ನಗು; ಸ್ವಲ್ಪ ದಪ್ಪ ಗಾಗಿರುವಂತೆ ತೋರಿತು. ನಗುವಾಗ ಕೂಡ ಹುಬ್ಬುಗಳ ಮೇಲೆ ಬೀಳುವ ಸುಕ್ಕುಗಳನ್ನು ನೋಡುತ್ತಾ ನಿಂತಾಗ ಏನೂ ಹೇಳ ಬೇಕೆಂದೆನಿಸಲಿಲ್ಲ.

"ಏನು ನಾನು ಇಲ್ಲೇ ನಿಂತು ಹೇಳಬೇಕಾದು ದನ್ನು ಹೇಳಿಬಿಟ್ಟು ಹೋದರೆ ಸಾಕೆಂದೇನು? ಒಳಗೆ ಬರಬಾರದೆಂದೇನು?" ಎಂದು ಹೇಳಿ ಜೋರಾಗಿ ನಕ್ಕಾಗಲೇ ನನ್ನ ತಪ್ಪು ಅರಿ ವಾದದ್ದು. ಸಾವರಿಸಿಕೊಂಡು ಬಾಗಿಲ ಪಕ್ಕಕ್ಕೆ ಸರಿದು ನಿಂತು ಹೇಳಿದೆ "ಬನ್ನಿ"...

ಅಡಿಗೆ ಮನೆಯಲ್ಲಿ ಕಾಫಿ ಮಾಡುವಾಗಲೂ ಆಗಾಗ ಸರಳುಗಳ ಮೂಲಕ ಡೈನಿಂಗ್ ರೂಂನಲ್ಲಿ ಕುಳಿತಿರುವವನನ್ನು ನೋಡು ವಾಗಲೂ ಮನಸ್ಸಿನಲ್ಲಿ ತುಂಬಿದ್ದವನು 'ಕಚ'. 'ಕಚ- ದೇವಯಾನಿ'ಯಲ್ಲಿಯ 'ಕಚ' ಅಂದೆಲ್ಲಾ ಭಾವಿಸಿದ್ದೆ. ಈ ಮನುಷ್ಯನ ನೋಟದಲ್ಲೂ ನಡವಳಿಕೆಯಲ್ಲೂ ಎಲ್ಲಾ ನೃತ್ಯವೆಂದು, ಕಲೆ ಯೆಂದು.

ರಂಗಸ್ಥಳಕ್ಕೆ ತಂದೆಯೊಡನೆ ಕಾರಿನಲ್ಲಿ ಬಂದಿಳಿದ ಯುವಕ ಅಂದು ಉಳಿದವರ ನಡುವೆ ಒಂದು ಅದ್ಭುತವಾಗಿ ಕಾಣಿಸಿದ. ಅಂಬಾಸಿಡರ್‌ನಲ್ಲಿ ಬಂದಿಳಿಯುವ ಪಾತ್ರ ಧಾರಿ! ಹಾಗೆ ತಾನೇ ನಾನು ಅವನನ್ನು ಗಮನಿಸಲಾರಂಭಿಸಿದ್ದು. ಕೊನೆಗೆ ರಂಗದಲ್ಲಿ ಪ್ರವೇಶವಾಗುವಾಗ ತಾನು ದೇವಯಾನಿಯೂ ಅವನು ಕಚನೂ ಆದಾಗ ಆ ಬಂಧ ಇನ್ನಷ್ಟು ನಿಕಟವಾಯಿತು.

"ವಿಜಯಾ ಈಗ ನಿನ್ನಲ್ಲಿ ಕಲೆ ಏನೂ ಉಳಿದಿಲ್ಲವೇ?" ಡೈನಿಂಗ್ ಟೇಬಲ್‌ನಿಂದ ಕೂಗಿ ಕೇಳುವುದು ಕೇಳಿಸಿತು.

"ಏನು ಕಲೆ? ಇದೇ ಎಲ್ಲಾ ಈಗಿನ ಕಲೆ!"

"ಹೌದು ವಿಜಯಾ, ನೀನು ಹೇಳಿದುದಕ್ಕೆ ನೀ ಉದ್ದೇಶಿಸಿದ ಅರ್ಥವಿದೆ. ಜೀವನವೇ ಯಥಾರ್ಥ ಕಲೆ. ಅದರಲ್ಲಿ ಪರಾಜಯ ಗೊಂಡರೆ ಬೇರಾವ ಕಲೆಯಲ್ಲಿಯ ವಿಜಯಕ್ಕೂ ಅರ್ಥವಿಲ್ಲ. ನಾನು ಪರಾಜಯ ಗೊಂಡದ್ದೂ ಅಲ್ಲೇ."

ಬಾಗಿಲ ಬಳಿ ಹೋಗಿ ಅನುಮಾನದಿಂದ ನೋಡಿದಾಗ ಅವನ ಮುಖದಲ್ಲಿ ಉಂಟಾದ ಬದಲಾವಣೆ ಕಾಣಿಸಿತು. ಆ ಕಂಗಳಲ್ಲಿ ವ್ಯಕ್ತ ವಲ್ಲದ ಏನೋ ಅಡಗಿ ಸೇರಿದೆಯೇ? ಅರಿ ಯದೇ ಹೇಳಿದೆ: "ಹಳೆಯ ಕಚನನ್ನು ನಾನು ಈಗಲೂ ಜ್ಞಾಪಿಸಿಕೊಳ್ಳುತ್ತೇನೆ."

"ಅದೆಲ್ಲಾ ಹೋಯಿತು. ಕಚನೂ ನಳನೂ ಎಲ್ಲಾ ಹೋಯಿತು. ವೇಷಧಾರಿ ಬೆಳೆದುದು ದೊಡ್ಡ ಎಕ್ಸಿಕ್ಯೂಟಿವ್ ಆಗಲು ಎಂದಾಗಿತ್ತು".

"ಆ ಮಾರ್ಪಾಡಿನ ವಿವರಗಳನ್ನೆಲ್ಲಾ ನಾನು ಬಲ್ಲೆ. ಹೆಂಡತಿ ಮಕ್ಕಳೆಲ್ಲಾ ಸೌಖ್ಯ ತಾನೆ? ಎಷ್ಟು ಮಕ್ಕಳು?" ಹಿಂಜರಿಯುತ್ತಾ ಕೇಳಿದೆ. ಸಂಸಾರ ಜೀವನದಲ್ಲಿ ಏನೋ ತಕರಾರು ಇದೆ ಎಂದೇನೋ ಹಿಂದೆ ನನ್ನವರು ಹೇಳಿದ್ದ ನೆನಪು. ಒಮ್ಮೆ ಟೂರ್ ಮುಗಿಸಿ ಬಂದಾಗ ಹೇಳಿದ್ದರು: "ಹೆಂಡತಿ... ಹುಂ... ಸೌಖ್ಯ. ಮಗ ಒಬ್ಬನೇ ಇದ್ದ. ಅವನು ಕಳೆದ ವರ್ಷ ಸಾವಿ ಗೀಡಾದ...."

ಮುಖದಲ್ಲಿ ನಿರ್ವಿಕಾರತೆ, ಕಣ್ಣುಗಳಲ್ಲಿನ ಕತ್ತಲಿನ ಆಳ ಜಾಸ್ತಿಯಾಗುತ್ತಿರುವಂತೆ ಬೇಡ ವಾದುದನ್ನೇನೋ ಕೇಳಿಬಿಟ್ಟೆ ಎಂದೆನಿಸಿತು. ಬಳಿಕ ಏನೂ ಕೇಳಲಾಗಲಿಲ್ಲ. ಕಾಫಿ ಕುಡಿಯು ವಾಗ ಹೇಳಿದ: "ನಾನಿಲ್ಲಿ ಒಂದು ಕಾನ್ಫರೆನ್ಸ್‌ಗೆ ಬಂದೆ. ನಾಳೆ ಕಾನ್ಫರನ್ಸ್."

"ಹಾಗಾದರೆ ನಾಳೆ ಹೋದರೆ ಸಾಕಲ್ಲ?" ಎಂದು ಹೇಳಿ ಮುಗಿಸಿದಾಗ ಅಷ್ಟೂ ಬೇಕಾಗಿತ್ತೆ ಎಂದೆನಿಸಿತು. ಅವರು ಇನ್ನು ಎರಡು ದಿನ ಕಳೆದೇ ಬರುವುದು. ಅವರಿಗೆ ಇಂತಹ ವಿಚಾರಗಳಲ್ಲೆಲ್ಲಾ ಸಂಶಯ ತೋರುವುದಿಲ್ಲ ಎಂದು ಗೊತ್ತು. ಆದರೂ....

ರಾತ್ರಿ ಊಟ ಬಡಿಸುವಾಗಲೂ, ಹಾಸಿಗೆ ಹಾಸಿ ಕೊಡುವಾಗಲೂ ಎಲ್ಲಾ ಹಳೆಯ ರಂಗ ಭೂಮಿಯೇ ಆಗಿತ್ತು ಮನಸ್ಸಿನಲ್ಲಿ. ಹಲವು ವಿಧದ ಮುಖಗಳು ನಳ ಕಚ ಅರ್ಜುನ...

ನನ್ನ ಮನದಲ್ಲಿ ಆ ನೆನಪುಗಳೆಲ್ಲಾ ಇಷ್ಟು ಸ್ಪಷ್ಟವಾಗಿ ಉಳಿದಿವೆಯಲ್ಲಾ ಎಂದು ನೆನೆದಾಗ ಆಶ್ಚರ್ಯವಾಯಿತು. ಬಾಗಿಲು ಮುಚ್ಚು ವುದಕ್ಕೆ ಮೊದಲು ಏನಾದರೂ ಬೇಕೆ ಎಂದು

ವಿಚಾರಿಸಲು ಕೋಣೆಯ ಬಾಗಿಲ ಬಳಿಗೆ ಹೋಗುವಾಗ ತಾನರಿಯದೇ ತುಟಿಗಳು ಉಚ್ಚರಿಸುತ್ತಿದ್ದವು...

"ಪ್ರೇಮಾನುರಾಗಿಣಿ ನಾ ವಾಮಾರ ಮಣೀಯ ಶೀಲತ್ವಾಮಾತನೋಮಿ ಹೃದಿ ಸೋಮಾಭಿರಾಮ ಮುಖ...."

ಒಳಗೆ ಮಂಚದಿಂದ ತೂರಿ ಬಂದ ಕಂಗಳ ಹೊಳಪನ್ನು ಕಂಡಾಗ ಹಾಡಿದ್ದು ಸ್ವಲ್ಪ ಗಟ್ಟಿಯಾಗಿಬಿಟ್ಟಿತಲ್ಲಾ ಎಂದು ಭಯದಿಂದ ನೆನೆದೆ.

ಏನೂ ಹೇಳದೆ ಬಾಗಿಲು ಹಾಕಿದಾಗ ಕೇಳಿಸಿತು: "ವಿಜಯಾ!'

ಬಾಗಿಲನ್ನು ತೆರೆದು ನೋಡಿದಾಗ ಎವೆಗಳನ್ನು ತನ್ನಿಂದ ಶ್ರಮಪಟ್ಟು ಕೀಳುತ್ತಾ ನೆಲದೆಡೆಗೆ ಹಾಯಿಸುತ್ತಿದ್ದನು: "ಹಳೆಯ ನೆನಪುಗಳೆಲ್ಲಾ ದಾಂಗುಡಿಯಿಟ್ಟು ಬರುತ್ತಿವೆ ಅಲ್ಲಾ?" ನಾನು ಏನೂ ನುಡಿಯಲಿಲ್ಲ. "ವಿಜಯಾ ನಿನಗೆ ಗೊತ್ತೇ ನಾವು ಅಂದು ಒಂದು ಬಹಳ ದೊಡ್ಡ ತಪ್ಪು ಮಾಡಿದೆವು!"

ಏನೆಂದು ಅರ್ಥವಾಗದೆ ನೋಡಿದಾಗ ಕೇಳಿಸಿತು.

"ನಾವು ಅಂದು ಆ ರಂಗಭೂಮಿಯಲ್ಲೇ ಸಮೀಪಿಸಬೇಕಾಗಿತ್ತು. ಆದರೆ ನಾವಿಬ್ಬರೂ ಅದಕ್ಕೆ ಪ್ರಯತ್ನಿಸಲಿಲ್ಲ. ಅದಕ್ಕೆ ಶಿಕ್ಷೆಯೇ ನನಗೆ ಸಿಕ್ಕಿದ್ದು".

"ಏನು ಶಿಕ್ಷೆ?" ಅರಿಯದೆ ತುಟಿ ಜಾರಿ ಉಸುರಿದೆ.

"ವಿಜಯ ನಿನಗೆ ನನ್ನ ದಾಂಪತ್ಯ ಜೀವನದ ವಿಶೇಷಗಳಾವುದೂ ಗೊತ್ತಿಲ್ಲ, ಅಲ್ಲವೆ?"

ಅದು ಪೀಠಿಕೆಯಾಯಿತು.

ಬಳಿಕ ಆಲಿಸಿದ ಮಾತುಗಳು ಮನಸ್ಸನ್ನು ಸ್ತಂಭಿಸಿದವು...

"ತಂದೆಯ ಒತ್ತಾಯಕ್ಕೆ ಮಣಿದು ದೊಡ್ಡ ಕಂಪನಿಯ ಎಕ್ಸಿಕ್ಯೂಟಿವ್ ಹುದ್ದೆಯನ್ನು ಮೋಹಿಸಿ ನಾನು ವಿವಾಹವಾದುದು ಓರ್ವ ಸಿರಿವಂತ ಪುತ್ರಿಯನ್ನು. ಅದಕ್ಕಾಗಿ ಬಲಿ ಕೊಡಬೇಕಾಗಿ ಬಂದದ್ದು ಒಂದು ದೊಡ್ಡ ಕಲಾ ಸಿದ್ಧಿಯನ್ನು. ಒಂದು ಜೀವನದ ಸಂಪೂರ್ಣ ಆಶಯವನ್ನು ರಾತ್ರಿಯಲ್ಲಿ ಶಯ್ಯಾಗೃಹದ ಸುಖಗಳಿಗಾಗಿ ಕಾದಿಹ ಹಾಸಿಗೆ ಹೊದಿಕೆ




"ನೀವು ಕೊಟ್ಟ ಮಾತ್ರೆಗಳಿಂದ ನಿದ್ದೆ ಬರ್‍ತಿಲ್ಲಾ ಡಾಕ್ಟ್ರೇ... ಅದಕ್ಕೆ ಇದನ್ನ ಖರೀದಿಸಿದೆ."

ಕಂಡೊಡನೆ ಚಿತ್ತಭ್ರಮೆಯಾಗಿ ಕತ್ತಿ ಹಿರಿಯುವ ಹೆಂಡತಿ.

"ಧೈರ್ಯವಿದ್ದರೆ ಬಾರೋ ನನ್ನನ್ನು ಮಲಗಿಸಲು."

ಏನೂ ಹೇಳಲಾಗದೆ ಕೇಳುತ್ತಾ ನಿಂತಾಗ ಒಂದು ನಿಟ್ಟುಸಿರುನೊಳಗಿಂದ ಕೇಳಿಸಿತು.

"ಅವರ ಮನೆಯಲ್ಲಿ ಪಲವು ಹೆಂಗಸರಿಗೆ ಈ ರೋಗ ಇತ್ತು. ನನ್ನನ್ನು ಅದಕ್ಕೆ ಬಲಿಪಶುವಾಗಿಸಿದರು."

ಎಲ್ಲವನ್ನೂ ಆಲಿಸಿದಾಗ ನೆಲದಿಂದ ಕಾಲು ಕೀಳಲಾಗುತ್ತಿಲ್ಲ ಎನಿಸಿತು. ಮನದಲ್ಲಿ ಅಸ್ಪಷ್ಟತೆಯ ನೀರ ಬುಗ್ಗೆಗಳು ಎಲ್ಲವನ್ನೂ ಕೇಳಿದೊಡನೆ ಅವಸರದಲ್ಲಿ ಮನಸ್ಸು ರಚಿಸಿದ ಮೋಹದ ಚಿತ್ರಗಳು ಯಾವುವು....

"ಕುಸಿದು ಆ ಮಡಿಲಿಗೆ ಬಿದ್ದು ಎರಡೂ ಕೈಗಳಲ್ಲಿ ಆ ಮುಖವನ್ನು ಬಾಚಿ ಎತ್ತಿ ಕಿವಿಯಲ್ಲಿ ಮೃದುವಾಗಿ ಮಂತ್ರಿಸುವುದು. "ಇಲ್ನೋಡಿ, ನಾವು ಇಬ್ಬರೂ ಒಂದೇ ಪಾಳೆಯದ ಸೆರೆಯಾಳುಗಳು".

ಎದೆಗೆ ಎತ್ತಿ ಹಿಡಿದ ಕೈಗಳೊಡನೆ ದಣಿದು ಮಲಗಿರುವ ಮನುಷ್ಯನ ಔಷಧಿಶೀಸೆಗಳ ಗಂಧವನ್ನು ತಿಳಿಯದೆ, ಆಗ ನಾನು ಜ್ಞಾಪಿಸಿಕೊಂಡದ್ದೇಕೆ?

## ಇಪ್ಪತ್ತು ನಿಮಿಷಗಳಲ್ಲೇ ಕಟ್ಟಡ!

ಇಪ್ಪತ್ತೇ ನಿಮಿಷಗಳ ಅವಧಿಯಲ್ಲಿ ವಿಶೇಷ ಪರಿಶ್ರಮವಿಲ್ಲದೇ ಇಬ್ಬರೇ ಸೇರಿ, ಸಂಚಾರಿ ಆಸ್ಪತ್ರೆ, ವ್ಯಾಪಾರಿ ಮಳಿಗೆ, ಕಚೇರಿಯ ಕೊಠಡಿ ಇಲ್ಲವೇ ಬಹುಮಹಡಿಯ ಕಟ್ಟಡ ಹೀಗೆ ಹಲವು ರೀತಿಯ ಕಟ್ಟಡಗಳನ್ನು ಬಹು ಸುಲಭವಾಗಿ ನಿರ್ಮಿಸಲು ಅನುಕೂಲ ವಾಗುವಂತೆ ಪಶ್ಚಿಮ ಜರ್ಮನಿಯ 'ವೆಸ್ಟ್ ಮನ್' ಎಂಬ ಕೈಗಾರಿಕಾ ಸಂಸ್ಥೆ ಸ್ಯಾಂಡ್‌ವಿಚ್ ಪ್ಲೇಟುಗಳನ್ನು ನಿರ್ಮಿಸಿದೆ.

ಸ್ಯಾಂಡ್‌ವಿಚ್ ಪ್ಲೇಟುಗಳ ಸಹಾಯದಿಂದ 7.5 ಮೀಟರ್ ಎತ್ತರ ಹಾಗೂ 20 ಮೀಟರ್ ವಿಸ್ತಾರದ ಕಟ್ಟಡಗಳನ್ನು ಕಡಿಮೆ ವೆಚ್ಚ ಹಾಗೂ ಅತ್ಯಲ್ಪ ಅವಧಿಯಲ್ಲಿ ನಿರ್ಮಿಸಿ ಜರ್ಮನ್ನರು ದಾಖಲೆ ಸ್ಥಾಪಿಸಿದ್ದಾರೆ. ಇಂಥ ಕಟ್ಟಡಗಳು ಭೂಕಂಪ ಹಾಗೂ ಇನ್ನಿತರ ದುರಂತಗಳು ಸಂಭವಿಸಿದ ಪ್ರದೇಶಗಳಲ್ಲಿ ಅತ್ಯಂತ ಉಪಯುಕ್ತವಾಗುವವೆನ್ನಲಾಗಿದೆ. ಅಂತೆಯೇ ಇಂಥ ಪ್ಲೇಟ್‌ಗಳಿಂದ ಇತರೆಡೆ ಗಳಲ್ಲೂ ವಿಧವಿಧದ ಕಟ್ಟಡಗಳನ್ನು ನಿರ್ಮಿಸ ಬಹುದಂತೆ. (ಸಾಧಾರ)

– ವಿನಾಭ

'ಕೂಡದು'-ಮನವು ಖಂಡಿಸಿತು. ನಿನ್ನ ಗಂಡನ ಬಗ್ಗೆ ಹಾಗೆ ಚಿಂತಿಸಬಾರದು. ಅವರು ಒಳ್ಳೆಯವರು.... ಮಹಾನ್ ವ್ಯಕ್ತಿ.... ಏನನ್ನೂ ಜ್ಞಾಪಿಸಿಕೊಳ್ಳದಿರಲು ಯತ್ನಿಸುತ್ತಾ ಮುಖವೆತ್ತಿದಾಗ ತೋರಿತು ಆ ಕಣ್ಣುಗಳ ಪ್ರಕಾಶ ವರ್ಧಿಸುತ್ತಿದೆಯೇ?...

ಅವುಗಳೊಳಗಿನ ತೀರದ ದಾಹ ಏನೆಂದು ಕೂಗಿ ಹೇಳುತಿದೆ?...

ಹೋಗಲೆಂದು ಸೇರಿವಾಗ ಚಾಚಿ ಬಂದ ಕೈಗಳು ಕಾಣಿಸಿದವು.

"ವಿಜಯಾ ನನ್ನ ವಿಜಯಾ!"

ಆತ್ಮವಿಶ್ವಾಸ ತುಂಬಿ ನಿಂತ ದನಿ.

ಚಾಚಿ ಬಂದ ಕೈಗಳೊಳಕ್ಕೆ ಓರ್ವ ಶರಣಾರ್ಥಿಯಂತೆ ಬಾಡಿ ದಣಿದು ಬೀಳುವಾಗ ವಿವೇಕದ ಬಾಗಿಲುಗಳು ಮುಚ್ಚಿಕೊಳ್ಳು ತ್ತಿದ್ದವು.

ಮನದಲ್ಲಿ ಏನಿತ್ತು?

ಕಚನ ಕಲಾಜಾಣ್ಮೆಯೇ? ... ನಳನೋ?...

ಚಿರಪರಿಚಿತವಲ್ಲದ ಒಂದು ಹಟದೊಂದಿಗೆ ಅಲ್ಲಿ ಉದಿಸಿದ ರಾಗ ಸನ್ನದೇ ಹೌದೇ?-...

ಕಾಲದ ನೀಳವಾದ ಮೊಗಸಾಲೆಯಲ್ಲಿ ನಿನಗಾಗಿ ನಾ ಕಾದೆ ಮೀನುಗಾರ. ಬಾ ಬಾ! ಈ ಸಾಗರದ ನಿಮ್ನತೆಗಳಲ್ಲಿನ ಮಾಯಾ ಕಿಟಕಿ ಬಾಗಿಲುಗಳನ್ನು ತೆರ! ನವರತ್ನಗಳನ್ನು ಬಾಚಿ ತೆಗೆ! ಬಾಚಿ... ಬಾಚಿ...

ಮರುದಿನ ಬೆಳಿಗ್ಗೆ ಎದ್ದು ಚಹಾದೊಡನೆ ಹೋದಾಗ ಕೋಣೆ ತೆರವಾಗಿತ್ತು. ಆಟ ಮುಗಿದು ಖಾಲಿಯಾದ ರಂಗಮಂಟಪ! ಸಿಗರೇಟಿನ ಆಷ್ಟರ್ ಶೇವಲೋಷನ್‌ನ ವಾಸನೆದುಂಬಿದ ಕೋಣೆಯಲ್ಲಿ ನಿಂತಾಗ ಒಣಗಿ ಬರಡಾದ, ಮನಸ್ಸು ಎಬ್ಬಿಸಿದ ಕುದುರೆಯ ಖುರಪುಟ ದನಿ ಕೇಳಿದಾಗ ತೋರಿತು.

ನಾನು ಸತ್ತಿಲ್ಲ.

ಸುಕ್ಕಾದ ಹಾಸಿಗೆಹೊದಿಕೆಯ ಎದುರಿಗೆ ದಾರಿ ತಪ್ಪಿದ ಓರ್ವ ಮಗುವಿನಂತೆ ನೋಡಿಸಲ್ಲಲಷ್ಟೆ ಸಾಧ್ಯವಾದುದು.

ಮಗು ರೋದಿಸಿ ರೋದಿಸಿ ನಿದ್ರಿಸಿದೆ. ಮುಸುಕುತ್ತಿರುವ ಇರುಳಿಗೆದುರಾಗಿ ಸ್ವಿಚ್ ಅದುಮಿ ಬೆಳಕು ಬರಿಸುವಾಗ ಆಲೋಚಿಸಿದೆ ಅವರು ಬರೋ ವೇಳೆಯಾಯ್ತು!

ಮಗುವನ್ನು ಎಬ್ಬಿಸದೆ ಎತ್ತಿ ಹಾಸಿಗೆಯಲ್ಲಿ ಮಲಗಿಸುವಾಗ ಕೆಳಗೆ ಕಾರಿನ ಸದ್ದು ಕೇಳಿಸಿತು.

ಇನ್ನೀಗ ಕೇಳಬಹುದು.

ಮಗನೂ ಅಪ್ಪನೂ....

ಅಪ್ಪ!

ಹೆರಿಗೆಯಾದ ಮರುದಿನ ಕೋಣೆಯೊಳಕ್ಕೆ ನಡೆದು ಬಂದ ಅವರ ಮುಖದ ಪ್ರಕಾಶವನ್ನು ಕಂಡಾಗ ನಡುಕವುಂಟಾಯಿತು.

ಅಪ್ಪ!... ತಂದೆ!

"ವಿಜಯಲಕ್ಷ್ಮಿ!"

ಓಡಿ ಹೋಗುವಷ್ಟರಲ್ಲಿ ಅವರೇ ಕೋಣೆ ಯೊಳಕ್ಕೆ ಬಂದರು.

"ಮಗನೆಲ್ಲಿ?"

"ನಿದ್ದೆ ಹೋದ!"

"ಇಲ್ಲ, ಡ್ಯಾಡಿ ಮಗ ಮಲಗಿಲ್ಲ. ಮಗನನ್ನು

ಮಮ್ಮಿ ಬಹಳ ಹೊಡೆದಳು."

"ಓಹೋ! ಹಾಗಾದರೆ ಕಳ್ಳ ನಿದ್ರೆ? ಅಪ್ಪನಿಗೋಸ್ಕರ ಕಾದು ಮಲಗಿದ್ದೇನ್ನು" ಬ್ರೀಫ್‌ಕೇಸ್‌ನಿಂದ ಹೊಸ ಚಿತ್ರ ಪುಸ್ತಕವನ್ನು ತೆಗೆದುಕೊಡುತ್ತ ಮುಖ ಕಪ್ಪಿಡುತ್ತಿರುವುದು ಕಾಣಿಸಿತು.

"ಏಕೆ ಲಕ್ಷ್ಮಿ ಮಗೂಗೆ ಹೊಡೆದೆ?"

"ಅವನು ಏನು ಹೇಳಿದರೂ ಕೇಳೋದಿಲ್ಲ. ಇಂದು ಆ ಫೋಟೋ ಕೆಳಗೆ ಬೀಳಿಸಿ ಒಡೆದು ಹಾಕಿದ."

ಚಹಾ ತೆಗೆದುಕೊಂಡು ಬರುವಷ್ಟರಲ್ಲಿ ಎಲ್ಲಾ ರಿಪೋರ್ಟನ್ನು ಕೊಟ್ಟಾಗಿತ್ತು. ಅವರ ಎದುರಿಗೆ ನಿಂತಾಗ ತಾನು ಬರೀ ಓರ್ವ ಅಪರಿಚಿತಳೆಂದು ತೋರಿತು. ಈ ಸ್ನೇಹ ಯಮುನೆಯ ಪ್ರವಾಹದಲ್ಲಿ ನನಗೆ ಸ್ಥಾನವಿಲ್ಲ, ನಾನೊಂದು ಶಿಲೆ... ಶಿಲೆ... ಪಾಪಮೋಕ್ಷವಿಲ್ಲದ ಶಿಲೆ. ಊಟ ಬಡಿಸುವಾಗ ಹಾಸಿಗೆ ಹಾಸುವಾಗಲೂ ಮನಸ್ಸು ಹೆಚ್ಚು ಹೆಚ್ಚು ಅಸ್ವಸ್ಥವಾಗುತ್ತಿರುವಂತೆನಿಸಿತು. ಈ ಅಸ್ವಸ್ಥತೆಯಲ್ಲವೇ ತನ್ನ ವಿಧಿ!

ಬಳಿಕ ರಾತ್ರಿ ಬಹಳವಾದ ವೇಳೆಯಲ್ಲಿ ಮೂನ್‌ಲೈಟ್ ಲ್ಯಾಂಪಿನ ಬೆಳಕಿನಲ್ಲಿ ಕಾಣಿಸಿತು...

ಒಂದು ಕೈಯಿಂದ ಮಗನನ್ನು ಅಪ್ಪಿಹಿಡಿದು ಮಲಗಿರುವ ತಂದೆ. ಖಾಲಿಯಾದ ಮನದೊಂದಿಗೆ ಬಹಳ ಹೊತ್ತು ಅದನ್ನು ನೋಡುತ್ತಾ ಮಲಗಿಯೇ ಇದ್ದೆ.

ಮನಸ್ಸು ಮಂತ್ರಿಸಿತು.

ಈ ಮಲಗಿರುವುದು ನನ್ನ ದೇವ. ನಾ ಶುದ್ಧಳಾಗಲು ನನ್ನಲ್ಲಿ ಕೃತಜ್ಞತೆಯ ಅಗ್ನಿಕುಂಡ ಬೆಳೆಸುತ್ತಿರುವ ಗಂಧರ್ವ ನನ್ನ...

ಆಮೇಲೆ ಅಡಗಿಸಿ ನಿಲ್ಲಿಸಲಾಗದ ಒಂದು ಉನ್ಮಾದದಿಂದೆಂಬಂತೆ ಆ ಕಾಲಮೇಲೆ ಕೆನ್ನೆಗಳನ್ನೊತ್ತುವಾಗ ಮನಸ್ಸು ಮಂತ್ರಿಸುತ್ತಿತ್ತು.

ಚಿನ್ನಾ! ನನ್ನ ಚಿನ್ನಾ!... ಈ ಕಣ್ಣುಮುಚ್ಚಾಲೆ ಎಷ್ಟು ದಿನ ನಡೆಸುವೆ!

ಆದರೆ ಯಾರೂ ಯಾರೊಡನೆಯೂ ಕಣ್ಣು ಮುಚ್ಚಾಲೆಯಾಟ ಆಡಲಾಗದಷ್ಟು ಈ ಜಗತ್ತು ಕಿರಿದು ಎಂದು ಅವಳರಿಯಲಿಲ್ಲ.

ಅರೆ ಬಿರಿದ ಕಂಗಳೊಡನೆ ಎಲ್ಲವನ್ನೂ ಕಂಡು ನಿಟ್ಟುಸಿರನ್ನಡಗಿಸಿ ಮಲಗಿದ್ದ ಮನುಷ್ಯನಷ್ಟೂ. ●

ಇದು ಭಾರತದ ಪ್ರಪ್ರಥಮ
ಅಂಚೆ-ಮಹಾಕಾರ್ಯಾಲಯ

# ಕಲಕತ್ತಾ ಜಿಪಿಓಗೆ 215 ತುಂಬಿತು

ಎಂ.ಎಂ. ಇನಾಮದಾರ

ಇದೇ ಏಪ್ರಿಲಿನಲ್ಲಿ 215 ವರ್ಷ ಮುಗಿಸುವ ಕಲಕತ್ತಾದ ಅಂಚೆ ಮಹಾ ಕಾರ್ಯಾಲಯಕ್ಕೆ ಈ ದೇಶದ ಸಂಪರ್ಕ ವ್ಯವಸ್ಥೆಯ ಇತಿಹಾಸದಲ್ಲಿ ಮಹತ್ವದ ಸ್ಥಾನವಿದೆ. ಲೇಖಕರು ಇಂದು ಭಾರತದ ಅಂಚೆ ಇತಿಹಾಸದ ಬಗ್ಗೆ ಅಧಿಕೃತವಾಗಿ ಬರೆಯಬಲ್ಲ ಕೆಲವೇ ಕೆಲವರಲ್ಲಿ ಒಬ್ಬರು.

ಭಾರತದಲ್ಲಿ ಮೊಟ್ಟಮೊದಲು ಸಾರ್ವಜನಿಕ ಅಂಚೆ ಪದ್ಧತಿಯನ್ನು ಸ್ಥಾಪಿಸಿದ ಕೀರ್ತಿ ಬಂಗಾಲಕ್ಕೆ ಸಲ್ಲಬೇಕು. ಆ ಮುನ್ನ ಅನೇಕ ರಾಜರು ಸಂದೇಶವಾಹಕರನ್ನು ನೇಮಿಸಿದ್ದ ಉದಾಹರಣೆಗಳು ಸಿಗುತ್ತವಾದರೂ ಅವರ ಸೇವೆ ರಾಜಕಾರ್ಯಕ್ಕೆ ಸೀಮಿತವಾಗಿರುತ್ತಿತ್ತು. ಪ್ರಪಂಚದಲ್ಲೇ ಸಾರ್ವಜನಿಕ ಅಂಚೆ ವ್ಯವಸ್ಥೆಯನ್ನು ಪ್ರಾರಂಭಿಸಿದ್ದು ಇಂಗ್ಲಂಡ್. 1635ರಲ್ಲಿ ಒಂದನೆ ಚಾರ್ಲ್ಸನು ನಿಗದಿತ ಶುಲ್ಕ ಕ್ಕೊಳಪಟ್ಟು ರಾಜನ ಸಂದೇಶವಾಹಕರ ಸೇವೆ ಸಾರ್ವಜನಿಕರಿಗೂ ಲಭ್ಯವೆಂದು ಸಾರಿದನು. ಭಾರತದಲ್ಲಿ ಗವರ್ನರ್ ಜನರಲ್ ವಾರನ್ ಹೇಸ್ಟಿಂಗ್ಸನು ಈಸ್ಟ್ ಇಂಡಿಯ ಕಂಪನಿಯ ಕಾಗದಪತ್ರಗಳ ತ್ವರಿತ ಸಾಗಾಟಕ್ಕೆಂದು 1774ರಲ್ಲಿ ವ್ಯವಸ್ಥಿತ ಯೋಜನೆಯೊಂದನ್ನು ರೂಪಿಸಿದನು. ಅದರ ಪ್ರಕಾರ 1774ರ ಏಪ್ರಿಲ್ 1ರಂದು ಕಲಕತ್ತಾದಲ್ಲಿ ಜನರಲ್ ಪೋಸ್ಟ್ ಆಫೀಸ್ (ಜಿ.ಪಿ.ಓ.) ಸ್ಥಾಪಿಸಲ್ಪಟ್ಟು ಅದರ ಸೇವೆ ಸಾರ್ವಜನಿಕರಿಗೂ ಮುಕ್ತವಾಯಿತು. ಆಗಿನ ಅಂಚೆ ಶುಲ್ಕ ಎರಡೂವರೆ ತೊಲೆಯ ಒಂದು ಪತ್ರಕ್ಕೆ 100 ಮೈಲಿಗೆ 2 ಆಣೆ (ಇಂದಿನ 12 ಪೈಸೆ). ತಿಂಗಳಿಗೆ ಒಂದು ಸಾವಿರ ರೂಪಾಯಿ ಸಂಬಳ ಪಡೆಯುತ್ತಿದ್ದ ರೆಡ್‌ಫರ್ನ್ ಎಂಬವನು ಪ್ರಪ್ರಥಮ ಪೋಸ್ಟ್ ಮಾಸ್ಟರ್ ಜನರಲ್. ಅವನ ಸಹಾಯಕ್ಕೆ ಒಬ್ಬ ಡೆಪ್ಯೂಟಿ ಪೋಸ್ಟ್ ಮಾಸ್ಟರ್ ಜನರಲ್ (ಸಂಬಳ ತಿಂಗಳಿಗೆ ರೂ. 250), ಇಬ್ಬರು ರೈಟರರು (=ಕಾರ ಕೂನರು ರೂ.100), ಒಬ್ಬ ಜಮಾದಾರ (ರೂ.40) ಹಾಗೂ 15 ಜನ ಅಂಚೆ ಪೇದೆಗಳು (ರೂ.6) ಇದ್ದರು.

ಕಲಕತ್ತಾದಿಂದ ದಕ್ಷಿಣಕ್ಕೆ ಗಂಜಾಮ್, ಪೂರ್ವಕ್ಕೆ ಢಾಕಾ, ಉತ್ತರಕ್ಕೆ ಮುರ್ಶಿದಾಬಾದ್. ಮತ್ತು ಪಶ್ಚಿಮಕ್ಕೆ ವಾರಣಾಸಿಯವರೆಗೆ ನಾಲ್ಕು ರನ್ನರ್ ಮಾರ್ಗಗಳನ್ನು ಯೋಜಿಸಲಾಗಿತ್ತು. ಹಿಂಸ್ರ ಪಶುಗಳಿಂದ ರನ್ನರನ ರಕ್ಷಣೆಗಾಗಿ ಒಬ್ಬ ಹಲಗೆ ಬಾರಿಸುವವನು, ಒಬ್ಬ ಪಂಜು ಹಿಡಿಯವವನು ಇರುತ್ತಿದ್ದರು. ಹಡಗದಿಂದ ಟಪಾಲು ಮೊದಲು ಕೋಡಗೇರಿ

ಬಂದರಿನಲ್ಲಿ ಇಳಿಸಲ್ಪಟ್ಟು ನಂತರ ಸಣ್ಣ ಸಣ್ಣ ನಾವೆಗಳ ಮೂಲಕ ಜಿ.ಪಿ.ಓ.ಕ್ಕೆ ತರಲ್ಪಡುತ್ತಿತ್ತು.

ಈ ದೇಶದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ವಿಸ್ತರಣದ ಕಾಲವದು. ಹೆಚ್ಚೆಚ್ಚು ಪ್ರದೇಶಗಳಿಗೆ ಅವರ ಪ್ರಭಾವಕ್ಕೆ ಒಳಪಡುತ್ತಿದ್ದಂತೆಯೇ ಅಂಚೆ ಸೇವೆಯನ್ನು ಹೆಚ್ಚೆಚ್ಚು ಪ್ರದೇಶಗಳಿಗೆ ವಿಸ್ತರಿಸಲಾಗುತ್ತಿತ್ತು. 1800 ರ ಹೊತ್ತಿಗೆ ಆಗ್ರಾ, ಮಥುರಾ ಹಾಗೂ ದಿಲ್ಲಿಯವರೆಗೆ ಈ ವ್ಯವಸ್ಥೆ ವಿಸ್ತರಿಸಲ್ಪಟ್ಟಿತ್ತು. ವಾರಣಾಸಿಯಲ್ಲಿ ಒಬ್ಬ ಡೆಪ್ಯೂಟಿ ಪಿ.ಎಂ.ಜಿ. ನಿಯಮಿಸಲ್ಪಟ್ಟನು. ಲಖನೌ ಕಾನಪುರ, ಚಿತಗಾಂಗ್,ಫತ್ತೆಗಡ ಮತ್ತು ಡೈಮಂಡ್ ಹಾರ್ಬರುಗಳಿಗೆ ಕೂಡ ಡೆಪ್ಯೂಟಿ ಪಿ.ಎಂ.ಜಿ.ಗಳ ನೇಮಕವಾಯಿತು. ಆದರೆ ಮೋಜೆಂದರೆ ಈ ಹೊಸ ಪಿ.ಎಂ.ಜಿ. ಗಳೆಲ್ಲ ಯುರೋಪಿಯನ್ನರೇ ಆದುದರಿಂದ ಅವರ ಸಂಬಳಗಳನ್ನು ಹೆಚ್ಚಿಸಬೇಕಾಯಿತು. ದುರ್ದೈವವೆಂದರೆ ಈ ಹೆಚ್ಚಳವನ್ನು ಸರಿದೂಗಿಸಲೋಸುಗ ಭಾರತೀಯ ಅಸಿಸ್ಟೆಂಟರು, ಕಾರಕೂನರು ಮುಂತಾದವರ ಸಂಬಳಗಳನ್ನು ಕಡಿಮೆ ಮಾಡಲಾಯಿತು.

1786 ರಲ್ಲಿ ಮದ್ರಾಸ್ ಜಿ.ಪಿ.ಓ. 1787 ರಲ್ಲಿ ಮುಂಬಯಿ ಜಿ.ಪಿ.ಓ. ಪ್ರಾರಂಭವಾದ ಮೇಲೆ ಈ ಎರಡು ಊರುಗಳಿಗೆ ಕಲಕತ್ತಾದಿಂದ ಮಚ್ಛಲಿಪಟ್ಟಣದ ಮುಖಾಂತರ ಟಪಾಲು ಕಳಿಸಲು ಮೊದಲು ಮಾಡಿದರು. ಈ ವ್ಯವಸ್ಥೆಯಿಂದ ಕಲಕತ್ತಾದಿಂದ ಕಳಿಸಿದ ಟಪಾಲು ಮುಂಬಯಿ ತಲುಪಲು 26 ದಿನಗಳು, ಮದ್ರಾಸ್ ಮುಟ್ಟಲು 17 ದಿನಗಳು ಬೇಕಾಗುತ್ತಿತ್ತು. 1820 ರಲ್ಲಿ ಮುಂಬಯಿಗೆ ನಾಗಪುರ, ಔರಂಗಾಬಾದ ಮುಖಾಂತರ ಟಪಾಲು ಮಾರ್ಗ ಪ್ರಾರಂಭಿಸಲ್ಪಟ್ಟಿತು.

ಆಗ ಅಂಚೆ ಇಲಾಖೆಯೇ ಸಂಚಾರ ವ್ಯವಸ್ಥೆಯನ್ನೂ ನಿರ್ವಹಿಸುತ್ತಿದ್ದುದರಿಂದ ಅಂದಿನ ಬ್ರಿಟಿಶ್ ಅಧಿಕಾರಿಗಳಿಗೂ, ಪ್ರವಾಸಿಗರಿಗೂ ಪ್ರವಾಸ ಮಾಡಲು ಪೋಸ್ಟ್ ಮಾಸ್ಟರರೇ ಮೇಣೆ (ಡೋಲಿ)ಗಳನ್ನು ಒದಗಿಸುತ್ತಿದ್ದರು. ಮೇಣೆ ಹೊರಲು ಅಂಚೆ ರನ್ನರುಗಳನ್ನು ನೇಮಿಸಲಾಗುತ್ತಿತ್ತು. ಮೇಣೆ ಸವಾರಿಯಲ್ಲಿ ಎಂಟು ಜನ ಬೋವಿಗಳು, ಇಬ್ಬರು ಪಂಜು ಹಿಡಿಯುವವರು ಮತ್ತು ಒಬ್ಬ ಕೂಲಿ ಇರುತ್ತಿದ್ದರು. ಇವರೆಲ್ಲರಿಗೂ ಕೂಡಿ ಒಂದು ಮೈಲಿಗೆ ಒಂದು ರೂಪಾಯಿ ಕೊಡಬೇಕಾಗುತ್ತಿತ್ತು. ಇದರ ಪ್ರಕಾರ ಕಲಕತ್ತಾದಿಂದ ಲಖನೌಗೆ ರೂ.712 ಬಾಡಿಗೆಯಾಗುತ್ತಿತ್ತಾದರೆ ವಾರಣಾಸಿಗೆ ರೂ.445 ಆಗುತ್ತಿತ್ತು.

ಕ್ರಮೇಣ ರನ್ನರ್ ಮಾರ್ಗಗಳು ಚಕ್ಕಡಿ ಟಪಾಲ್ ಮಾರ್ಗಗಳಾಗಿ, ನಂತರ "ಜಟಕಾ ಟಪಾಲ್ ಮಾರ್ಗಗಳಾಗಿ ಪರಿವರ್ತನೆಗೊಂಡವು. 1846 ರಲ್ಲಿ ಕಲಕತ್ತಾದಿಂದ ಅಲಹಾಬಾದ್-ದಿಲ್ಲಿ ಚಕ್ಕಡಿ ಟಪಾಲ್ ಪ್ರಾರಂಭವಾದರೆ ಮುಂದೆ 1855 ಅದನ್ನು ಲುಧಿಯಾನಾ ಮಾರ್ಗವಾಗಿ ಪೇಶಾವರದವರೆಗೂ ವಿಸ್ತರಿಸಲಾಯಿತು. 1858 ರಲ್ಲಿ ಟೇಲರ್ ಎಂಬ ಅಮೆರಿಕನ್ ಪತ್ರಕರ್ತನು ದಿಲ್ಲಿಯಿಂದ ಮುಂಬಯಿವರೆಗೆ ಟಪಾಲು ಗಾಡಿಯಲ್ಲಿ ಪ್ರಯಾಣ ಮಾಡಿದ್ದನ್ನು ವಿವರವಿವರವಾಗಿ ವರ್ಣಿಸಿದ್ದಾನೆ. ಈ ಸುಮಾರಿಗೆ ನಡೆದ ಇನ್ನೊಂದು ಪ್ರಯೋಗವೆಂದರೆ 1858 ರಲ್ಲಿ ಚಕ್ಕಡಿಗಳ ಗುಂಪನ್ನೇ ಟಪಾಲು ಸಾರಿಗೆಗಾಗಿ ಹಾಗೂ ತತ್ಸಂಬಂಧಿ ಸಾರಿಗೆ ಸೌಕರ್ಯಗಳ ವಿಸ್ತರಣಕ್ಕೆ ಅನುಕೂಲವಾಗುವಂತೆ ಬಳಸತೊಡಗಿದ್ದು. ಅದಕ್ಕೆ bullock cart train ಎಂದು ಹೆಸರಿತ್ತಾದಾದರೂ ರೈಲು ಬೋಗಿಗಳಂತೆ ಒಂದಕ್ಕೊಂದು ಚಕ್ಕಡಿಗಳನ್ನು ಜೋಡಿಸಿ ಹಲವು ಜತೆ ಎತ್ತುಗಳನ್ನು ಬಳಸುತ್ತಿದ್ದರೆಂದಲ್ಲ.. ಒಂದಕ್ಕಿಂತ ಹೆಚ್ಚು ಚಕ್ಕಡಿಗಳನ್ನು ಬಳಸಿ ಒಂದರಲ್ಲಿ ಟಪಾಲು ಚೀಲಗಳನ್ನೂ ಮಿಕ್ಕವುಗಳಲ್ಲಿ ಪ್ರಯಾಣಿಕರನ್ನೂ, ಸರಕುಗಳನ್ನೂ ಸಾಗಿಸುತ್ತಿದ್ದಿರಬಹುದಾಗಿದೆ. 1855ರ ಗೆಜೆಟ್ ಪ್ರಕಾರ ಈ ತರಹದ ಟ್ರೇನು ದಿಲ್ಲಿ-ಮುಲ್ತಾನ್-ಲಾಹೋರ್ ಮಾರ್ಗದಲ್ಲಿ ಓಡುತ್ತಿತ್ತು. 1875ರ ಸುಮಾರಿಗೆ ಈ ಬಗೆಯ ಟ್ರೇನುಗಳು ತಲುಪುತ್ತಿದ್ದ 75 ಊರುಗಳ ಉಲ್ಲೇಖ ದೊರೆಯುತ್ತಿದೆ. ಮುಂದೆ ಕುದುರೆ ಗಾಡಿಗಳ ಮೂಲಕ ಟಪಾಲು ಸಾಗಿಸುವ ವ್ಯವಸ್ಥೆಯಾದ ನಂತರ ಕೆಲವೆಡೆಗಳಲ್ಲಿ ಖಾಸಗಿ ಕಂಪನಿಗಳಿಗೂ ಈ ಕೆಲಸವನ್ನು ವಹಿಸಿಕೊಡಲಾಗಿತ್ತು. ಇಂತಹ ಕಂಪನಿಗಳಲ್ಲಿ ಕಾನಪುರದ ತಂತೀಮಲ್ ಎಂಬುವನ ಟ್ರಾನ್ಸ್‌ಪೋರ್ಟ್

ಕಂಪನಿ ಬಹು ದೊಡ್ಡದಾಗಿತ್ತು.

ರೈಲು ಮಾರ್ಗ ಪ್ರಾರಂಭವಾದ ನಂತರ ಟಪಾಲು ಸಾರಿಗೆ ವ್ಯವಸ್ಥೆಯಲ್ಲಿ ಅಪೂರ್ವ ಬದಲಾವಣೆಯಾಯಿತು. ಬಂಗಾಲದಲ್ಲಿ ಮೊಟ್ಟ ಮೊದಲು ಗಾಡಿ ರೈಲು ಮಾರ್ಗ ಪ್ರಾರಂಭವಾದದ್ದು 15-8-1854 ರಂದು. ಅಂದು ಮೊದಲ ರೈಲು ಗಾಡಿ ಹುಗಳಿಯಿಂದ ಹೌರಾಕ್ಕೆ ಚಲಿಸಿತು. 1867 ರ ಸುಮಾರಿಗೆ ಕಲಕತ್ತಾದಿಂದ ದಿಲ್ಲಿ ಮತ್ತು ಮುಂಬಯಿಗಳ ವರೆಗೆ ರೈಲು ಮಾರ್ಗ ವಿಸ್ತರಿಸಲ್ಪಟ್ಟಿತ್ತು. ಮೊದಮೊದಲು ಸೀಲು ಮಾಡಿದ ಟಪಾಲು ಚೀಲಗಳನ್ನು ಮಾತ್ರ ರೈಲು ಗಾಡಿಗಳಲ್ಲಿ ಸಾಗಿಸಲಾಗುತ್ತಿತ್ತು. ಆದರೆ 1-5-1864 ರಂದು ಅಲಹಾಬಾದಿನಿಂದ ಕಾನಪುರವರೆಗಿನ ಮಾರ್ಗದಲ್ಲಿ ರೇಲ್ವೆ ಬೋಗಿಯಲ್ಲೇ ಪತ್ರ ವಿಂಗಡನಾ ಕಾರ್ಯ ಪ್ರಾರಂಭವಾಯಿತು. ಆಗ ಇದನ್ನು ಸಂಚಾರಿ ಅಂಚೆ ಕಚೇರಿಯೆಂದು ಕರೆಯಲಾಗುತ್ತಿತ್ತು. ಈ ಪದ್ಧತಿಯನ್ನು ಮೊದಲು ಪ್ರಾರಂಭಿಸಿದ ಕೀರ್ತಿ ಬಂಗಾಲ ಸರಕಾರಕ್ಕೇ ಸಲ್ಲಬೇಕು. ಮುಂದೆ ಇದೇ ಪದ್ಧತಿಯನ್ನು ಕಲಕತ್ತಾದಿಂದ ದಿಲ್ಲಿ ಹಾಗೂ ಮುಂಬಯಿ ಮಾರ್ಗಗಳಿಗೂ ವಿಸ್ತರಿಸಲಾಯಿತು. ಇದು ಮೊನ್ನೆ ಮೊನ್ನೆ ತನಕವು ಪ್ರಚಲಿತವಿದ್ದ ಆರ್.ಎಂ.ಎಸ್. (ರೇಲ್ವೆ ಮೇಲ್ ಸರ್ವಿಸ್) ಸೇವೆಯ ಅರ್ಥಾತ್ ರೈಲು ಬೋಗಿಯಲ್ಲೇ ಪತ್ರಗಳನ್ನು ವಿಂಗಡಿಸುವ ಪದ್ಧತಿಯ ಪೂರ್ವ ಪೀಠಿಕೆಯಾಗಿತ್ತೆಂದು ಹೇಳಬೇಕು.

ತಮ್ಮ ತಾಯ್ನಾಡಿನಿಂದ ಬರುವ ಟಪಾಲಿಗೆ ಇಂಗ್ಲಿಷರು ಅತೀವ ಮಹತ್ವವೀಯುತ್ತಿದ್ದರು. ರೇಲ್ವೆ ಪ್ರಾರಂಭವಾದ ನಂತರ ಇಂಗ್ಲೆಂಡಿನಿಂದ ಟಪಾಲು ಹಡಗದಿಂದ ಮುಂಬಯಿಗೆ ಬಂದಿಳಿಯುತ್ತಿತ್ತು. ನಂತರ ಅಲ್ಲಿಂದ ರೈಲು ಮಾರ್ಗವಾಗಿ ಕಲಕತ್ತಾಕ್ಕೆ ಹೋಗುತ್ತಿತ್ತು. ಈ ಹಡಗು ಮುಂಬಯಿಗೆ ಬಂದೊಡನೆಯೇ ಕಲಕತ್ತಾದಲ್ಲಿ ಜಿ.ಪಿ.ಓ. ಮೇಲೆ ಕೆಂಪು ಧ್ವಜವನ್ನು ಹಾರಿಸಲಾಗುತ್ತಿತ್ತು. ಅಲ್ಲದೆ ಈ ಟಪಾಲು ಕಲಕತ್ತಾವನ್ನು ಯಾವಾಗ (ಅದು ಮಧ್ಯರಾತ್ರಿಯ ನಂತರವಾದರೂ) ಬಂದರೂ ಕೂಡಲೇ ಅದರ ವಿತರಣೆಯಾಗಬೇಕೆಂದು ಕಾನೂನು ಮಾಡಲಾಗಿತ್ತು. ಇಂಗ್ಲಂಡಿಗೆ ಟಪಾಲು ರವಾನೆಯಾಗುವ ಪೂರ್ವದಲ್ಲಿ ಕೂಡ ಅಲ್ಲಿಯ ಇಂಗ್ಲಿಷರಿಗೆ ಅದರ ಪೂರ್ವಸೂಚನೆ ನೀಡಲು ಬಿಳಿಯ ಧ್ವಜವನ್ನು ಜಿ.ಪಿ.ಓ. ಮೇಲೆ ಹಾರಿಸುತ್ತಿದ್ದರು.

ಕಲಕತ್ತಾದಲ್ಲಿ ಜಿ.ಪಿ.ಓ. ಪ್ರಾರಂಭವಾದ ನಂತರ ಅದರ ಕಾರ್ಯ ನಿರ್ವಹಣೆಯ ವೇಳೆ ಬೆಳಿಗ್ಗೆ 10 ರಿಂದ ಮಧ್ಯಾಹ್ನ 1ರ ವರೆಗೆ ಹಾಗೂ ನಂತರ ಸಾಯಂಕಾಲ 6 ರಿಂದ ರಾತ್ರಿ 9ರ ವರೆಗೆ ಇರುತ್ತಿತ್ತು. 1837 ರ ಹೊತ್ತಿಗೆ ಇದನ್ನು ಬದಲಿಸಿ ಬೆಳಿಗ್ಗೆ 10 ರಿಂದ ಸಂಜೆಯ 6ರ ವರೆಗೆ ಕೆಲಸದ ಅವಧಿಯನ್ನು ನಿಶ್ಚಿತಗೊಳಿಸಲಾಗಿತ್ತು. ಅಲ್ಲದೆ ದಿನಕ್ಕೆ ಎರಡು ಬಾರಿ ಪತ್ರಗಳ ವಿತರಣೆಯಾಗುತ್ತಿತ್ತು. 1855 ರ ಹೊತ್ತಿಗೆ ದಿನಕ್ಕೆ ಆರು ಬಾರಿ ಪತ್ರ ವಿತರಣೆಯಾಗುತ್ತಿತ್ತೆಂದು ಕಲಕತ್ತಾ ಗೆಜೆಟ್ (3-1-1855) ಉಲ್ಲೇಖವಿದೆ. ಆಗ ಕಲಕತ್ತಾ ನಗರದಲ್ಲಿ ಈ ಕೆಳಗಿನ ಆರು ಉಪ ಅಂಚೆ ಕಚೇರಿಗಳು ಕಾರ್ಯ ನಿರ್ವಹಿಸುತ್ತಿದ್ದವು. 1) ಜೋರೊ ಸೋಂಕೊ, 2) ಬಾಗ್ ಬಜಾರ್ 3) ಭವಾನಿಪುರ, 4) ಕಿದ್ದರ್‌ಪುರ, 5) ಹಾತ್ ಖೋಲಾ ಹಾಗೂ 6) ಬೌ ಬಜಾರ್.

ಆರಂಭದಲ್ಲಿ ಕಲಕತ್ತಾ ಜಿ.ಪಿ.ಓ. ಬ್ಯಾಂಕ್ ಸ್ಟೇರ್ ಭಾಗದಲ್ಲಿ ಹಳೆಯ ಕಟ್ಟಡದಲ್ಲಿತ್ತು. ಈಗ ಡಾಲ್‌ಹೌಸಿ ಸ್ಟೇರಿ* ನಲ್ಲಿರುವ ಭವ್ಯ ಕಟ್ಟಡದ ನಿರ್ಮಾಣ 1864ರಲ್ಲಿ ಪ್ರಾರಂಭವಾಗಿ 1868ರಲ್ಲಿ ಪೂರ್ತಿಗೊಂಡಿತು. ಈ ಜಾಗದಲ್ಲೆ ಮುಂಚೆ ಹಳೆಯ ಕೋಟೆ ಇತ್ತೆಂದೂ ಅದರಲ್ಲಿ ಸ್ಸಿರಾಜು ದೌಲನ ನಾಚ ಖಾನಾ ಇತ್ತೆಂದೂ ತಿಳಿದು ಬರುತ್ತದೆ. ಡಬ್ಲ್ಯೂ.ಬಿ. ಗ್ರ್ಯಾಂಡ್‌ವಿಲ್ಲೆ ಎಂಬುವನು ಈ ಕಟ್ಟಡದ ವಿನ್ಯಾಸ ರಚಯಿತ. 220 ಅಡಿ ಎತ್ತರವಿರುವ ಭವ್ಯ ಸೌಧಕ್ಕೆ ಆಗ ತಗುಲಿದ ವೆಚ್ಚ 630000 ರೂಪಾಯಿಗಳು. 1868ರ ಅಕ್ಟೋಬರ್ 2 ರಂದು ವಿಧ್ಯುಕ್ತವಾಗಿ ವಿಜೃಂಭಣೆಯಿಂದ ಜಿ.ಪಿ.ಓ. ಅಲ್ಲಿಗೆ ಸ್ಥಳಾಂತರಿಸಲ್ಪಟ್ಟಿತು.

---

*ಇದಕ್ಕೆ ಈಗಿನ ಹೆಸರು ಬಿ.ಬಿ.ಡಿ. ಬಾಗ್. ಬಿನಯ, ಬಾದಲ, ದಿನೇಶ ಈ ಮೂವರು ಹುತಾತ್ಮರ ನೆನಪಿಗೆ. ●

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

**ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

**1. ಕೆಯ್**
ಅ) ಗದ್ದೆ
ಆ) ಹೊಡೆ
ಇ) ಮಲಗು
ಈ) ಉಸಿರು ಬಿಡು

**2. ಬಳಿವಿಡಿ**
ಅ) ಮರ್ಜಿಕಾಯು
ಆ) ದಾರಿಬಿಡು
ಇ) ಹಿಂಬಾಲಿಸು
ಈ) ದಾರಿಯ ಅಂಚಿನಲ್ಲಿ ಚಲಿಸು

**3. ಸಾರಾಯ**
ಅ) ಒಟ್ಟಾರೆ
ಆ) ಬಳಿಯುವುದು
ಇ) ಸಾರವುಳ್ಳದ್ದು
ಈ) ಸೀದಾ

**4. ವೈಶಿಕ**
ಅ) ಚಾತುರ್ಯ
ಆ) ಹಕ್ಕಿಗೆ ಸಂಬಂಧಿಸಿದ
ಇ) ಬ್ರಾಹ್ಮಣ ಸಂಬಂಧಿ
ಈ) ವಂಚನೆಯ

**5. ಪಡಿ**
ಅ) ಅಡ್ಡ ಬಟ್ಟೆ
ಆ) ಧಾನ್ಯ ರೂಪದ ಭತ್ತೆ
ಇ) ಗಂಧದ ಉಂಡೆ
ಈ) ಕುರುಚಲು ಕಾಡು

**6. ತೆರಪು**
ಅ) ಎಡೆ
ಆ) ಬೆಳಗಾಗುವುದು
ಇ) ತಿಕ್ಕಿದ ಗಾಯ
ಈ) ಕತ್ತರಿಸಿದ ಭಾಗ

**7. ಉಂಡಿಗೆ**
ಅ) ತಿನ್ನುವ ಪದಾರ್ಥ
ಆ) ಮುದ್ರೆ
ಇ) ತೊಡಿಗೆ
ಈ) ಕೊರಳಾಭರಣ

**8. ಗಂಜಳ**
ಅ) ಗಂಗೆಯ ನೀರು
ಆ) ತೆಪ್ಪ
ಇ) ದನಕರುಗಳ ಮೂತ್ರ
ಈ) ಅರಣ್ಯ

**9. ಸಿಂಗಿ**
ಅ) ಬಂದೂಕು
ಆ) ಶಿವಭಕ್ತೆ
ಇ) ಹೆಣ್ಣು ಮಂಗ
ಈ) ಕಡುವಿಷ

**10. ರಹದಾರಿ**
ಅ) ಪ್ರವೇಶಕ್ಕೆ ಅಪ್ಪಣೆ
ಆ) ದೊಡ್ಡಸ್ತನ
ಇ) ಮೂರು ಮೈಲು ದೂರ
ಈ) ಕುಣಿಯುವ ಪ್ರಾವೀಣ್ಯ

**11. ಮಂದಿ**
ಅ) ಹೊಗಳು ಭಟ್ಟ
ಆ) ಒಂದು ಛಾಯಾಗ್ರಹ
ಇ) ಬೆಲೆಗಳಲ್ಲಿ ಇಳಿತದ ಒಲವು
ಈ) ಗಂಭೀರ ಧ್ವನಿ

**12. ತೇಜಾಪು**
ಅ) ಪ್ರಕಾಶ
ಆ) ಆಮ್ಲ
ಇ) ಕುದುರೆ
ಈ) ಸತ್ವ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಕೆಯ್**

ಅ) ಸಾಗುವಳಿ ಭೂಮಿ, ಗದ್ದೆ, ವಿಶೇಷವಾಗಿ ಭತ್ತದ ಗದ್ದೆ, ಪೈರು. ಉದಾ: ಬೇಲಿಯೇ ಕೆಯ್ಯನ್ನು ಮೆದ್ದರೆ. (ದೇಶ್ಯ)

**2. ಬಳಿವಿಡಿ**

ಇ) ಹಿಂಬಾಲಿಸು, ಅನುಸರಿಸು. ಉದಾ: ಪರಿಮಳದ ಬಳಿವಿಡಿದು ಬಂದ ತುಂಬಿ. (ದೇಶ್ಯ-ಬಳಿ=ದಾರಿ+ಪಿಡಿ=ಹಿಡಿ)

**3. ಸಾರಾಯ**

ಇ) ಸಾರವತ್ತಾದ, ರಸಭರಿತವಾದ. ಉದಾ: ಸಾರಾಯದ ರಸಾಯನಗಳನ್ನು ಬಡಿಸಿದ. (ಸಂ.ಸಾರ-ದಿಂದ)

**4. ವೈಶಿಕ**

ಈ) ವಂಚನೆಯ, ಸೂಳೆಯರ ಮೋಹಿಸುವ ಕಲೆ. ಉದಾ: ವೈಶಿಕದ ಮಾತು (ಸಂ. ವೇಶ್ಯಾ=ಸೂಳೆ-ಯಿಂದ)

**5. ಪಡಿ**

ಆ) ಧಾನ್ಯಾದಿ ರೂಪದಲ್ಲಿ ಕೊಡುವ ಭತ್ತೆ. ಭಿಕ್ಷೆ, ಸೀದಾ-ಬ್ರಾಹ್ಮಣರಿಗೆ ಊಟ, ಶೂದ್ರರಿಗೆ ಪಡಿ. (ದೇಶ್ಯ)

**6. ತೆರಪು**

ಅ) ಎಡೆ, ಅವಕಾಶ, ಸಂದರ್ಭ, ಪುರುಸೊತ್ತು. ಉದಾ: ತೆರಪಿಲ್ಲದ ಕಾರ್ಯಕ್ರಮ (ದೇಶ್ಯ-ತೆರೆ+ಪು)

**7. ಉಂಡಿಗೆ**

ಅ) ಮುದ್ರೆ, ಮೊಹರು, ಕೋಟೆ ಮೊದಲಾದವುಗಳನ್ನು ಪ್ರವೇಶಿಸಲು ಕೊಟ್ಟ ಪರವಾನಿಗೆಯ ಗುರುತು. ಉದಾ: ಉಂಡಿಗೆ ತೋರಿಸಿ ರಾಜಸನ್ನಿಧಿಗೆ ಹಾಜರಾದ. (ಸಂ. ಮುದ್ರಿಕಾ?)

**8. ಗಂಜಳ**

ಇ) ದನಕರುಗಳ ಮೂತ್ರ, ದುರ್ವಾಸನೆ. ಉದಾ: ಗಂಜಳದ ಗುಂಡಿ. (ಸಂ.ಗೋ-ಆಕಳು+ಜಲ)

**9. ಸಿಂಗಿ**

ಈ) ಕಡುವಿಷ, ಹಾಲಾಹಲ. ಉದಾ: ಉಪ್ಪು ಸಿಂಗಿ=ಅತಿಯಾದ ಉಪ್ಪಿನ ರುಚಿ. (ಸಂ. ಶೃಂಗಿ)

**10. ರಹದಾರಿ**

ಅ) ಪ್ರವೇಶಕ್ಕೆ ಅಥವಾ ದಾರಿಯಲ್ಲಿ ಸಾಗಾಣಿಕೆಗೆ ಅಪ್ಪಣೆ, ಒಟ್ಟಿನಲ್ಲಿ ಒಪ್ಪಿಗೆ ಪತ್ರ. ಉದಾ: ವ್ಯಾಪಾರಕ್ಕೆ ರಹದಾರಿ ಪಡೆದಿದ್ದ. (ಪಾರಸೀಕ-ರಾಹ್=ದಾರಿ+ದಾರ=ಧಾರಿ)

**11. ಮಂದಿ**

ಇ) ಸರಕಿನ ಬೆಲೆಗಳಲ್ಲಿ ಇಳಿಮುಖ ಪ್ರವೃತ್ತಿ "ತೇಜಿ"ಯ ವಿರುದ್ಧ ಪ್ರವೃತ್ತಿ. ಉದಾ: ತೇಜಿ ಮಂದಿ ವ್ಯಾಪಾರದಲ್ಲಿ ಕೈ ಸುಟ್ಟು ಕೊಂಡ. (ಹಿಂ-ಮಂದೀ. ಸಂ.ಮಂದ- ದಿಂದ)

**12. ತೇಜಾಪು**

ಆ) ಆಮ್ಲ ಆಸಿಡ್. ಉದಾ: ಬಂಗಾರವನ್ನು ತೇಜಾಪಿನಲ್ಲಿ ಶುದ್ಧೀಕರಿಸಿ. (ಪಾರಸೀಕ-ತೇಜ=ತೀಕ್ಷ್ಣ+ಆಬ್=ನೀರು)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6- 8 ಸರಿಯಿದ್ದರೆ ... ಸಾಧಾರಣ
9-10 " ... ಉತ್ತಮ
11-12 " ... ಅತ್ಯುತ್ತಮ

ಕೆ.ವಿ. ಘನಶ್ಯಾಮ

# ಯುದ್ಧೋತ್ಸಾಹಿ ರಾಸಾಯನಿಕಗಳು

ರಾಸಾಯನಿಕಗಳು ನಮ್ಮ ಜೀವನದ ಅವಿಭಾಜ್ಯ ಅಂಗಗಳಾಗಿ ಹೋಗಿವೆ. ನಾವು ತೊಡುವ ಬಟ್ಟೆ, ಬರೆಯುವ ಪೆನ್ನು, ಕಾಗದ, ಮಸಿ, ಗಾಜು, ದಂತಮಂಜನ ಪ್ಲಾಸ್ಟಿಕ್‌ಗಳು ಎಲ್ಲವೂ ರಾಸಾಯನಿಕಗಳೇ. ಹೀಗೆ ನೂರಾರು ರಾಸಾಯನಿಕಗಳು ನಮ್ಮ ಸುಖ ಜೀವನಕ್ಕೆ ತಮ್ಮ ಸೇವೆಯನ್ನು ಸಲ್ಲಿಸುತ್ತಿವೆ. ಆದರೆ ಇದೇ ರೀತಿಯ ಇತರ ರಾಸಾಯನಿಕಗಳನ್ನು ಅಶಾಂತಿಯ ಕಾಲದಲ್ಲಿ, ರಾಜ್ಯದಲ್ಲಿ ದಂಗೆಯೆದ್ದಾಗ, ಯುದ್ಧ ಕಾಲದಲ್ಲಿ ವೈರಿಗಳನ್ನು ಸದೆಬಡಿಯಲೂ ಉಪಯೋಗಿಸುತ್ತಾರೆ.

ರಾಸಾಯನಿಕಗಳು ಮಿಲಿಟರಿ ವಿಜ್ಞಾನವನ್ನು ಸಾಕಷ್ಟು ಶ್ರೀಮಂತವಾಗಿಸಿವೆ. 20ನೇ ಶತಮಾನದ ಆರಂಭದಿಂದ ಈ ರಾಸಾಯನಿಕ ಯುದ್ಧಕ್ಕೆ ಹೊಸ ಆಯಾಮ ಬಂದಿದೆ. ಇವುಗಳಲ್ಲಿ ಕೆಲವು ನೇರವಾಗಿ ವೈರಿ ಸೈನಿಕರ ದೇಹವನ್ನು ಹೊಕ್ಕು ತೊಂದರೆ ಕೊಡಬಲ್ಲಂಥವು. ಇನ್ನು ಕೆಲವು ಅನಿಲಗಳು ದಟ್ಟವಾಗಿ ಹರಡಿ ಸೈನಿಕರಿಗೆ ಮುಂದಿನ ಹಾದಿ ಕಾಣದಂತೆ ಮಾಡಬಲ್ಲಂಥವು.

ಬೆಂಕಿ, ಹೊಗೆ ಮತ್ತು ಕೆಲವು ಅನಿಲಗಳನ್ನು ಉಪಯೋಗಿಸಿ ಶತ್ರುಗಳನ್ನು ಹೆದರಿಸುವ ಪದ್ಧತಿ ಬಹಳ ಹಳೆಯದು. ಕ್ರಿಸ್ತಶಕ 670ರ ಹೊತ್ತಿಗೆ "ಗ್ರೀಕ್‌ಫೈರ್" ಎಂಬ ಹೆಸರಿನ ಉರಿಯುವ ರಾಸಾಯನಿಕ ಬಳಕೆಯಲ್ಲಿತ್ತು. 1701ರಲ್ಲಿ ದೊರೆ 12ನೇ ಚಾರ್ಲ್ಸ್‌ನ ಸೈನಿಕರು 'ದ್ವೀನಾ' ನದಿಯನ್ನು ದಾಟಲು ದಟ್ಟವಾದ ಹೊಗೆಯನ್ನೆಬ್ಬಿಸಿ ವೈರಿಗಳಿಗೆ ದಿಕ್ಕು ತಪ್ಪಿಸಿದರು. 1855ರ 'ಕ್ರಿಮಿಯನ್' ಯುದ್ಧದಲ್ಲಿ ಗಂಧಕವನ್ನು ಉರಿಸಿ, ಅದರ ಆಕ್ಸೈಡ್ ಹೊಗೆಯನ್ನು ಗಾಳಿ ಬೀಸುವ ದಿಕ್ಕಿನಲ್ಲಿ ಸಾಗಿಸಿ, ವೈರಿಗಳಿಗೆ ಸಾಕಷ್ಟು ಕಿರಿಕಿರಿ ಮಾಡಿದ್ದರೆಂಬುದು ಇಂದು ಇತಿಹಾಸ. ಇಂತಹ ರಾಸಾಯನಿಕಗಳ ಉಪಯೋಗ ಮಾನವ ಜನಾಂಗಕ್ಕೆ

ಮಾರಕ. ಇದನ್ನು ಯಾರೂ ಉಪಯೋಗಿಸಬಾರದು ಎಂಬ ಒಂದು ನಿರ್ಣಯವನ್ನು 1899 ರಲ್ಲಿ 'ಹೇಗ್'ನಲ್ಲಿ ಸೇರಿದ್ದ 'ಅಂತರ ರಾಷ್ಟ್ರೀಯ ಶಾಂತಿ ಸಭೆ' ಅಂಗೀಕರಿಸಿತು. ಆದರೆ ಇದನ್ನು ಪಾಲಿಸಿದ ದೇಶಗಳು ಬಹಳ ಕಡಿಮೆ. ಮೊದಲ ಮಹಾಯುದ್ಧದ ಕಾಲದಲ್ಲಿ ಜರ್ಮನ್ನರು ರಷ್ಯದ ಮೇಲೆ ಈ ರೀತಿಯ ಒಂದು ಪ್ರಯೋಗ ಮಾಡಿದರೂ, ಅದು ಯಶಸ್ವಿಯಾಗಲಿಲ್ಲ. 1915ರ ಏಪ್ರಿಲ್ 22 ರಂದು ಜರ್ಮನ್ನರು ಕ್ಲೋರಿನ್ ಅನಿಲವನ್ನು ಬ್ರಿಟಿಷ್ ಮತ್ತು ಫ್ರೆಂಚ್ ಸೈನಿಕರ ಮೇಲೆ ಪ್ರಯೋಗಿಸಿದರು. ಆದರೆ ಬಹು ಬೇಗನೆ ವೈರಿಗಳು ಈ ಅನಿಲಗಳಿಂದ ರಕ್ಷಣೆ ಪಡೆಯಲು ಸಾಕಷ್ಟು ಕ್ರಮ ತೆಗೆದುಕೊಂಡರು. ಇಂತಹ ಅನಿಲಗಳಿಂದ ರಕ್ಷಣೆ ಪಡೆಯಲು ಮುಖವಾಡಗಳನ್ನು ಧರಿಸುವ ಪದ್ಧತಿ ಜಾರಿಗೆ ಬಂದಿತು. 1916 ರಿಂದ ಅನಿಲ ತುಂಬಿದ ಕ್ಷಿಪಣಿಗಳು, ಕಾಡುತೂಸುಗಳನ್ನು ವೈರಿಗಳ ಮೇಲೆ ಪ್ರಯೋಗಿಸಿದರು. ಹೀಗೆ ಬಂದ ಅನಿಲಗಳಲ್ಲಿ ಮುಖ್ಯವಾದುದು 'ಮಸ್ಟರ್ಡ್ ಅನಿಲ." ಇದು ಚರ್ಮದ ಮೇಲೆ ಗಾಯ ಮಾಡಿ ತುರಿಕೆಯಿಂದ ಉರಿಯುಂಟು ಮಾಡುವುದಲ್ಲದೆ, ಉಸಿರಾಟಕ್ಕೂ ತೊಂದರೆ ಕೊಡುತ್ತದೆ. ಮುಂದೆ ಬಳಕೆಗೆ ಬಂದದ್ದು ಕ್ಲೋರಿನ್ ಪಾಸ್ಜಿನ್‌ಗಳ ಮಿಶ್ರಣ. ಈ ಅನಿಲಗಳಿಂದ ಸಾವು ಸಂಭವಿಸುತ್ತಿದ್ದುದು ಕಡಿಮೆಯಾಗಿತ್ತು. ಆದರೆ ವೈರಿಗಳನ್ನು ಹಿಮ್ಮೆಟ್ಟಿಸುವಲ್ಲಿ ಸಾಕಷ್ಟು ಯಶಸ್ಸು ಸಾಧಿಸಲಾಗಿತ್ತು.

ಈಗೀಗ ಎಲ್ಲಾ ದೇಶಗಳಲ್ಲೂ ಮುಷ್ಕರಗಳೂ, ಹಿಂಸಾಚಾರಗಳೂ ನಡೆಯುವುದು ಸಾಮಾನ್ಯವಾದ ಸಂಗತಿ. ಈ ರೀತಿ ಗುಂಪು ಕೂಡಿದಾಗ ಎಂತಹ ಅನಾಹುತ ಆಗುತ್ತದೆಂದು ಹೇಳಲು ಬರುವುದಿಲ್ಲ. ಈ ಕಾಲದಲ್ಲಿ ಉಪಯೋಗಿಸುವ ರಾಸಾಯನಿಕಗಳು ಪ್ರಾಣ ಹಾನಿಯನ್ನು ಮಾಡಬಾರದು. ಆದರೆ ಗುಂಪು ಚದುರಿ ಹೋಗುವಂತೆ ಮಾಡಬೇಕು. 'ಆರ್ಥೋ ಕ್ಲೋರೋ ಬೆಂಜಾಲ್ ಮೆಲನೊನೈಟ್ರೈಲ್' ಅಂತಹ ಒಂದು ರಾಸಾಯನಿಕ. ಸಿ.ಎಸ್.ಎಂದು ಪ್ರಸಿದ್ಧವಾಗಿರುವ ಇದು ಕಣ್ಣು ಉರಿಯುವಂತೆಯೂ, ಕಣ್ಣಿನಿಂದ ನೀರು ದಳದಳನೆ ಇಳಿಯುವಂತೆಯೂ ಮಾಡುತ್ತದೆ. ಕೆಮ್ಮಿನ ಸೂಚನೆಗಳನ್ನು ಕೊಡುವುದಲ್ಲದೆ, ವಾಂತಿಯಾಗುವ ಸಾಧ್ಯತೆಗಳೂ ಇವೆ. ಕ್ಲೋರೋ ಅಸಿಟೋಫೀನೋನ್ ಮತ್ತು ಕ್ಲೋರೋಫಾರಂನಲ್ಲಿ ಕರಗಿಸಿದ ಕ್ಲೋರೋ ಪಿಕ್ರಿಸ್ ಇಂತಹ ಇನ್ನೊಂದು ವಸ್ತು ಸಿಎನ್‌ಎಸ್ ಎನ್ನುವ ಇದು, ಯುದ್ಧದಲ್ಲೂ ಉಪಯೋಗಿಸಲ್ಪಟ್ಟಿದೆ. ಇದು ದೇಹಕ್ಕೆ ತೀಕ್ಷ್ಣವಾದ ನೋವುಂಟುಮಾಡಿ, ವೈರಿಗಳು ಹಿಮ್ಮೆಟ್ಟುವಂತೆ ಮಾಡುತ್ತದೆ. 'ಕ್ಯಾಮೈಟ್' (ಸಿ.ಎ) ಎಂಬುದು ಒಂದು ಬೂದು ಬಣ್ಣದ ಸ್ನಿಗ್ಧ ದ್ರವ. ಇದು ಮೂಗಿನ ಹೊಳ್ಳೆಗಳಲ್ಲಿ ಉರಿಯುಂಟುಮಾಡುವುದಲ್ಲದೆ, ಕಣ್ಣುರಿ, ತಲೆ ನೋವು ತರಿಸುತ್ತದೆ. ಅಡಂಸೈಟ್ (ಡಿಎಮ್) ಒಂದು ಹಳದಿ ಬಣ್ಣದ ಹರಳಿನ ರೂಪದ ರಾಸಾಯನಿಕ. ಇದನ್ನು ಪ್ರಯೋಗಿಸಿದಾಗ ತಲೆನೋವು, ಕೆಮ್ಮು, ಎದೆನೋವು ಉಂಟುಮಾಡುವುದಲ್ಲದೆ, ಮತ್ತೆ ಮತ್ತೆ ಸೀನು ಬರಿಸುತ್ತದೆ.

ಇನ್ನು ಕೆಲವು ಉಸಿರಾಡಿಸಲು ತೊಂದರೆ ಕೊಡುತ್ತವೆ. ಶ್ವಾಸಕೋಶದ ಒಳಪದರಗಳಿಗೆ ಅವು ಹಾನಿ ಮಾಡುವುದಲ್ಲದೆ ಅದರ ಕೊಳವೆಯನ್ನು ಹಾಳು ಮಾಡುತ್ತವೆ. ಇವುಗಳಲ್ಲಿ ಪ್ರಮುಖವಾದುವು- ಫಾಸೀಜನ್ (ಸಿಜಿ) ಪ್ರಸ್ಸಿಕ್ ಆಮ್ಲ (ಎಸಿ) ಸೆಸ್ಕಿ ಮಸ್ಟರ್ಡ್, ಡೈಸಲ್ಫರ್ ಡೆಕ್ ಫ್ಲೋರೈಡ್, ಆದರೆ ಇವುಗಳ ಉಪಯೋಗ ಈಗ ಕಡಿಮೆಯಾಗಿದೆ. ಏಕೆಂದರೆ ಇವುಗಳಿಗೆ ತೀಕ್ಷ್ಣವಾದ ವಾಸನೆಯಿರುವುದರಿಂದ ವೈರಿಗೆ ಬೇಗನೆ ಇದರ ಸುಳಿವು ಸಿಕ್ಕುತ್ತದೆ.

ಡೈಕ್ಲೋರೋ ಫಾರ್ಮಾಕ್ಸೈಮ್‌ನಂತಹ ಕೆಲವು ಅನಿಲಗಳು ಚರ್ಮದ ತುರಿಕೆಯುಂಟು ಮಾಡುವುದಲ್ಲದೆ, ಕೆಲವು ಬಾರಿ ಬೊಬ್ಬೆ ಬರಿಸುವುದೂ ಉಂಟು. ಇನ್ನೂ ಒಳಕ್ಕೆ ಇಳಿದರೆ ರಕ್ತ ಹರಿಯುವಿಕೆಗೂ ತಡೆಯುಂಟು ಮಾಡುತ್ತದೆ. ಗುಂಪನ್ನು ಚದುರಿಸಲು ಬೇಕಾದ ರಾಸಾಯನಿಕಗಳು ಕಣ್ಣಿಗೆ ಕಾಣಿಸಬಾರದು, ವಾಸನೆ ಇರಲೇಬಾರದು, ಇದ್ದರೆ ಬಹಳ ಕಡಿಮೆ ಇರಬೇಕು. ಅಲ್ಲದೆ ಮನುಷ್ಯನ ದೇಹದಲ್ಲಿ ಶಾಶ್ವತವಾಗಿ ಉಳಿಯುವಂತಹ ಯಾವ ತೊಂದರೆಯನ್ನೂ ಉಂಟು ಮಾಡಬಾರದು.

ಎರಡನೇ ಮಹಾಯುದ್ಧದಲ್ಲಿ ಜರ್ಮನ್ನರು ನರಅನಿಲಗಳನ್ನು (ಜಿವಿಜೆಂಟ್ಸ್) ಉಪಯೋಗಿಸಿದರು. ಇವುಗಳಿಗೆ ಯಾರಾನ್ನಾದರೂ ಅತ್ಯಲ್ಪ ಕಾಲದಲ್ಲಿ ಕೊಲ್ಲ ಬಲ್ಲ ಶಕ್ತಿಯಿದೆ. ಅಂದರೆ ಇವು ಭಾರೀ ವಿಷಾನಿಲಗಳು. ಇವುಗಳಲ್ಲಿ ಮುಖ್ಯವಾದುವು ಟಾಬೂನ್, ಸರೀನ್ ಮತ್ತು ಸೋಮನ್.

ಟಾಬೂನ್ ಒಂದು ಬಣ್ಣವಿಲ್ಲದ ಅಥವಾ ಬೂದು ಬಣ್ಣದ ಸ್ನಿಗ್ಧ ದ್ರವ. ಇದಕ್ಕೆ ಯಾವ ವಾಸನೆಯೂ ಇರುವುದಿಲ್ಲ. ಇದನ್ನು ಪ್ರಯೋಗಿಸಿದರೆ ಕಣ್ಣಿನ ಕನೀನಿಕೆಗಳ ಮೇಲೆ ಪರಿಣಾಮ ಬೀರುವುದಲ್ಲದೆ, ಕಣ್ಣುಗುಡ್ಡೆಯನ್ನು ಕಿರಿದು ಗೊಳಿಸುವುದು. ಸರೀನ್ ಕೂಡ ವಾಸನೆಯಿಲ್ಲದ ದ್ರವ. ಇದು ಎದೆಯಲ್ಲಿ ಉರಿಯನ್ನುಂಟು ಮಾಡುವುದಲ್ಲದೆ, ಉಸಿರಾಟಕ್ಕೆ ತೊಂದರೆಯುಂಟು ಮಾಡುತ್ತದೆ. ಇವೆರಡಕ್ಕಿಂತ ಹಾನಿಕಾರಕವಾದುದು ಸೋಮನ್. ಇದಕ್ಕೆ ಹಣ್ಣಿನ ವಾಸನೆ ಅಥವಾ ಕರ್ಪೂರದ ವಾಸನೆ ಇರುವುದರಿಂದ ಇದನ್ನು ಅಸ್ವಾದಿಸಲು ಮನಸ್ಸಾಗುತ್ತದೆ. ಆದರೆ ಇದರಿಂದ ಹೊಟ್ಟೆ ತೊಳೆಸುವುದು, ವಾಂತಿಯಾಗುವ ಸೂಚನೆ ಕಾಣುವುದಲ್ಲದೆ, ಮಂಕು, ಮಬ್ಬು, ಸನ್ನಿ ಹಿಡಿದವರಂತಾಗುತ್ತಾರೆ.

ಇನ್ನು ಕೆಲವು ರಾಸಾಯನಿಕಗಳು ಮನುಷ್ಯನ ದೇಹ ಬೆವರುವುದನ್ನು ಹೆಚ್ಚಿಸುತ್ತವೆ. ಮತ್ತೆ ಕೆಲವು ಯುದ್ಧ ರಂಗದಲ್ಲಿ ಪ್ರಯೋಗಿಸಿದಾಗ ವೈರಿಗಳು ನಿಸ್ತೇಜರಾಗುವಂತೆ, ಜ್ಞಾನತಪ್ಪುವಂತೆ ಮಾಡುತ್ತವೆ. ವಿರೇಚಕಗಳಂತೆ ಕೆಲಸ ಮಾಡುವಂಥವು ಕೆಲವು. BZ ಎಂಬುದು ಒಂದು ಪುನ ರಾಸಾಯನಿಕ. ಇದು ತಲೆಸುತ್ತುವಂತೆ ಮಾಡುವುದಲ್ಲದೆ, ಭ್ರಮೆ ಮತ್ತು ಮನೋವಿಕಲ್ಪವನ್ನುಂಟು ಮಾಡುತ್ತದೆ.

ನಾಫಾಮ್: ಇದು ನ್ಯಾಫ್ಥನೇಟ್ ಮತ್ತು ಪಾಮಿಟೇಟ್ ಎಂಬ ಮೇದಾಮ್ಲಗಳ ಮೊದಲ ಅಕ್ಷರಗಳ ಸಂಗಮ. ಇದೊಂದು ಜೆಲ್ಡ್ ಪೆಟ್ರೋಲ್, ನಾಪಾಮ್, ಬಿ ಎಂಬುದು ಇತ್ತೀಚಿನ ಒಂದು ರಾಸಾಯನಿಕ. ಇದು ಪೆಟ್ರೋಲ್ ಬೆಂಜೀನ್ ಮತ್ತು ಪಾಲಿಸ್ಟೈರೀನ್‌ಗಳ ಒಂದು ಜೆಲ್ಲೆಯ ಮಿಶ್ರಣ. ಇದಕ್ಕೆ ಅಂಟುವ ಗುಣ ಇದೆ. ಬಹಳಕಾಲ ಉರಿಯುವುದಲ್ಲದೆ ಅಸಾಧ್ಯ ತಾಪಮಾನವನ್ನುಂಟು ಮಾಡುತ್ತದೆ. ಹಾಗಾಗಿ ಸಹಿಸಲಸಾಧ್ಯವಾದ ಉರಿ ಆರಂಭವಾಗುತ್ತದೆ. ಇದರಿಂದ ಮೂತ್ರಪಿಂಡ ವಿಫಲವಾಗುವುದು. ಇದರ ತಯಾರಿಕೆಗೆ ಬೇಕಾಗುವ ಕಚ್ಚಾ ಪದಾರ್ಥಗಳು ಅತಿ ಸುಲಭವಾಗಿ ಸಿಗುವುದರಿಂದ, ಇದು ಇತರ ಅನೇಕ ರಾಸಾಯನಿಕಗಳಿಗಿಂತ ಉತ್ತಮ, ಮತ್ತು ಇದರ ಪ್ರಯೋಗವೂ ಸುಲಭ.



"ಸತ್ಯ ಹೇಳಿದ್ರೆ ಸಗಣಿ ತಿನ್ನಬೇಕಾಗತ್ತೆ."

ಈ ರೀತಿ ಉಪಯೋಗಿಸುವ ರಾಸಾಯನಿಕಗಳಿಂದ ರಕ್ಷಣೆ ಇಲ್ಲವೇ ಎಂದು ಕೇಳಿದರೆ ಇದೆ ಎಂದೇ ಹೇಳಬಹುದು. ವೈರಿಗಳು ಕೂಡ ಅಷ್ಟೇ ಬುದ್ಧಿ ಖರ್ಚು ಮಾಡುತ್ತಾರೆ. ಹಾಗಾಗಿ ಅನೇಕ ಸುರಕ್ಷಿತ ವಿಧಾನಗಳೂ ಬಳಕೆಗೆ ಬಂದಿವೆ. ಈ ರಾಸಾಯನಿಕಗಳು ದೇಹದೊಳಗೆ ಹೋಗುವ ಮೊದಲೇ ಅದನ್ನು ದುರ್ಬಲಗೊಳಿಸುತ್ತಾರೆ ಅಥವಾ ವಿಭಜನೆ ಮಾಡಿ ನಿರ್ವೀರ್ಯಗೊಳಿಸುತ್ತಾರೆ. ಚರ್ಮಕ್ಕೆ ಕೆಲವು ಮುಲಾಮು, ಪೌಡರ್ ಸವರಿದರೆ ಈ ರಾಸಾಯನಿಕಗಳು ದುರ್ಬಲವಾಗುತ್ತವೆ. ರಾಸಾಯನಿಕಗಳು ಚರ್ಮಕ್ಕೆ ತಾಕದಂತೆ ಮಾಡಲು ಅನೇಕ ರೀತಿಯ ರಕ್ಷಣಾ ಬಟ್ಟೆಗಳೂ ಬಳಕೆಗೆ ಬಂದಿವೆ. ದೇಹದೊಳಗೆ ಪ್ರವೇಶಿಸಿ ತಮ್ಮ ಕೆಟ್ಟ ಕೆಲಸ ಪ್ರಾರಂಭ ಮಾಡುವ ಮೊದಲು ಔಷಧಿಯಿಂದ ಅವು

ಗಳನ್ನು ನಾಶಮಾಡಬಹುದು. ಆದರೂ ಅನೇಕ ಹೊಸ ಹೊಸ ರಾಸಾಯನಿಕಗಳನ್ನು ತಯಾರಿಸುತ್ತಲೇ ಇದ್ದಾರೆ. ಇವುಗಳ ವಿರುದ್ಧ ಇನ್ನೂ ಪೂರ್ತಿಯಾಗಿ ರಕ್ಷಣೆ ಒದಗಿಸುವುದು ಸಾಧ್ಯವಾಗಿಲ್ಲ.

1918 ರಿಂದ 1930-35ರವರೆಗೆ ಎಲ್ಲಾ ಅಭಿವೃದ್ಧಿಶೀಲ ರಾಷ್ಟ್ರಗಳು ಇಂತಹ ರಾಸಾಯನಿಕಗಳಿಗಾಗಿ ಮತ್ತು ಅವುಗಳ ವಿರುದ್ಧ ರಕ್ಷಣೆಗಾಗಿ ಅನೇಕ ಸಂಶೋಧನೆಗಳನ್ನು ನಡೆಸಿದವು. 1935-36ರಲ್ಲಿ ಇಟಾಲಿಯನ್ನರು ಅಬಿಸೀನಿಯನ್ನರ ಮೇಲೆ, 1937-42ರವರೆಗೆ ಜಪಾನೀಯರು ಚೀನಿಯರ ಮೇಲೆ ಸಾಕಷ್ಟು ಪ್ರಮಾಣದ ರಾಸಾಯನಿಕಗಳನ್ನು ಬಳಕೆ ಮಾಡಿದರು. ಭಾರಿ ಪರಿಣತ ಯೋಧರೆಂದು ಖ್ಯಾತರಾಗಿದ್ದ 'ಹೈಲಿಸೆಲಾಸಿಯ' ಸೈನಿಕರು ಇಟಾಲಿಯನ್ನರ ಈ ರಾಸಾಯನಿಕ ದಾಳಿಗೆ ತುತ್ತಾಗಿ, ತತ್ತರಿಸಿ ನಾಲ್ಕೇ ದಿನದಲ್ಲಿ ಹಿಮ್ಮೆಟ್ಟಬೇಕಾಯಿತು. 1941ರಲ್ಲಿ ಚೀನಾದ ಯೋಧರಿಗೂ ಇದೇ ಗತಿಯಾಯಿತು. ಅಮೆರಿಕಾದ ಅಧ್ಯಕ್ಷ ರೂಸ್‌ವೆಲ್ಟ್‌ರು ಈ ರಾಸಾಯನಿಕಗಳ ಬಳಕೆಯ ವಿರುದ್ಧ ನೋಟೀಸು ಕೊಟ್ಟಿದ್ದರಿಂದ ಯುದ್ಧ ಮುಗಿಯುವವರೆಗೆ ಜಪಾನ್ ಇದನ್ನು ಮತ್ತೆ ತನ್ನ ಬತ್ತಳಿಕೆಯಿಂದ ಹೊರಗೆ ತೆಗೆಯಲಿಲ್ಲ. ಜರ್ಮನ್ನರಲ್ಲಿಯೂ ಇದೇ ರೀತಿಯ ರಾಸಾಯನಿಕಗಳು ಇದ್ದರೂ ಕೆಲವು ನಿರ್ಣಯಗಳಿಗೆ ಬದ್ಧರಾಗಿ, ಎರಡನೇ ಮಹಾಯುದ್ಧದಲ್ಲಿ ಅವರು ಇದನ್ನು ಪ್ರಯೋಗಿಸಲಿಲ್ಲ. ಇದೂ ಅವರ ಸೋಲಿಗೆ ಒಂದು ಕಾರಣವಿರಬಹುದು. ಇಂದು ಕೂಡ ಮಾರಕವಾದ, ಆದರೆ ಆಸ್ತಿ ಪಾಸ್ತಿಗೆ, ಮಾನವ ಪ್ರಾಣಕ್ಕೆ ಹಾನಿಯನ್ನುಂಟು ಮಾಡದಿರುವಂಥ ಅನೇಕ ಹೊಸ ಹೊಸ ರಾಸಾಯನಿಕಗಳು ಎಲ್ಲ ದೇಶಗಳ ಬಳಿಯೂ ಇವೆ. ಇವೆಲ್ಲ ಯಾವ ಕಾಲಕ್ಕೆ ಹೊರ ಬರುತ್ತವೆ, ಯಾವ ರೂಪದಲ್ಲಿ ಹೊರ ಬರುತ್ತವೆ ಎಂಬುದನ್ನು ಕಾಲವೇ ನಿರ್ಣಯಿಸಬೇಕು. ●

(ಆಧಾರ)

## ನಡುರಾತ್ರಿ

*ಜಗದ್ವಿಖ್ಯಾತ ವಿಜ್ಞಾನಿ ಥಾಮಸ್ ಆಲ್ವಾ ಎಡಿಸನ್ ಒಂದು ದಿನ ರಾತ್ರಿ ಬಹಳ ಹೊತ್ತಿನವರೆಗೆ ಪ್ರಯೋಗಾಲಯದಲ್ಲಿ ಕಾರ್ಯಪ್ರವರ್ತರಾಗಿದ್ದರು. ಮಿತ್ರನೊಬ್ಬ ಅವರನ್ನು "ಮನೆಗೆ ಹೋಗಲು ಹೊತ್ತಾಗಿಲ್ಲವೇ?" ಎಂದು ಪ್ರಶ್ನಿಸಿದ. "ಈಗ ಸಮಯವೆಷ್ಟು?" ಎಂದು ಎಡಿಸನ್ ಕೇಳಿದರು. "ನಡುರಾತ್ರಿಯಾಗಿದೆ"ಯೆಂದು ಮಿತ್ರ ಉತ್ತರಿಸಿದ. "ಮಧ್ಯರಾತ್ರಿಯೇ? ನಾನು ಮನೆಗೆ ಹಿಂದಿರುಗುವುದು ಉತ್ತಮ. ಕಾರಣ ಈ ದಿನವೇ ನಾನು ಮದುವೆಯಾದದ್ದು" ಎಂದರಂತೆ ಎಡಿಸನ್.*

*ಸಂಗ್ರಹ: ವಿ.ನಾ.ಭ.*

## ಆಹ್ವಾನ

*ಜಾನಪದ ನಾಟಕವೊಂದು ನಗರದಲ್ಲಿ ಕಿಕ್ಕಿರಿದ ಜನದಟ್ಟಣೆಯಲ್ಲಿ ನಡೆಯುತ್ತಿತ್ತು. ಅಂತೆಯೇ ಅದು ಬಹುಜನಪ್ರಿಯವೆನ್ನಿಸಿತ್ತು. ನಾಟಕದ ಸನ್ನಿವೇಶವೊಂದರಲ್ಲಿ ರಾಜನ ಪಾತ್ರಧಾರಿಯು ಸಂಭಾಷಣೆಯೊಂದನ್ನು ಬಹು ಭಾವಾವೇಶದಿಂದ ನುಡಿದ: "ಒಂದು ಕುದುರೆ. ಒಂದೇ ಕುದುರೆ. ಆ ಒಂದೇ ಒಂದು ಕುದುರೆಗೇ ನನ್ನ ಇಡೀ ರಾಜ್ಯವನ್ನು ನೀಡಲು ನಾ ಸಿದ್ಧ." ಮುಂದಿನ ಸಾಲಿನಲ್ಲಿ ಕುಳಿತಿದ್ದ ಪ್ರೇಕ್ಷಕನೊಬ್ಬ "ಯಾಕೆ, ಒಂದು ಕತ್ತೆಗೆ ಕೊಡೋಕಾಗಲ್ವೆ?" ಎಂದು ಕುಹಕವಾಡಿದ. ವೇದಿಕೆಯ ತುದಿಗೆ ಧಾವಿಸಿ ಬಂದ ಆ ಪಾತ್ರಧಾರಿ "ಹೋ ಯಾಕಾಗೊಲ್ಲ? ಈಗ್ಲೇ ಬನ್ನಿ" ಎಂದು ಆಹ್ವಾನವಿತ್ತ.*

*ಸಂಗ್ರಹ: ವಿ.ನಾ.ಭ*



# ರಡ್‌ಯಾರ್ಡ್ ಕಿಪ್ಲಿಂಗ್

ಶ್ರೀಕಾಂತ ಮಳಗಿ

ರಡ್‌ಯಾಡ್ ಕಿಪ್ಲಿಂಗ್ 1865ರ ಡಿಸೆಂಬರ್ 30 ರಂದು ಮುಂಬಯಿಯಲ್ಲಿ ಹುಟ್ಟಿದ. ಆತನ ತಂದೆ ಜಾನ್ ಲಾಕ್‌ವುಡ್ ಕಿಪ್ಲಿಂಗ್; ಮುಂಬಯಿಯ ಸ್ಕೂಲ್ ಆಫ್ ಆರ್ಟ್‌ನಲ್ಲಿ ಶಿಲ್ಪ ಶಾಸ್ತ್ರದ ಪ್ರೊಫೆಸರ್. ತಾಯಿ ಅಲಿಸ್ ಮ್ಯಾಕ್ ಡೊನಾಲ್ಡ್. ಅವಳ ತಂದೆ ಒಬ್ಬ ಗೌರವಸ್ಥ ಪಾದ್ರಿ. ಆಕೆಗೆ ಒಟ್ಟು ನಾಲ್ಕು ಜನ ಅಕ್ಕ ತಂಗಿಯರು. ಅವರಲ್ಲಿ ಒಬ್ಬಾಕೆ ಎಡ್ವರ್ಡ್ ಬರ್ನ್-ಜೋನ್ಸ್ ಎಂಬ ಕಲಾವಿದನನ್ನು ಮದುವೆಯಾದರೆ ಇನ್ನೊಬ್ಬಳ ಮಗ ಮುಂದೆ ಬ್ರಿಟನ್ನಿನ ಪ್ರಧಾನಿಯಾದ. ಹೀಗೆ ಪ್ರಖ್ಯಾತರಾದ ಸಂಬಂಧಿಕರು ರಡ್‌ಯಾರ್ಡ್‌ನಿಗೆ ದೊರತದ್ದು ದೈವೀಕೃಪೆಯೆನ್ನಬೇಕು.

1865ರಲ್ಲಿ ಜಾನ್ ಕಿಪ್ಲಿಂಗ್ ಹೆಂಡತಿಯೊಡನೆ ಮುಂಬಯಿಗೆ ಬಂದಿಳಿದ ಕೂಡಲೇ 'ಟೈಮ್ಸ್ ಆಫ್ ಇಂಡಿಯ' ದ ಹತ್ತಿರವೇ ಒಂದು ಭವ್ಯ ಭವನವನ್ನು ವಾಸಕ್ಕೆ ತೆಗೆದುಕೊಂಡ. ರಡ್‌ಯಾರ್ಡ್‌ನ ಬಾಲ್ಯ ಕಳೆದದ್ದು ಈ ಬಂಗಲೆಯಲ್ಲೆ.

ಆಗಿನ ಕಾಲದ, ಹಾಗೂ ತಕ್ಕಮಟ್ಟಿಗೆ ಈಗಿನ ಕಾಲದ ಶ್ರೀಮಂತರಲ್ಲೂ ಇರುವಂತೆ ಪರಿಚಾರಕರ ರಕ್ಷಣೆಯಲ್ಲೇ ಈತನ ಶೈಶವ ಕಳೆಯಿತು. ಅವರಲ್ಲೊಬ್ಬಾಕೆ ಹಿಂದಿ, ಮರಾಠಿಗಳೆರಡೂ ಬರುತ್ತಿದ್ದ ಗೋವೆಯ ರೋಮನ್ ಕ್ಯಾಥೋಲಿಕ್ ಕುಟುಂಬಕ್ಕೆ ಸೇರಿದಾಕೆ. ಇನ್ನೊಬ್ಬಾಕೆ ಮೀತಾ-ಹಿಂದೂ ಸಂಪ್ರದಾಯದಂತೆ ಬೆಳೆದು ಬಂದವಳು. ಆತನ ತಂದೆ-ತಾಯಿಗಳಿಗಿಂತಲೂ ಇವರಿಬ್ಬರ ಪ್ರಭಾವವೇ ರಡ್‌ಯಾರ್ಡ್‌ನ ಮೇಲೆ ವಿಶೇಷವಾಗಿತ್ತೆಂದು ಹೇಳಲಾಗುತ್ತದೆ. ಆತ ಹುಟ್ಟುವಾಗ ತಾಯಿಗೆ ಬಹಳ ಕಷ್ಟವಾಯಿತಂತೆ. ಆಗ ಅವಳ ಕಷ್ಟ ಕಡಿಮೆಯಾಗಲೆಂದೂ ರಡ್‌ಯಾರ್ಡ್ ಸುರಕ್ಷಿತವಾಗಿ 'ಭೂಮಿಗೆ ಬಂದಿಳಿಯಲೆಂದೂ' ಕಾಳಿ ಮಾತೆಗೆ ಒಂದು ಕುರಿಯನ್ನು ಅರ್ಪಿಸಲಾಯಿತಂತೆ. ರಡ್‌ಯಾರ್ಡ್ ಬೆಳೆದು ಬಂದದ್ದು ಇಂತಹ ವಾತಾವರಣದಲ್ಲಿ. ಅವನು ಇಂಗ್ಲೀಷಿಗಿಂತ ಹಿಂದಿಯನ್ನೇ ಮೊದಲು ಕಲಿತದ್ದು ಆಶ್ಚರ್ಯವಲ್ಲ. ಆತನೇ ಒಂದೆಡೆ ಹೇಳಿದ ಹಾಗೆ ಡೈನಿಂಗ್ ರೂಮಿಗೆ ಹೋಗುತ್ತಿದ್ದಂತೆಯೆ, 'ಇನ್ನು ಮೇಲೆ ಡ್ಯಾಡಿ_ಮಮ್ಮಿಯವರೊಡನೆ ಇಂಗ್ಲೀಷಿನಲ್ಲಿ ಮಾತಾಡಬೇಕು' - ಎನ್ನುವುದು ನೆನಪಾಗುತ್ತಿತ್ತಂತೆ.

ಭಾರತದ ಕತೆಗಳ, ದಂತಕತೆಗಳ ವಾತಾವರಣದಲ್ಲೇ ಆತ ಬೆಳೆದ. ಅವನಿಗೆ ಈ ಜಗತ್ತಿನ ಕಟು ಸತ್ಯಗಳ ಅರಿವಾದದ್ದು ಗೌತಮ ಬುದ್ಧನಿಗೆ ಅರಿವಾದ ರೀತಿಯಲ್ಲೆ. ಅವನ

(ಶ್ರೀ ವಸಂತ ಶಹಾಣೆಯವರು ಸಂಗ್ರಹಿಸಿದ ಸಾಮಗ್ರಿಯಿಂದ)

ಮನೆಯ ಸಮೀಪದಲ್ಲೇ ಪಾರ್ಸಿಗಳ ಶಾಂತಿ ಸ್ತಂಭವಿತ್ತಂತೆ. ಒಂದು ದಿನ ರಡ್‌ಯಾರ್ಡ್ ಮನೆಯ ಮುಂದಿನ ತೋಟದಲ್ಲಿ ತಿರುಗು ತ್ತಿದ್ದಾಗ ಅಲ್ಲಿಂದ ಬಿದ್ದ ಶಿಶುವಿನ ಕೈಯೊಂದು ಆತನ ಗಮನ ಸೆಳೆದು ಅದೇನೆಂದು ಅವನು ತಾಯಿಯನ್ನು ಕೇಳಿದ. ಎಳೆ ವಯಸ್ಸಿನ ಮಗುವಿಗೆ ಭೀಕರವಾದ ವಾಸ್ತವದ ಅರಿವಾಗು ವುದು ಅವಳಿಗೆ ಬೇಕಿರಲಿಲ್ಲವಾದ್ದರಿಂದ ಅಲಿಸ್ ಹಾರಿಕೆಯ ಉತ್ತರವನ್ನು ನೀಡಿದಳು. ರಡ್‌ಯಾರ್ಡ್‌ನ ಕುತೂಹಲ ತಣಿಯಲಿಲ್ಲ. ಕೊನೆಗೂ ಪರಿಚಾರಿಕೆಯರನ್ನು ಕಾಡಿಸಿ, ಪೀಡಿಸಿ ಮರಣದ ಬಗ್ಗೆ ತಿಳಿದುಕೊಂಡ.

ಅಲಿಸ್ ಎರಡನೆಯ ಹೆರಿಗೆಗಾಗಿ ಇಂಗ್ಲೆಂಡಿಗೆ ಹೋದಾಗ ರಡ್‌ಯಾರ್ಡ್‌ನೂ ಅವಳೊಂ ದಿಗೆ ಹೋದ. ಆದರೆ ಅಲ್ಲಿನ ವಾತಾ ವರಣ ವೇನೂ ಅವನಿಗೆ ಹಿಡಿಸಲಿಲ್ಲ. ಇಂಗ್ಲೆಂಡಿನ ತಂಪಾದ, ಮಬ್ಬುಗವಿದ ವಾತಾ ವರಣಕ್ಕಿಂತ ಮುಂಬಯಿಯ ಬೆಚ್ಚಗಿನ ವಾತಾವರಣವೇ ಹಿಡಿಸಿತವನಿಗೆ. ಟ್ರಿಕ್ಸ್ ಜನಿಸಿದ ನಂತರ ಆತ ಅವರಿಬ್ಬರೊಡನೆ ಭಾರತಕ್ಕೆ ಮರಳಿದ.

ಬಹುಶಃ ಭಾರತೀಯ ಪರಿಸರದಲ್ಲಿ ತಮ್ಮ ಮಕ್ಕಳು ಬೆಳೆಯುವುದು ಅವನ ತಂದೆ-ತಾಯಿ ಗಳವರಿಗೆ ಬೇಕಿರಲಿಲ್ಲವೇನೋ? ಮುಂದೆ ಮೂರು ವರ್ಷಗಳ ನಂತರ 1871ರಲ್ಲಿ ತಂದೆ ತಾಯಿಗಳಿಬ್ಬರೂ ಇಂಗ್ಲೆಂಡಿನಲ್ಲಿ ಹ್ಯಾಲೋವೇ ಎಂಬವಳ ಸಂರಕ್ಷಣೆಯಲ್ಲಿ ಅವರಿಬ್ಬರನ್ನೂ ಬಿಟ್ಟು ಬಂದದ್ದು ಅಣ್ಣ ತಂಗಿಯರ ಪಾಲಿಗೆ ಆಘಾತಕರವಾಗಿತ್ತು. "ಅವರು ಈ ಬಗೆಗೆ ಮೊದಲು ಒಂದು ಮಾತನ್ನೂ ಆಡಿರಲಿಲ್ಲ. ಹೋಗುವಾಗ ಗುಡ್ ಬೈ ಸಹ ಹೇಳಲಿಲ್ಲ. ಬಿರುಗಾಳಿ ಎಲ್ಲವನ್ನೂ ಕಿತ್ತಿಕೊಂಡು ಹೋಗುವ ಹಾಗೆ ಅವರ ವಿದಾಯ ನಮ್ಮ ಸುಖ ಸಂತೋಷವನ್ನೆಲ್ಲ ಕಿತ್ತಿ ಕೊಂಡು ಹೋಯಿತು" ಎಂದು ಟ್ರಿಕ್ಸ್ ಬರೆ ದಿದ್ದಾಳೆ. ಆದರೆ ಮುಂದೆ 1881 ರಲ್ಲಿ ಅಲಿಸಳೇ ರಡ್‌ಯಾರ್ಡ್‌ನ ಮೊದಲ ಕವನ ಸಂಗ್ರಹವನ್ನು ಹೊರತರಲು ಸಹಾಯ ಮಾಡಿದಳು.

1882 ರಲ್ಲಿ ಕಿಪ್ಲಿಂಗ್ ಭಾರತಕ್ಕೆ ಮರಳಿದ. ಮಿಲಿಟರಿ ಸೇರುವಷ್ಟು ಸದೃಢನೂ ಆಗಿರಲಿಲ್ಲ. ಆಕ್ಸ್‌ಫರ್ಡ್ ಕೇಂಬ್ರಿಡ್ಜುಗಳಿಗೆ ಹೋಗುವಷ್ಟು ಸಿರಿವಂತನೂ ಆಗಿರಲಿಲ್ಲ. ಹೀಗಾಗಿ ನಾನೇ ಅವನಿಗೆ ಲಾಹೋರಿನ ಸಿವಿಲ್ ಆ್ಯಂಡ್ ಮಿಲಿಟರಿ ಗೆಜೆಟ್ ಸೇರಲು ನೆರವಾದೆ ಎಂದು 'ಪಯೋನಿಯರ್' ಸಂಪಾದಕ ಸರ್ ಜಾರ್ಜ್ ಅಲೆನ್ ಹೇಳಿದ್ದಾನೆ.

ಆಗ ರಡ್‌ಯಾರ್ಡ್‌ನಿಗೆ ಬರೇ ಹದಿನೇಳರ ವಯಸ್ಸು. ಪತ್ರಿಕೆಗಾಗಿ ಆತ ಲಘು ಪ್ರಬಂಧ ಗಳನ್ನು ಬರೆದ; ಶಬ್ದ ಚಿತ್ರಗಳನ್ನು ಬರೆದ, ಪ್ರಾಸಬದ್ಧ ಕವಿತೆಗಳನ್ನೂ ಬರೆದ. ವೈಸರಾಯ ನಾಗಿದ್ದ ಲಾರ್ಡ್ ರಿಪ್ಪನ್ ಪತಿಯಾಳಾ ಸಂಸ್ಥಾನಕ್ಕೆ ಭೇಟಿಯಿತ್ತಾಗ ಅಲ್ಲಿಗೆ ಹೋಗಿ ವರದಿಗಾರನ ಕಾರ್ಯವನ್ನೂ ನಿರ್ವಹಿಸಿದ. ಅನಂತರ ಕಾಶ್ಮೀರಕ್ಕೆ ಹೋಗಿ ಅಲ್ಲಿನ ಮಹಾರಾಜನ ಪಟ್ಟಾಭಿಷೇಕವನ್ನು ವಿಸ್ತೃತ ವಾಗಿ ವರದಿ ಮಾಡಿದ. ಆತ ಸಂಪಾದಕನ ಕಣ್ಮಣಿಯಾದದ್ದು ಅಲ್ಲಿನ ಬ್ರಿಟಿಶ್ ಸಹೋದ್ಯೋಗಿಗಳಲ್ಲಿ ಹೊಟ್ಟೆಯುರಿ ಯುಂಟು ಮಾಡಿದ್ದು ಒಂದು ರೀತಿಯಲ್ಲಿ ಸ್ವಾಭಾವಿಕವೆ. ಒಂದು ಲೆಕ್ಕಾಚಾರದ ಪ್ರಕಾರ ರಡ್‌ಯಾರ್ಡ್ ಹೆಚ್ಚು ಕಡಿಮೆ ಇಪ್ಪತ್ತೈದು ಕಾವ್ಯನಾಮಗಳಿಂದ ಆ ಪತ್ರಿಕೆಗೆ ಬರೆಯುತ್ತಿದ್ದ ನೆಂದರೆ ಆತನ ಬರವಣಿಗೆ ಎಷ್ಟು ವಿಸ್ತೃತ ವಾಗಿತ್ತೆಂಬುದರ ಅರಿವಾಗಬಹುದು. 1889 ರಲ್ಲಾತ ಇಂಗ್ಲೆಂಡಿಗೆ ಹೋಗಿ ಅಲ್ಲಿಯೇ ಶಾಶ್ವತವಾಗಿ ತಳವೂರಿದ.

ಅವನು ಅಲಹಾಬಾದಿನಲ್ಲಿದ್ದಾಗ ಪ್ರೊ. ಎಸ್.ಎಚ್.ಹಿಲ್ ಹಾಗೂ ಅವರ ಹೆಂಡತಿ (ಟೆಡ್) ಯೊಡನೆ ಸಖ್ಯ ಒದಗಿಬಂತು. ಇದೇ ಮುಂದೆ ಅವರು ಮೂವರೂ ಸೇರಿ ಜಪಾನ್, ಅಮೆರಿಕ, ಹಾಗೂ ಕೆನಡಾಗಳಿಗೆ ಪ್ರಯಾಣ ಕೈಕೊಳ್ಳಲು ಕಾರಣವಾಯಿತು. ರಡ್‌ಯಾರ್ಡ್ ನಿಗೆ ತನಗಿಂತ ಒಂಬತ್ತು ವರ್ಷಗಳಷ್ಟು ಹಿರಿ ಯಳಾದ ಟೆಡ್‌ಳೊಡನೆ ಪ್ರಣಯಸಂಬಂಧ ಕುದುರಿದ್ದು ಬಹುಶಃ ಈ ಕಾಲದಲ್ಲೆ. ಅವನು ಅಮೆರಿಕಕ್ಕೆ ಹೋದಾಗ ಟೆಡ್‌ಳ ತಂಗಿಯನ್ನು ಪ್ರೇಮಿಸಿದನಾದರೂ ಅವರ ರೋಮಾನ್ಸ್ ಬಹುಕಾಲ ನಡೆಯಲಿಲ್ಲ. 1889 ರಲ್ಲಿ ಆತ ಇಂಗ್ಲೆಂಡಿಗೆ ಮರಳಿದಾಗ ಪ್ರಕಾಶಕನೊಬ್ಬನ ಪ್ರತಿನಿಧಿಯಾದ ವಾಲ್ಕಾಟ್ ಬೆಲೆಸ್ಟಿಯರ್ ಎಂಬ ಅಮೆರಿಕನ್ ಯುವತಿಯ ಪರಿಚಯ



ಈಗ ಮುಂಬಯಿಯ ಜೆಜೆ ಕಲಾಶಾಲೆ ಎನಿಸಿಕೊಳ್ಳುವ ಈ ಕಟ್ಟಡವೇ ರೆಡ್‌ಯಾರ್ಡ್ ಕಿಪ್ಲಿಂಗ್‌ನ ಜನ್ಮಸ್ಥಳ. ಆತನ ತಂದೆ ಇಲ್ಲಿ ವಾಸ್ತುಶಿಲ್ಪ ಶಾಸ್ತ್ರ ಪ್ರಾಧ್ಯಾಪಕನಾಗಿದ್ದ.

ವಾಗಿ, ಆ ಪರಿಚಯ ತೀರಾ ಗಾಢವಾದ ಸಂಬಂಧಕ್ಕೆ ತಿರುಗಿತು. ಮುಂದೆ ಅವನು ಆಫ್ರಿಕ, ಸಿಂಹಳ ಹಾಗೂ ಭಾರತಕ್ಕೆ ಪ್ರವಾಸ ಕೈಕೊಂಡ. ಮುಂಬಯಿಯಲ್ಲಿವನು ಬಂದಿಳಿದಾಗ ವಾಲ್ಕಾಟ್ ತೀರಿಕೊಂಡ ಸುದ್ದಿ ಬಂತು. ಇಂಗ್ಲಂಡಿಗೆ ಮರಳಿದ ನಂತರ ವಾಲ್ಕಾಟಳ ತಂಗಿಯನ್ನೇ, ಥಾಮಸ್ ಕ್ರಾಸನ್ ಶಬ್ದಗಳಲ್ಲೇ ಹೇಳುವುದಾದರೆ, ಎಂಟೇ ಎಂಟು ದಿವಸಗಳಲ್ಲಿ ಚರ್ಚಿನಲ್ಲಿ ಐದೇ ಐದು ಜನರ ಸಮ್ಮುಖದಲ್ಲಿ ಅವಸರವಸರವಾಗಿ ಮದುವೆಯಾದ".

ಜೀವನದ ಕೊನೆಯ ಇಪ್ಪತ್ತು ವರ್ಷ ಆತ ಅನಾರೋಗ್ಯದಿಂದ ನರಳಿದ. ಮೊದಲಿನ ಖ್ಯಾತಿಯೂ ಉಳಿಯಲಿಲ್ಲ. ಸಾಲದ್ದಕ್ಕೆ ಇದ್ದ ಒಬ್ಬನೇ ಒಬ್ಬ ಮಗನೂ ಯುದ್ಧದಲ್ಲಿ ತೀರಿಕೊಂಡ. ಅವನ ಮುಖ ನೋಡಬೇಕೆಂದರೆ ಹೆಣವೂ ದೊರೆಯಲಿಲ್ಲ. ಇವೆಲ್ಲವುಗಳಿಂದ ಜರ್ಝರಿತನಾದ ಆತ 1936 ರ ಜನವರಿ 18 ರಂದು ತೀರಿಕೊಂಡ. ಸಾಹಿತಿಗೆ ದೊರೆಯಬೇಕಾದ ಸನ್ಮಾನಗಳೊಡನೆ ಅವನನ್ನು ಸತ್ತ ಐದು ದಿನಗಳ ನಂತರ ವೆಸ್ಟ್‌ಮಿನಿಸ್ಟರ್ ಅಬೆಯಲ್ಲಿ ಹೂಳಲಾಯಿತು.

ಆಗಿನ ಕಾಲದಲ್ಲಿ ಭಾರತೀಯರ ಧುರೀಣರಾಗಿದ್ದ ಶಾಪುರಜಿ ಸಕಾಲತ್‌ವಾಲಾರೂ ಅದೇ ಸುಮಾರಿಗೆ ಲಂಡನ್ನಿನಲ್ಲಿ ತೀರಿಕೊಂಡರು. ರಡ್‌ಯಾರ್ಡ್‌ನನ್ನು ದಫನ್ ಗೊಳಿಸಿದ ದಿನವೇ ಸಕಾಲತ್‌ವಾಲಾರಿಗೆ ಅಂತಿಮ ಸಂಸ್ಕಾರ ನೀಡಲಾಯಿತು. ಎರಡೂ ದೇಶಗಳಿಗೆ ಸೇರಿದ ಅವರಿಬ್ಬರ ಅಭಿಮಾನಿಗಳೂ ಅಂದು ಶೋಕ ಸಭೆಯನ್ನೇರ್ಪಡಿಸಿ ರಡ್‌ಯಾರ್ಡ್ ಕಿಪ್ಲಿಂಗನ, "ಪೂರ್ವ ಪೂರ್ವವೆ ಪಶ್ಚಿಮ ಪಶ್ಚಿಮವೆ, ಅವೆರಡೂ ಒಂದಾಗಲು ಸಾಧ್ಯವಿಲ್ಲ" ಎಂಬ ಮಾತನು ಹುಸಿಗೊಳಿಸಿದ್ದು ದೈವೀದುರ್ವಿಲಾಸವೆ. ●




# ನಾನು ಸಾವಿನ ಮುಖ ಕಂಡಾಗ

1961ರ ಮೇ ಸಂಚಿಕೆಯಲ್ಲಿ ಪ್ರಕಟವಾದದ್ದು

ಎಸ್.ವಿ. ಗಾಡಗೀಳ

**ಗಭೀರ ರಾತ್ರಿಯಲ್ಲಿ ಪ್ರಬಲ ಮಂತ್ರಿಯೊಬ್ಬ ದರೋಡೆಕೋರರ ಮುಂದೆ ನಿಸ್ಸಹಾಯಕನಾಗಿದ್ದ!**

"ಇದು ನಿನ್ನ ಮರಣವಲ್ಲ; ಹೀಗಿಲ್ಲ ನಿನ್ನ ಮರಣ" ಎಂದು ಯಾರೋ ಕಿವಿಯಲ್ಲಿ ಗುಣುಗುಣಿಸಿದಂತಾಯಿತು. ನಾನು ಈ ಶಬ್ದಗಳನ್ನು ಕೇಳಿದಂತೆ ಭಾಸವಾದಾಗಿನ ಪರಿಸ್ಥಿತಿಯಲ್ಲಿ ಯಾರೇ ಪ್ರತ್ಯಕ್ಷವಾಗಿ ನುಡಿದಿದ್ದರೂ ನಂಬುವಂತಿರಲಿಲ್ಲ. ಅಷ್ಟು ಕಲ್ಪನಾತೀತವಾಗಿ ಭಯಂಕರವಾಗಿದ್ದಿತು ಆ ಪರಿಸ್ಥಿತಿ. ಅನಪೇಕ್ಷಿತವಾದುದು ಧುತ್ತೆಂದು ಮುಂದೆ ಬಂದುನಿಂತು ನಂತರ ಅಪೇಕ್ಷಿತ ರೀತಿಯಲ್ಲಿ ಅದರ ಪರ್ಯವಸಾನವಾದಂಥ ವಿಚಿತ್ರ ಘಟನೆ ಅದಾಗಿದ್ದಿತು. ಆ ಹತ್ತಿಪ್ಪತ್ತು ನಿಮಿಷಗಳಲ್ಲಿ ದುಃಖಾಂತ್ಯದ ಕರುಣ ರಸ ಹಾಗೂ ಸುಖಾಂತದ ಆನಂದ ಆವೇಶವೂ ಸಮ್ಮಿಳಿತವಾಗಿದ್ದವು. ಮೂರು ಪಾತ್ರಗಳ ಈ ನಾಟಕದಲ್ಲಿ ಪ್ರಸ್ತುತ ಲೇಖಕನ ದೈವವೇ ದಿಗ್ದರ್ಶಕನ ಪಾತ್ರ ವಹಿಸಿತ್ತು.



ಸಾತಾರೆಯಿಂದ ಪುಣೆಯ ಪ್ರವಾಸವನ್ನು ಎಷ್ಟು ಆನಂದದಿಂದ, ಉತ್ಸಾಹದಿಂದ ಪೂರೈಸಿದ್ದೆ. 1952 ಎಪ್ರಿಲ್ 28ನೇ ದಿನಾಂಕ ಅಪರಾಹ್ನದಲ್ಲಿ ಸಾತಾರೆಯಲ್ಲಿ ಕನ್ಯಾ ಶಾಲೆಯ ಹೊಸ ಕಟ್ಟಡದ ಉದ್ಘಾಟನೆಯನ್ನು ನೆರವೇರಿಸಿದ್ದೆ! ಅಲ್ಲಿಂದ ಹೊರಡುವ ಪೂರ್ವದಲ್ಲಿ, ಹಾಸಿಗೆ ಹಿಡಿದಿದ್ದ ಅಕ್ಕನ ಭೆಟ್ಟಿಗೆ ಹೋಗಿದ್ದೆ. 'ಇದೇ ನಮ್ಮ ಕೊನೆಯ ಭೆಟ್ಟಿ' ಎಂದು ಆಕೆ ನುಡಿದಾಗ, "ಮೊಮ್ಮಕ್ಕಳ ಮುಂಜಿವೆ ಆಗದೆ ನಿನ್ನನ್ನು ಒಯ್ಯಬಾರದೆಂದು ನಾನು ಯಮನನ್ನು ನಿರ್ಬಂಧಿಸುತ್ತೇನೆ" ಎಂದು ನಾನು ಮಾರ್ನುಡಿದೆ. ಯಮನೆಂದರೆ ಲೋಕೋಪಯೋಗಿ ಶಾಖೆಯಲ್ಲಿಯ ನಾಲ್ಕನೇ ದರ್ಜೆಯ ಕಾರಕೂನನೆಂದೇ ನಾನು ಭಾವಿಸಿದಂತಿತ್ತು. ನನ್ನ ಈ ವಾಕ್ಯದಿಂದ ತನ್ನ ತಮ್ಮನು ವಿನೋದಿಯಾಗಿದ್ದಾನೆಂದು ನನ್ನಕ್ಕ ಭಾವಿಸಿರಲು ಸಾಕು. ನಾನು ನಮಸ್ಕರಿಸಿ ಹೊರಟು ನಿಂತಾಗ ಅವಳ "ಶತಾಯುಷಿ ಯಾಗು" ಎಂಬ ಆಶೀರ್ವಚನದ ಪರೀಕ್ಷೆ ಕೆಲವೇ ಗಂಟೆಗಳಲ್ಲಿ ನಡೆಯಲಿದೆ ಎಂಬುದರ ಸುಳಿವು ಆಗ ನಮ್ಮಿಬ್ಬರಿಗೂ ಇದ್ದಿರಲಿಲ್ಲ.

ಸಾತಾರೆಯಿಂದ ಸಂಜೆ ಏಳು ಗಂಟೆಗೆ ನಾನು ಕಾರಿನಲ್ಲಿ ಪುಣೆಗೆ ಧಾವಿಸಿದೆ. ಮರುದಿನ ಹೈದರಾಬಾದ್‌ನಲ್ಲಿ ನಡೆಯಲಿದ್ದ ಬೃಹನ್ಮಹಾರಾಷ್ಟ್ರ ಪರಿಷತ್ತಿನ ಅಧ್ಯಕ್ಷಸ್ಥಾನವನ್ನು ಅಲಂಕರಿಸುವುದಕ್ಕಾಗಿ ಅಲ್ಲಿಗೆ ತೆರಳಲು ಪುಣೆಯಲ್ಲಿ ರಾತ್ರಿ ಮೇಲುಗಾಡಿಯನ್ನು ಹಿಡಿಯಬೇಕಾಗ್ಗಿದ್ದಿತು. ವೇಗದಿಂದ ಸಾಗಿದ್ದ ಕಾರಿನಲ್ಲಿ ನಾನು ಮರುದಿನದ ಭಾಷಣದ ಸಿದ್ಧತೆಯನ್ನೂ ಅಷ್ಟೇ ವೇಗದಿಂದ ನಡೆಸಿದ್ದೆ.

ಈ ವಿಚಾರಸರಣಿಯಲ್ಲಿಯೆ ನಾನು ರಾತ್ರಿ ಹತ್ತು ಗಂಟೆಗೆ ಪುಣೆಗೆ ಹಿಂತಿರುಗಿದೆ. ಅಲ್ಲಿ ಖಾಸಗಿ ಹಾಗೂ ಸರಕಾರಿ ಕಾಗದ ಪತ್ರಗಳನ್ನು ನೋಡುತ್ತ ಸುಮಾರು ಎರಡು ಗಂಟೆ ಕಾಲ ಕಳೆದು ರೇಲ್ವೆಸ್ಟೇಶನ್ನಿಗೆ ಹೊರಟೆ. ಈ ಪ್ರವಾಸಿ ಸಾಮಾನ್ಯನಾಗಿರಲಿಲ್ಲ; ಅಂತೇ ನಿಲ್ದಾಣದಲ್ಲಿ ಯೋಗ್ಯ ಪೊಲೀಸ್ ವ್ಯವಸ್ಥೆ ಇದ್ದಿತು. ಮದ್ರಾಸ್ ಮೇಲಿಗೆ ಖಡಕಿಯಲ್ಲಿ ಏನೋ ಅಪಘಾತವಾಗಿದ್ದರಿಂದ ಅದು ಒಂದು ಗಂಟೆ ತಡವಾಗಿ ಬರುವುದು ಎಂಬ ಸುದ್ದಿ ನನಗಾಗಿ ಕಾದಿತ್ತು. ಪ್ಲಾಟ್‌ಫಾರ್ಮ್ ಮೇಲೆಯೇ ವೇಳೆ ಕಳೆಯಬೇಕೆಂದು ನಿರ್ಧರಿಸಿ ನಾನು ಮತ್ತೆ ಇಬ್ಬರು ಮೂವರು ಕುರ್ಚಿಗಳನ್ನು ತರಿಸಿಕೊಂಡು ಕುಳಿತೆವು. ಗಂಟೆಯೊಳಗಾಗಿ ಗಾಡಿ ಬಂದಿತು. ಸಂರಕ್ಷಣ ಶಾಖೆಯ ಪೊಲೀಸರು ರಿಸರ್ವ್ ಫಸ್ಟ್ ಕ್ಲಾಸ್ ಡಬ್ಬಿಯನ್ನು ಮೊದಲು ಪರೀಕ್ಷಿಸಿದ ನಂತರ ನನ್ನ ಹಾಸಿಗೆ ಬಟ್ಟೆಯ ಪೆಟ್ಟಿಗೆ, ಸರಕಾರಿ ಹಾಗೂ ಗುಪ್ತ ಕಾಗದ ಪತ್ರಗಳ ಪೆಟ್ಟಿಗೆ ಮುಂತಾದ ಸಾಮಾನುಗಳನ್ನು ಒಳಗೆ ಇಡಲಾಯಿತು. ಒಂದೆರಡು ನಿಮಿಷಗಳಲ್ಲಿ ನಾನೂ ಡಬ್ಬಿಯನ್ನೇರಿದೆ.

ಮಧ್ಯರಾತ್ರಿಯಾಗಿ ಹೋಗಿತ್ತು. ಎರಡೂ ಬಾಗಿಲಗಳ ಮೇಲಿನ ಸೂಚನೆಗಳನ್ನು ಓದಿ ನೋಡಿಕೊಂಡು ಬೋಲ್ಟ್ ಏರಿಸಿದೆ. ಕಿಡಿಕಿಗಳು ಮುಚ್ಚಿದ್ದರಿಂದ ಆ ಕಡೆಗೆ ನಾನು ನೋಡಲಿಲ್ಲ. ಅವು ತೆರೆದಿದ್ದರೂ ಹಾಗೇ ಬಿಟ್ಟುಬಿಡುತ್ತಿದ್ದೆ. ಬೇಸಿಗೆಯ ದಿನ ಇಂಗ್ಲೀಷ್ ಪಂಚಾಂಗದಂತೆ ಏಪ್ರಿಲ್ 29ನೇ ತಾರೀಖು ಪ್ರಾರಂಭವಾಗಿತ್ತು. ತನ್ನ ಹಣೆಬರಹದಲ್ಲಿ ಏನಿತ್ತೆಂಬುದು ಪಾಪ, ಆ ದಿನಕ್ಕೂ ಗೊತ್ತಿರಲಿಕ್ಕಿಲ್ಲ. ಮಹಾ ಘಟನೆ ಸಂಭವಿಸುವ ಕಾಲಕ್ಕೆ ಸೃಷ್ಟಿಯೂ ಅಪರಿಚಿತ ರೂಪಧಾರಣ ಮಾಡುತ್ತದೆ. ಝುಂಝಾವಾತ ಬೀಸುತ್ತದೆ. ಅರಸು ಸಾಯತಕ್ಕವನಿದ್ದರೆ ಆಕಾಶದಲ್ಲಿ ಧೂಮಕೇತು ಮೂಡುತ್ತದೆ. ಅಥವಾ ಭೂಮಿಯ ಮೇಲೆ ನಾಯಿಗಳು ಅಳ ಹತ್ತುತ್ತವೆ. ಆದರೆ ಆಕಾಶ ನಿರಭ್ರವಾಗಿತ್ತು. ಸಾಗಿದ್ದ ಗಾಡಿಯ ಸದ್ದೇ ಸದ್ದು. ಒಂದೆರಡು ನಿಮಿಷಗಳಲ್ಲಿ ಮೈಮೇಲಿನ ಬಟ್ಟೆಗಳನ್ನು ಕಳಚಿ ಗೂಟಕ್ಕೆ ತಗಲಿಸಿದೆ. ಇಡೀ ದಿನದ ಘಟನೆಗಳನ್ನು ಕ್ಷಣ ಹೊತ್ತು ಧ್ಯಾನಿಸಿದೆ. ದೊಡ್ಡ ದೀಪವನ್ನು ಆರಿಸಿ ಮೂಲೆಯಲ್ಲಿಯ ನೀಲಿದೀಪವನ್ನು ಹಚ್ಚಿದೆ. ತಲೆ ಮೇಲಿನ ರಾಜಮುಕುಟ ಮನಸಿಗೊಂದು ಹೊರೆ ಎಂಬ ಮಾತು ನನಗೆ ಅನ್ವಯಿಸುತ್ತಿರಲಿಲ್ಲ. ಸಾರ್ವಜನಿಕ ಚಿಂತೆಯು ನನ್ನಂತೆ ಎಲ್ಲರಿಗೂ ಇದ್ದುದರಿಂದ ಮಂತ್ರಿ ಪದದ ಅವಧಿಯಲ್ಲಿಯೂ ನಾನು ನಿದ್ದೆಗೇಡಾದುದಿಲ್ಲ. ನಿತ್ಯವಾದ ಚಿಂತೆ ವ್ಯಗ್ರತೆಗಳ ಮೂಲಕ ನಾನು ಸ್ಥಿತಪ್ರಜ್ಞನಾಗಿದ್ದೆ. ಸ್ವಿಚ್ ಒತ್ತಿದ ಕೂಡಲೆ ದೀಪ ಆರಿ ಹೋಗುವಂತೆ ಹಾಸಿಗೆಗೆ ಬೆನ್ನು ಹಚ್ಚಿದ

ಕೂಡಲೆ ನಿದ್ರಾ ಪರವಶನಾದೆ.

ನಿದ್ರೆಯಲ್ಲಿ ಮನಸ್ಸು ಸ್ತಬ್ಧವಾಗಿರದೆ ಪಂಚೇಂದ್ರಿಯಗಳ ಕಾರ್ಯವನ್ನು ನೋಡಿಕೊಳ್ಳುತ್ತಿರುತ್ತದಂತೆ. ನನ್ನ ನಿದ್ರೆಯೂ ಹಗುರು. ಆದರೆ ಅಂದಿನ ದಿನ ಮಾತ್ರ ನಿದ್ರಾವಶವಾಗಿದ್ದ ನನ್ನ ಮನಸ್ಸು ಹೊರಗಡೆ ನಡೆಯುತ್ತಿದ್ದ ಯಾವ ಘಟನೆಯನ್ನೂ ಗಮನಿಸಲಿಲ್ಲ. ಆ ಘಟನೆಯ ಸದ್ದಿನಿಂದ ಎಚ್ಚರಾಗಲಿಲ್ಲ. ಗಾಡಿಯ ಸಪ್ಪಳದಲ್ಲಿ ಆ ಸದ್ದು ಅಡಗಿ ಹೋಗಿರಬೇಕು.

ಪುಣೆಯಿಂದ ಹೊರಟ ಆ ಮೇಲ್ ಗಾಡಿ ಧೋಂಡದಲ್ಲಿ ನಿಂತಿರಲೇಬೇಕು. ಅಲ್ಲಿಯ ವರೆಗೆ ನಾನು ನಿದ್ರೆಯಲ್ಲಿ ತಲ್ಲೀನನಾಗಿದ್ದೆ. ಮೇಲೆ ತಿರುಗುತ್ತಿದ್ದ ಬೀಸಣಿಕೆಯ ತಂಪು ಗಾಳಿಯು ನಿದ್ರೆಗೆ ಹಿತಕರವಾಗಿತ್ತು. ಮೂಲೆಯಲ್ಲಿದ್ದ ನೀಲೀ ದೀಪವು ಘಟನೆಯ ವಾತಾವರಣವನ್ನು ನಿರ್ಮಿಸಿ ತುಂಟ ಸಾಕ್ಷಿದಾರನಂತೆ ಸ್ತಬ್ಧವಾಗಿತ್ತು.

ಬ್ರಾಹ್ಮ ಮುಹೂರ್ತದಲ್ಲಿ ಇಂಥ ಸ್ಥಿತಿಯಲ್ಲಿ ಹೆಗಲ ಮೇಲೇನೊ ಜಡವಸ್ತು ಇದ್ದಂತೆ ಭಾಸವಾಗಹತ್ತಿತು. ಕ್ಷಣಾರ್ಧದಲ್ಲಿ ಕಣ್ಣು ತೆರೆದೆ. ಮುಖಕ್ಕೆ ಮುಖವಾಡ ಹಾಕಿಕೊಂಡಂಥ ಟೊಣಪನೊಬ್ಬನು ನನ್ನ ಎರಡೂ ಹೆಗಲುಗಳನ್ನು ಅದುಮುತ್ತ "ಪೈಸಾ ಕಿಧರ್ ಹೈ" ಎಂದು ಅರಚಿದ. ನನ್ನ ಕಣ್ಣು ಕಿವಿಗಳು ಆ ಪ್ರಸಂಗದ ಪರಿಚಯವನ್ನು ಮಾಡಿಕೊಟ್ಟವು. ಹೆಗಲ ಮೇಲಿದ್ದ ಆತನ ಕೈಗಳ ಗತಿಯಿಂದ ಸಂಕಟದ ಶಕ್ತಿಯನ್ನು ತರ್ಕಿಸುವಂತಾಯಿತು. ಮತ್ತೆ ಕ್ಷಣಾರ್ಧದಲ್ಲಿ ಕೈಯಲ್ಲಿ ಚೂರಿ ಹಿಡಿದುಕೊಂಡು ಆ ಟೊಣಪನು ತುಸು ಬಾಗಿ, "ಬೋಲೊ, ಪೈಸಾ ಕಿಧರ್ ಹೈ?" ಎಂದು ಗರ್ಜಿಸಿದ. ಮುಖವಾಡ ಹಾಕಿಕೊಂಡಿದ್ದರಿಂದ ಆತನನ್ನು ಗುರುತಿಸಲೂ ಸಾಧ್ಯವಿರಲಿಲ್ಲ. ಅವರಿಬ್ಬರೂ ಬೆಳಕಿಗಡ್ಡವಾಗಿ ನಿಂತಿದ್ದರಿಂದ ಕತ್ತಲೆಯಿದ್ದಂತೆ ಅನಿಸುತ್ತಿತ್ತು.

ನನ್ನ ಮನಸ್ಸು ಒಂದೆರಡು ಕ್ಷಣ ಯಾವ ನಿರ್ಣಯಕ್ಕೂ ಬರಲಿಲ್ಲ. ಇಡೀ ಆಯುಷ್ಯದಲ್ಲಿ ವಾಗ್ಬಾಣಗಳನ್ನುಳಿದು ಬೇರೆ ಯಾವ ಶಸ್ತ್ರ ಪ್ರಹಾರ ಮಾಡಿರದಂಥ, ಜೀವಮಾನದಲ್ಲಿ ಹೃದಯ ಪರಿವರ್ತನದಲ್ಲಿಯೆ ಶ್ರದ್ಧೆಯನ್ನಿಟ್ಟು ಜನಮನವನ್ನು ಮತಗಳನ್ನು ಗೆದ್ದಂಥ ಅಷ್ಟೊಂದು ಶ್ರದ್ಧೆಯಿಂದಲ್ಲದಿದ್ದರೂ ವ್ಯಾವಹಾರಿಕವಾಗಿಯಾದರೂ ಅಹಿಂಸೆಯನ್ನು ಅಂಗೀಕರಿಸಿದಂಥ ನನ್ನನ್ನು ಘಾತಿಸುವುದಕ್ಕಾಗಿ ಯಮನು ಮೋರೆಗೆ ಮುಸುಕು ಹಾಕಿಕೊಂಡ, ಚೂರಿ ಹಿಡಿದುಕೊಂಡ ನಿಶಾಚರನನ್ನು ಆರಿಸಬೇಕೆ?

ಕಣ್ಣಿಗೆ ಕಣ್ಣು ಕೂಡಿದ್ದರೆ ನನ್ನ ಅಧಿಕಾರ ದೃಷ್ಟಿಗೆ ಅವರು ತಲೆ ಬಾಗಬಹುದಿತ್ತು. ನಿಶ್ಶಸ್ತ್ರರಾಗಿ ಬಂದಿದ್ದರೆ ನನ್ನ ವಾಣೀವಿಲಾಸಕ್ಕೆ ಮೋಹಿತರಾಗಿ ಹಿಂತಿರುಗಬಹುದಿತ್ತು. ನಚಿಕೇತನ ಕಾಲಕ್ಕೆ ಮಾಡಿದ ತಪ್ಪನ್ನೇ ಪುನಃ ಮಾಡಬಾರದೆಂದು ಯಮನು ತಾನೇ ಸ್ವತಃ ಬರದೆ ಈ ಸಲ ಈ ಅಭಿನವ ದೂತರನ್ನು ಕಳಿಸಿರಬಹುದು.

"ಪೈಸಾ ಕಿಧರ್ ಹೈ, ತಬಾ ಕರೇಂಗೆ" ಎಂದು ಆ ವ್ಯಕ್ತಿಗಳಿಬ್ಬರೂ ಭವಿಷ್ಯವಾಣಿಯನ್ನು ಕೇಳಿಸಿದರು.

"ಪೈಸಾ ನಹಿ ಹೈ, ಕ್ಯಾ ಕರ ರಹೆ ಹೋ?" ಎಂದು ನಾನು ಅವರನ್ನು ನಿವಾರಿಸಿದೆ.

ನಾವೇನು ಮಾಡುತ್ತಿರುತ್ತೇವೆಂಬುದು ಅನೇಕ ಸಲ ನಮಗೇ ಹೊಳೆಯುವುದಿಲ್ಲ. ಸುತ್ತಲಿನ ಪರಿಸ್ಥಿತಿಗನುಗುಣವಾಗಿ ಪ್ರತಿಕ್ರಿಯೆಯು ಅಳು ಅಥವಾ ನಗುವಿನ ರೂಪದಲ್ಲಿ ವ್ಯಕ್ತವಾಗುತ್ತಿರುತ್ತದೆ. ಮುಂದಿನ ಕೃತಿಗೂ ಅದೇ ಮೂಲ. ಇಲ್ಲಿಯೂ ಹಾಗೇ ಆಯಿತು. ಈ ಘಟನೆ ನಡೆದು ಹೋದ ನಂತರ ಅನೇಕರು ನಾನು ಲಕ್ಷ್ಮೀಧರನ ನೀತಿಯನ್ನು ಏಕೆ ಅವಲಂಬಿಸಲಿಲ್ಲ. ಅದೇ ನಿಜವಾಗಿ ವ್ಯಾವಹಾರಿಕವಾಗಿದ್ದಿತು ಎಂದು ಹೇಳಿದ್ದಾರೆ. ನನಗೇಕೊ ಆ ಮಾರ್ಗ ಹೊಳೆಯಲಿಲ್ಲ. ಬಹುಶಃ ಅವರು ಕೇಳುತ್ತಿದ್ದ ಹಣವೂ ನನ್ನಲ್ಲಿರಲಿಲ್ಲ. ಶಿಕ್ಷಣ ಸಂಸ್ಕಾರಗಳಿಂದ ರೂಪುಗೊಂಡ ಶೀಲವೇ ಪ್ರಸಂಗ ವಿಶೇಷದಲ್ಲಿ ವ್ಯಕ್ತವಾಗುತ್ತವೆಂಬುದು ನಿಜ. 'ಕ್ಯಾ ಕರ್ ರಹೇ ಹೋ' ಎಂಬ ವಾಕ್ಯವನ್ನು ಆಡುವ ಹೊತ್ತಿಗೆ ನಾನು ಒಂದು ನಿರ್ಣಯಕ್ಕೆ ಬಂದಿದ್ದೆ; ಚೂರಿ ಹಿಡಿದಿದ್ದವನ ಮುಂಗೈಯನ್ನು ಗಟ್ಟಿಯಾಗಿ ಹಿಡಿದಿಟ್ಟೆ.

ಆತನು ಚೂರಿಯನ್ನು ಕೆಳಗಿಳಿಸಲು ಹೆಣಗುತ್ತಿದ್ದ, ನಾನು ನಿರೋಧಿಸುತ್ತಿದ್ದೆ. ಆ ಚೂರಿಯು

ಆಗ ನೇರವಾಗಿ ನನ್ನ ಹೃದಯದಲ್ಲಿಳಿಯ ಬಹು
ದಾಗಿತ್ತು. ಹರೆಯದಲ್ಲಿ ತುಸು ಮಲ್ಲ ವಿದ್ಯೆ
ಯನ್ನು ಕಲಿತಿದ್ದರಿಂದ ಪ್ರತೀಕಾರವು ಅಯಶಸ್ವಿ
ಯಾದರೂ ಚೂರಿಯು ನನ್ನನ್ನು ಘಾತಿಸದಿರ
ಲೆಂದು ಎಡಮಗ್ಗುಲಿಗೆ ಹೊರಳಿದೆ. ಆಗ
ಆತನು ನನ್ನನ್ನು ಕೆಳಗೆಳೆದ. ತನ್ನ ಮುಂಗೈ
ಯನ್ನೂ ಬಿಡಿಸಿಕೊಂಡ. ನಾನೂ ಚೂರಿಯ
ಇರಿತದಿಂದ ಪಾರಾದೆ. ಎಡಗೈಗೆ ತುಸು
ಗಾಯವಾಗಿತ್ತು.

ಈಗ ಬರ್ತಿನ ಮೇಲಿಂದ ನಾನು ಕೆಳಗೆ
ಬೋರಲು ಬಿದ್ದಿದ್ದೆ. ಎದ್ದು ನಿಲ್ಲಬೇಕೆನ್ನುವುದ
ರೊಳಗಾಗಿ ಆತ ನನ್ನ ಮೂಗಿನ ಮೇಲೆ ಲತ್ತಾ
ಪ್ರಹಾರ ಮಾಡಿದ್ದರಿಂದ ಮೂಗಿನಿಂದ ರಕ್ತ
ಹರಿಯಹತ್ತಿತು. ಹಾಗೇ ನಾನು 'ಕ್ಯಾ ಕರ್
ರಹೇ ಹೋ' ಎಂದು ಎರಡು ಮೂರು ಸಲ
ಕಿರಿಚುವಷ್ಟರಲ್ಲಿ ದಿಂಬಿನ ಹತ್ತಿರ ಇದ್ದ ಖಾದೀ
ಶರ್ಟನ್ನೆತ್ತಿಕೊಂಡು ನನ್ನ ಬಾಯಿಗೆ ತುರುಕಿದ.
ದೀನೋದ್ಧಾರಕ, ದಾರಿದ್ರ್ಯ ನಿವಾರಕ,
ಅನ್ಯಾಯಾಪಹಾರಕವಾದ ಖಾದಿ ನನ್ನ
ಬಾಯನ್ನೇ ಮುಚ್ಚಿಬಿಟ್ಟಿತು. ಕೈಗಳಿಂದ
ಪ್ರತೀಕಾರ ಮಾಡ ಬೇಕೆನ್ನುವುದರಲ್ಲಿ ಆತನು
ತನ್ನ ಎರಡೂ ಕೈ ಗಳನ್ನು ನನ್ನ ಕರವಸ್ತ್ರ
ದಿಂದಲೇ ಬೆನ್ನಹಿಂದೆ ಬಿಗಿದು ಬಿಟ್ಟಿದ್ದನು.
ಕಣ್ಣುಗಳು ಭೂಮಿಗೆ ತಾಗಿದಂತಾಗಿದ್ದರಿಂದ
ಏನೂ ಕಾಣಿಸುತ್ತಿರಲಿಲ್ಲ. ಚೀರಾಡಿ ಏನನ್ನೂ
ಸಾಧಿಸುವಂತಿರಲಿಲ್ಲ. ಕಣ್ಣಿಂದ ಬೆದರಿಸು
ವುದೂ ಅಶಕ್ಯವಾಗಿತ್ತು. ಐದಾರು ಕ್ಷಣಗಳಲ್ಲಿ
ಇಷ್ಟೆಲ್ಲ ನಡೆದದ್ದರಿಂದ ಈ ಚಿತ್ರಪಟದಲ್ಲಿ
ಇನ್ನೂ ಏನೇನು ಘಟಿಸುವುದೆಂಬುಗರ ಕಲ್ಪ
ನೆಯೆ ಆಗಲೊಲ್ಲದು. ಅಳುವ ರೂಢಿ
ಇರಲಿಲ್ಲ. ಅತ್ತು ಸಾಧಿಸಬೇಕಾದುದೂ
ಇರಲಿಲ್ಲ. 'ಅರಚುವುದು' ಅಥವಾ 'ಬೊಬ್ಬೆ
ಇಡುವುದು' ಪ್ರಜಾ ಪ್ರಭುತ್ವದಲ್ಲಿಯ ಹಕ್ಕು.
ಆದರೆ ಈಗ ಅದಕ್ಕೂ ಚ್ಯುತಿ ಬಂದಿತ್ತು.
ಹೆದಮುರಿಗೆ ಕಟ್ಟಿ ಒಗೆದ ಸ್ಥಿತಿಯಲ್ಲಿ ಒದ್ದಾಡು
ವುದು ಅಶಕ್ಯ; ಅದರಲ್ಲಿಯೂ ಇಬ್ಬರು ಯಮ
ದೂತರು ಸಾಕ್ಷಾತ್ತಾಗಿ ನಿಂತಿರುವಾಗ ಹೇಗೆ
ಸಾಧ್ಯವಾದೀತು? ನಾನು ತುಸು ಹೊಯ್ದಾಡಿ
ದೊಡನೆ ಅವರಲ್ಲೊಬ್ಬನು ಮತ್ತೊಮ್ಮೆ
ಬಲವಾಗಿ ಲತ್ತೆ ಕೊಟ್ಟಿದ್ದರಿಂದ ಕಣ್ಣಿಗೆ ಕತ್ತಲೆ
ಕವಿದಂತಾಯಿತು.

**ಮೇ 89ರ ಪುಸ್ತಕ ವಿಭಾಗ**
**ಡಾ. ಶಂಕರಮೊಕಾಶಿ ಪುಣೇಕರರ**

## ಅವಧೇಶ್ವರಿ

ಕಾದಂಬರಿಯ ಸಂಗ್ರಹ

**ಶ್ಯಾಮಸುಂದರ ಬಿದರಕುಂದಿ**
**ಅವರಿಂದ**

ಭಾರತ ಸರಕಾರದ ಹದಿನಾಲ್ಕು ಮಂತ್ರಿ
ಗಳಲ್ಲಿ ಒಬ್ಬನಾಗಿ, ಭಾರತ ಸರಕಾರದ ರೇಲ್ವೆ
ಯಲ್ಲಿ ಸಂರಕ್ಷಣೆಗಾಗಿ ಅಧಿಕಾರಿಗಳು,
ಹತ್ತಾರು ಪೊಲೀಸರನ್ನಿಟ್ಟುಕೊಂಡು ಪ್ರವಾಸ
ಮಾಡುತ್ತಿದ್ದ ನಾನು ಈ ಸ್ಥಿತಿಯಲ್ಲಿ ಸಿಕ್ಕು
ಬಿದ್ದಿದ್ದೆ. ವಿಕ್ರಮ ರಾಜನು ತಿಪ್ಪೆಯಲ್ಲಿ,
ಕೈಕಾಲು ಕತ್ತರಿಸಿಕೊಂಡು ಹೊರಳಾಡಬೇಕಾ
ಯಿತು. ಆದರೂ ಆತನ ವಾಣಿ ಇಂಗಿದ್ದಿಲ್ಲ.
ಶನಿ ಮಹಾತ್ಮಹಾಗೆ ಹೇಳುತ್ತಿದೆ

ಆತ ನನ್ನ ಮೂಗಿನ ಮೇಲೆ ಒದೆಯನ್ನಿತ್ತು
ನನ್ನ ಮೂಗನ್ನೇ ಕೊಯ್ದಂತೆ ಮಾಡಿದ್ದ.
ದೈವದ ಉದ್ದೇಶವು ಇಷ್ಟೇ ಆಗಿರಬಹುದು.
ಶ್ರೀವಿಷ್ಣುವು ಭೃಗುವಿನ ಒದೆಯನ್ನು ಹೃದಯ
ದಲ್ಲಿ ಧರಿಸಿ ಲಾಂಛನವಾಗಿ ಅಂಗೀಕರಿಸಿದ.
ಇಲ್ಲಿ ಕೂಡ ನಾನು ಒಳ್ಳೆ ಅರ್ಥವನ್ನೇ ಏಕೆ
ಗ್ರಹಿಸಬಾರದು? ಭೃಗು ವಿದ್ವಾಂಸನಾದ
ಬ್ರಾಹ್ಮಣನಾಗಿದ್ದ. ಭಗವಾನ್ ವಿಷ್ಣುವು ಧಾತ್ರ
ಶಕ್ತಿ. ಇಂದಿನ ಪ್ರಜಾಪ್ರಭುತ್ವದಲ್ಲಿ ಸರಕಾರಕ್ಕೆ
ಲತ್ತೆ ಕೊಡುವ ಅಧಿಕಾರ ಸಾಮಾನ್ಯ ನಾಗರಿಕ
ನಿಗೆ ದೊರೆತಿಲ್ಲವೆ? ಈ ಅಧಿಕಾರವೀಗ
ಕೆಲವರಿಗೆ ಮರ್ಯಾದಿತವಾಗಿರದೆ ಇಡೀ ಜನತೆಗೆ
ಪ್ರಾಪ್ತವಾಗಿದೆ. ಈ ಘಟನೆಯೂ ಅದರ
ದೃಷ್ಟಾಂತವೆಂದೇ ನನ್ನ ಮನಸ್ಸಿನಲ್ಲಿ ಸುಳಿದು
ಹೋಯಿತು.

ಹೀಗೆ ಒಂದೆರಡು ಕ್ಷಣಗಳುರುಳುವುದರೊಳಗಾಗಿ ಕುತ್ತಿಗೆಗೆ ಬಟ್ಟೆಯ ಉರುಲು ಹಾಕಿ ಇಬ್ಬರೂ ಎರಡೂ ಕಡೆಗಳಿಂದ ಎಳೆಯಹತ್ತಿದ್ದರು. ಸತ್ಯವಾನನನ್ನು ಕೋಣದ ಮೇಲೆ ಕುಳ್ಳಿರಿಸಿ ಆತನ ಪ್ರಾಣಗಳನ್ನು ಯಮನು ಎಳೆಯುತ್ತಿದ್ದ ಪೌರಾಣಿಕ ಚಿತ್ರವು ಕಣ್ಣ ಮುಂದೆ ನಿಂತಿತು. ಕುತ್ತಿಗೆಯ ಉರುಳು ಬಿಗಿಯಾಗ ಹತ್ತಿತು. ಇದು ನೇಣೇ ಎಂಬಲ್ಲಿ ಸಂದೇಹವುಳಿಯಲಿಲ್ಲ. ಸ್ವಾತಂತ್ರ್ಯ ಸಮರದಲ್ಲಿ ಗಲ್ಲಿಗೇರುವುದು ರಮ್ಯವೂ, ಆಕರ್ಷಕವೂ ಆದ ಭಾವನೆ ಯಾಗಿದ್ದು, ಅನೇಕರು ತಮಗೆ ಇಂಥ ಹುತಾತ್ಮರ ಮರಣ ಬರಲಿ ಎಂದು ಹಾರೈಸಿದ್ದು ಉಂಟು. ಕೊರಳಿಗೆ ಹಾರ ಬೀಳಬೇಕೆಂದು ವಿಧಿಯು ವಿಧಿಸಿದರೂ ದೇಶದ ಸ್ವಾತಂತ್ರ್ಯಕ್ಕಾಗಿ ನೇಣಿನ ಹಗ್ಗವನ್ನೇ ಸ್ವಾಗತಿಸಬೇಕೆಂದು ಹೇಳುವ ಕವಿ ಬಿಸ್ಮಿಲ್ಲಾನ ಕಾವ್ಯವನ್ನಾರು ಮರೆತಾರು? ಆದರೆ ಇದು ದೇಶಕ್ಕಾಗಿ ಕೊರಳೊಡ್ಡಿದ ಉರುಲಾಗಿರಲಿಲ್ಲ. ಅಂಥ ವೇಳೆ ಭೂತಕಾಲದಲ್ಲಿ ಸೇರಿಹೋಗಿತ್ತು. ಈಗ ದೇಶಕ್ಕಾಗಿ ಜೀವಿಸಿ ದೇಶದ ಉತ್ಕರ್ಷವನ್ನು ಸಾಧಿಸಬೇಕಾದ ಕಾಲವಾಗಿದ್ದಿತು. ಅನೇಕ ಯೋಜನೆಗಳು ಕಾರ್ಯಗತವಾಗಹತ್ತಿದ್ದವು; ಮತ್ತೆ ಕೆಲವು ಈ ಐದು ವರ್ಷಗಳಲ್ಲಿ ರೂಪ ತಾಳಹತ್ತಿದ್ದವು. ಚುನಾವಣೆಯಲ್ಲಿ ಲಕ್ಷಾವಧಿ ಮತಗಳನ್ನು ಗಳಿಸಿದ್ದರಿಂದ ಲೋಕಪ್ರಿಯತೆಯ ಅಹಂಕಾರವು ಮನಸ್ಸಿನ ಸಿಂಹಾಸನದಲ್ಲಿ ಆರೂಢವಾಗಿದ್ದಿತು. ಆದರೆ ಇಲ್ಲಿ ಇದೆಂಥ ಪ್ರಸಂಗ! ಯಾರೋ ಯಾರನ್ನೋ ಗಲ್ಲಿಗೇರಿಸಲು ಸಿದ್ಧರಾಗಿದ್ದರು. ಇನ್ನು ಕ್ಷಣಾರ್ಧದಲ್ಲಿ... ಉಸಿರಾಡಿಸುವುದೂ ಕಷ್ಟಸಾಧ್ಯವಾಗಿತ್ತು. ಕಣ್ಣು ತೆರೆದಿದ್ದು ದೃಷ್ಟಿ ನಿಶ್ಚಳವಾಗಿತ್ತು. ಜೀವನ ಮರಣಗಳ ನಡುವಿನ ಹೊಸ್ತಿಲನ್ನು ದಾಟಲು ನಾನು ಕಾಲನ್ನೂ ಎತ್ತಿದ್ದೆ. ಸಾವು ಸನ್ನಿಹಿತವಾಗಿದೆಂಬುದನ್ನು ಮನಸ್ಸು ಅರಿತುಕೊಂಡಿತು. ಜೀವನದುದ್ದಕ್ಕೂ ಪೂಜಿಸಿದ, ಆರಾಧಿಸಿದ ಯಾವ ದೇವರೂ ಕಣ್ಣೆದುರು ಸುಳಿಯಲಿಲ್ಲ. ಮನಸ್ಸಿನಲ್ಲಿ ಅದರ ವಿಚಾರವೂ ಬರಲಿಲ್ಲ.

ವಾತ ಪಿತ್ತ-ಕಫಗಳಿಂದ ಗಂಟಲು ಬಿಗಿದು ಬಂದಿರಲಿಲ್ಲ. ಆದರೂ ಹರಿ ಸ್ಮರಣೆ ನಡೆಯಲಿಲ್ಲ. ಇಪ್ಪತ್ತೆಂಟು ವರ್ಷ ಕಾಲ ಜೀವನದ ಸಂಗಾತಿಯಾಗಿದ್ದವಳ ನೆನಪೂ ಬರಲಿಲ್ಲ. ಆಕೆಯ ಸ್ಥಳಕ್ಕೆ ಬಂದವಳ ನೆನಪೂ ಆಗಲಿಲ್ಲ. ಒಬ್ಬ ಮಕ್ಕಳ ನೆನಪೂ ಕೂಡ ಸುಳಿಯಲಿಲ್ಲ. ಮಾಯಾಬಂಧನದಿಂದ ಮುಕ್ತನಾದಂತಿದ್ದೆ. ನನ್ನ ಹಿಂದುಳಿದವರ ಗತಿ ಏನಾಂದೀತೆಂಬ ವಿಚಾರವೂ ಸ್ಪರ್ಶಿಸಲಿಲ್ಲ. ಇಲ್ಲಿಯ ನಾನು ಮತ್ತು ಅಲ್ಲಿಯ ನಾನು- ಇವರಲ್ಲಿ ಒಂದೇ ಕ್ಷಣದ ಅಂತರ ಉಳಿದಿತ್ತು. ಜಾಗೃತವಾಗಿದ್ದ ಮನಸ್ಸಿನಲ್ಲಿ ಒಂದು ವಿಚಾರ ಸುಳಿಯುತ್ತಿತ್ತು. ಅನೇಕರ ಮರಣವನ್ನು ನಾನು ಕಂಡಿದ್ದೆ. ಅಂತ್ಯಕಾಲದ ಸ್ಥಿತಿಯ ಪರಿಚಯ ನನಗಿತ್ತು. ಆದರೆ ಇಲ್ಲಿ ನಾಡಿ ಸರಾಗವಾಗಿತ್ತು. ಬಿಕ್ಕಳಿಕೆ ಇದ್ದಿಲ್ಲ. ದೀಪವು ಕ್ರಮೇಣ ನಂದಿ ಹೋಗುವ ರೀತಿಯೂ ಇದಾಗಿರಲಿಲ್ಲ. ಆದರೆ ಅದು ಶಾಂತವಾಗಿ ಬಿಡುವುದು ಮಾತ್ರ ಖಂಡಿತವಾಗಿತ್ತು. ಮೇಲಿನ ಉಸಿರು ಮೇಲೆಯೆ, ಕೆಳಗಿನದು ಕೆಳಗೆಯೆ, ಕೊರಳಿನ ಸುತ್ತಲೂ ವಿಲಕ್ಷಣ ಒತ್ತಡ.

ಯೆರವಡಾದ ಕತ್ತಲೆ ಕೋಣೆಯು ನೆನಪಾಯಿತು. ಈ ಕತ್ತಲೆ ಕೋಣೆಯು ಜೇಲಿನ ಮುಖ್ಯ ಕಟ್ಟಡದಿಂದ 20 ಅಡಿಗಳ ಅಂತರದಲ್ಲಿದ್ದು ಅದಕ್ಕೆ ಹೊಂದಿಯೆ ಗಲ್ಲಿಗೇರಿಸುವ ಕೋಣೆಯಿದ್ದಿತು. ಕತ್ತಲೆ ಕೋಣೆಯ ಗೋಡೆ ಹಾಗೂ ನೇಣಿನ ಕೋಣೆಯ ಬಾಗಿಲು ಇವುಗಳ ನಡುವೆ ಕೇವಲ ಹತ್ತು ಅಡಿಗಳ ಅಂತರ ವಿದ್ದಿತು. ನಾವು ಅನೇಕ ಸಲ ಕತ್ತಲೆ ಕೋಣೆಯಲ್ಲಿದ್ದೆವು. ಆಗ ಅನೇಕರನ್ನು ಗಲ್ಲಿಗೇರಿಸಿದ್ದನ್ನು ನಾನು ಕಂಡಿದ್ದೇನೆ. ರಾಮರಾಮ ಎನ್ನುತ್ತ ಬರುವ ಆ ವ್ಯಕ್ತಿಯು ಬಾಗಿಲ ತೆರೆದ ಕೂಡಲೆ ಒಳಹೋಗುತ್ತಿದ್ದ. ಮುಂದೆ ಕ್ಷಣಾರ್ಧದಲ್ಲಿ ಕಟ್ ಎಂಬ ಸದ್ದು. ನಂತರ ಎಲ್ಲವೂ ನೀರವ. ಹೀಗಿತ್ತು ಆ ಕ್ರಮ.

ಆ ಎಲ್ಲ ದೃಶ್ಯ ಕಣ್ಣ ಮುಂದೆ ಹಾಯ್ದು ಹೋಯಿತು. ಕೇವಲ 'ಕಟ್' ಎನ್ನುವುದೊಂದೇ ಉಳಿದಿದೆ ಎಂದು ಖಂಡಿತವಾಗಿತ್ತು. ಜೀವನ ಯಾತ್ರೆ ಮುಗಿಯಿತು. ಸುಖ ದುಃಖದ ಯಾವ ಅನುಭವವೂ ಉಂಟಾಗಲಿಲ್ಲ. ಉರುಲು ಬಿಗಿಯಾಗಹತ್ತಿತು, ಪ್ರಜ್ಞೆ ಹೋಗ

ಪತ್ತಿತು. ಅಷ್ಟರಲ್ಲಿ ಲೇಖದ ಪ್ರಾರಂಭದಲ್ಲಿ ಹೇಳಿದ 'ಇದು ನಿನ್ನ ಮೃತ್ಯುವಲ್ಲ; ಹೀಗಿಲ್ಲ ನಿನ್ನ ಮರಣ' ಎಂದು ಯಾರೋ ನನ್ನ ಕಿವಿಯಲ್ಲಿ ಗುಣಗುಣಿಸಿದಂತಾಯಿತು. ಸ್ಟಂಪ್ ಬಿದ್ದ ನಂತರ ಅಂಪೈರನು 'ನೋ ಬಾಲ್' ಎಂದು ಅರಚಿದರೇನು ಬಂತು? ಹೀಗೆಲ್ಲ ವಿಚಾರಗಳು ಬರುತ್ತಿರವಾಗಲೇ ಉರುಲು ಮತ್ತಿಷ್ಟು ಬಿಗಿಯಾಗುತ್ತಿತ್ತು.

ಆ ಕ್ಷಣಕ್ಕೆ ಪುನಃ ಅದೇ ಶಬ್ದಗಳ ಉಚ್ಚಾರ ನನ್ನ ಕಿವಿಯಲ್ಲಿ ಆಯಿತು. ನಾನೇನೋ ಧೇನಿಸುವಷ್ಟರಲ್ಲಿ ಕುತ್ತಿಗೆಯ ಉರುಲಿನ ಬಿಗುವೂ ಕಡಿಮೆಯಾಯಿತು. "ಗಾಡಿ ಠೇರ್ ರಹೀ ಹೈ" ಎಂದು ಅವರಲ್ಲೊಬ್ಬ ಉಚ್ಚರಿಸಿದ. ಇಬ್ಬರೂ ಉರುಲಿನ ಬಟ್ಟೆಯನ್ನು ಬಿಟ್ಟುಕೊಟ್ಟರು.

ನೇಣು ಸಡಿಲಾದ್ದರಿಂದ ಹೀಗೆ ಊಹಿಸಿದೆ. ಇನ್ನೊಂದು ಕ್ಷಣ ಗಾಡಿಯ ಬಾಗಿಲು ತೆರೆದ ಸದ್ದು. ಮರಣ ತೊಲಗಿತೆಂದು ಭಾವಿಸಿದೆ. ಆದರೂ ಚಲನವಲನ ಮಾಡಿದರೆ ಮತ್ತೇನು ಗಂಡಾಂತರವೊ ಎಂದು ಹಾಗೇ ಬಿದ್ದುಕೊಂಡೆ. ಶಕ್ತಿಸರ್ವಸ್ವವೂ ಕಿವಿಯಲ್ಲಿಯೇ ಕೇಂದ್ರೀಭೂತವಾಗಿತ್ತು. ಎದುರಿಗೆ ಬಂದಿದ್ದ ಮೃತ್ಯು ಹಿಂತಿರುಗಿದ್ದ; ವ್ಯಾಪಾರ ಹೊಂದದಿದ್ದ ಗಿರಾಕಿಯಂತೆ. ಗಾಡಿಯೆ ಮರಣವನ್ನು ನಿವಾರಿಸಿದಂತಿತ್ತು. ಈ ಅತಿಥಿ ಹೀಗೆ ಬಂದು, ಹೀಗೆ ಹೋದದ್ದೇಕೆ ಎಂಬುದೂ ಒಂದು ರಹಸ್ಯವಾಗಿತ್ತು. ಬಾಗಿಲು ಮುಚ್ಚಿದ ಸದ್ದು. ಕೇಳಿ ಬಿದ್ದಲ್ಲಿಂದಲೇ ಕತ್ತು ಹೊರಳಿಸಿ ನೋಡಿದೆ. ಯಾರೂ ಡಬ್ಬಿಯಲ್ಲಿರಲಿಲ್ಲ. ನಂತರ ದನದಂತೆ ನಾನು ಗಾಡಿಗೆ ಮೂತಿಯನ್ನು ತಿಕ್ಕಿದೆ. ಮೋರೆಗೆ ಕಟ್ಟಿದ್ದ ಶರ್ಟನ್ನು ಸರಿಸಿದೆ. ಬೆನ್ನಹಿಂದೆ ಕಟ್ಟಿದ್ದ ಕೈಗಳನ್ನು ಬಿಡಿಸಿಕೊಂಡು ಎದ್ದುನಿಂತೆ. ಹಾಸಿಗೆಯೆಲ್ಲ ಕೆಟ್ಟುಹೋಗಿತ್ತು. ಬಟ್ಟೆ, ಕಾಗದಗಳು ಅತ್ತಿತ್ತ ಬಿದ್ದಿದ್ದವು. ಗಂಡಾಂತರ ದೂರವಾಗಿದ್ದರೂ ಗಂಡಾಂತರದ ಸರಪಳಿಯನ್ನೆಳೆದೆ. ಗಾಡಿ ತಕ್ಷಣ ನಿಂತಿತು.

ನನ್ನ ರಕ್ಷಣೆಗಾಗಿದ್ದ ಅಧಿಕಾರಿಗಳೂ ಪೊಲೀಸರೂ ಧಾವಿಸಿ ನನ್ನ ಡಬ್ಬಿಯ ಹತ್ತಿರ ಬಂದು, ಕಳ್ಳರನ್ನು ಶೋಧಿಸುವುದರ ಬದಲು, ತಮ್ಮ ನೌಕರಿಗೆ ಗಂಡಾಂತರ ಉಂಟಾದ ಬಗ್ಗೆ ಚಿಂತಿಸತೊಡಗಿದರು. ಕಳ್ಳರು ಗಾಡಿಯಲ್ಲಿ ಅಥವಾ ಅದರ ಬುಡದಲ್ಲಿ ಅಡಗಿಕೊಂಡಿರಬಹುದೇನೊ ಎಂದು ಗಾರ್ಡನು ಶೋಧ ನಡೆಸಿದ ಆದರೆ ಯಾರೂ ಸಿಗಲಿಲ್ಲ. ಗಾಡಿ ಪುನಃ ಹೊರಟಿತು. ಕರ್ಡುವಾಡಿ ಬರುವ ವರೆಗೆ ಡಬ್ಬಿಯಲ್ಲಿಯ ಪೊಲೀಸ್ ಅಧಿಕಾರಿಗಳು ಈ ದುರ್ಘಟನೆ ಹೇಗೆ ಸಂಭವಿಸಿತೆಂಬ ಬಗ್ಗೆಯೇ ವಿಚಾರ ನಡೆಸಿದ್ದರು. ಎರಡು ರೂಪಾಯಿ ಕೂಡ ಇಲ್ಲದಿದ್ದ ಹಣದ ಪಾಕೀಟು, ಸಾಹಿತ್ಯ ಹಾಗೂ ರಾಜ್ಯ ಕಾರಭಾರದಲ್ಲಿ ಸೇವೆ ಸಲ್ಲಿಸಲು ಸಹಾಯಕವಾಗಿದ್ದ ಫೌಂಟನ್ ಪೆನ್ ಕಾಣೆಯಾಗಿದ್ದವು. ದಿಂಬಿನ ಕೆಳಗಿದ್ದ ಕೈಗಡಿಯಾರವೂ ಇಲ್ಲದಾಗಿತ್ತು. ಎಂಥ ಪ್ರಸಂಗದಿಂದ ನಾನು ಪಾರಾದೆನೆಂಬುದರ ಕಲ್ಪನೆಯು ಕ್ರಮೇಣ ಸಂಪೂರ್ಣವಾಗಿ ಉಂಟಾಗಹತ್ತಿತು. ಬಲಗಡೆಯ ಕಿಟಕಿಯಲ್ಲಿ ಉದಯೋನ್ಮುಖದ ಸೂರ್ಯಬಿಂಬ ಕಾಣುತ್ತಿತ್ತು.

ದೇಹದ ಮೇಲಿನ ಗಾಯಗಳ ನೋವಿಗಿಂತ ಮನಸ್ಸಿಗಾದ ನೋವೇನೂ ಕಡಿಮೆಯಾಗಿರಲಿಲ್ಲ. ನಡೆದ ಘಟನೆಯ ವಾರ್ತೆ ಕುರ್ಡುವಾಡಿ ನಿಲ್ದಾಣಕ್ಕೆ ಮೊದಲೆ ಬಂದು ಮುಟ್ಟಿತ್ತು. ಡಾಕ್ಟರ್ ಹಾಗೂ ಮತ್ತೊಬ್ಬನು ಡಬ್ಬಿಯಲ್ಲಿ ಬಂದರು. ಪ್ರಕರಣವನ್ನು ಉಪ್ಪುಕಾರ ಹಚ್ಚಿ ಹೀಗೆ ಸಿದ್ಧಪಡಿಸಬೇಕೆಂಬುದನ್ನು ಆತ ಹೇಳಿದ. ಆ. ಪ್ರಸಂಗದಲ್ಲಿಯೂ ಆತನ ವಿನೋದದಿಂದ ನನಗೆ ತಾನಾಗಿಯೆ ನಗು ಬಂದಿತು. ಯಾರೋ ಚಹವನ್ನು ತಂದಿತ್ತರು. ಸೇವೆಗೆ ಅವಕಾಶ ದೊರೆತದ್ದಕ್ಕಾಗಿ ಎಲ್ಲರೂ ತಾವು ಧನ್ಯರಾದಂತೆ ಭಾವಿಸಿದರು. ಅದಕ್ಕಿಂತಲೂ ಹೆಚ್ಚಿನ ಕೊನೆಯ ಸೇವೆ ಸಲ್ಲಿಸಲು ನನ್ನ ದುರ್ದೈವವು ಅವರಿಗೆ ಅವಕಾಶವೊದಗಿಸಲಿಲ್ಲವೆಂದು ಕ್ಷಣಕಾಲ ದುಃಖವಾಯಿತು. "ಇದೊಂದು ರಾಜಕಾರಣದ ಸ್ಟಂಟ್" ಎಂದು ಯಾರೋ ಅಂದರು. "ಇದು ನಿಮ್ಮ ರಾಜಕೀಯ ಶತ್ರುಗಳ ಕೆಲಸವಲ್ಲವೆ?" ಎಂದು ಆರೋಪಿ ಪರ ವಕೀಲನು ಪ್ರಶ್ನೆ ಕೇಳಿಯೇ ಬಿಟ್ಟನು. "ನನ್ನ ರಾಜಕೀಯ ಶತ್ರುಗಳು ಹಾಗೂ ವಿರೋಧಿಕರು ಸಭ್ಯರಾಗಿದ್ದಾರೆಂದು" ನಾನು ಉತ್ತರಿಸಿದೆ. ಕಳ್ಳ ಸಿಕ್ಕು ಶಿಕ್ಷಿಸಲ್ಪಟ್ಟ ಎಂಬುದಕ್ಕಿಂತ ಸ್ನೇಹ ಪತ್ರೀಕವಾಗಿ ದೊರೆತಿದ್ದ ಕೈಗಡಿಯಾರವು

ಪುನಃ ನನ್ನ ಕೈಗೆ ಬರುವುದೆಂಬ ಸಂತೋಷವೇ ಮಿಗಿಲಾಗಿದ್ದಿತು. ಅದಕ್ಕೆ ನಾನು ಎಷ್ಟೊಂದು ಬೆಲೆ ತೆತ್ತಿದ್ದೆ!.

ಹೋಗಿ ಹಿಂತಿರುಗಲಾಗದ ಮತ್ತು ಅಲ್ಲಿಯ ಅನುಭವವನ್ನು ನಿವೇದಿಸಲಾಗದ ಮೃತ್ಯುವಿನ ಆಚೆಯ ಪ್ರಾಂತದಲ್ಲಿ ನಾನೊಂದು ಹೆಜ್ಜೆಯನ್ನಿಟ್ಟು ದೃಷ್ಟಿಕ್ಷೇಪ ಮಾಡಿ ಬಂದಿದ್ದೆ. ಶ್ರವಣ ಶಕ್ತಿ ಉತ್ತಮವಾಗಿತ್ತು- ಮೃತ್ಯುವಿನ ಗತಿಯನ್ನು, ಹೆಜ್ಜೆಯನ್ನು ನಾನು ಆಲಿಸಿದ್ದೆ; ತೆರೆದ ಕಣ್ಣಿನಿಂದ ನೋಡಿದ್ದೆ. ನಂತರ ತಿಲ ಮಾತ್ರ ಅಂಶ ನನ್ನಲ್ಲಿಲ್ಲದಿದ್ದರೂ 'ನನ್ನ ಮರಣ ನಾನು ಕಣ್ಣಿಂದಲೆ ಕಂಡೆ', ಎಂದೇ ಆ ಸಂಭ್ರಮದ ವರ್ಣನೆ ಮಾಡಿದ್ದೇನೆ.

ಸೆಶನ್ಸ್ ಕೋರ್ಟಿನಲ್ಲಿ ಪಂಚರೆದುರು ನಾನು ನನ್ನ ಹೇಳಿಕೆಯನ್ನಿತ್ತ ಮರುಕ್ಷಣದಲ್ಲಿಯೇ ಹಂಚ ಪ್ರಮುಖನು ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿದ್ದ. ಎಲ್ಲ ವಿಲಕ್ಷಣ!

ಈ ಘಟನೆಯ ನಂತರ ಅನೇಕ ಸ್ನೇಹಿತರು ನನಗೆ ಪತ್ರ ಬರೆದರು. ಈ ಪ್ರಸಂಗದ ವರ್ಣನೆ ಮಾಡಬೇಕೆಂದು ಕೆಲವರು ಸೂಚಿಸಿದರು. "ಇದು ನಿನ್ನ ಮರಣವಲ್ಲ; ಹೀಗಿಲ್ಲ ನಿನ್ನ ಮರಣ" ಎಂಬ ಶಬ್ದಗಳನ್ನು ಪ್ರತ್ಯಕ್ಷ ಕೇಳಿದ ಅನುಭವದ ಕುರಿತು ತತ್ತ್ವಜ್ಞಾನಿಗಳೊಂದಿಗೆ ಚರ್ಚಿಸಿದೆ. ಇದು ಕೇವಲ ಮನಸ್ಸಿನ ಹಳವಂಡವೆಂದು ಕೆಲವರು ಹೇಳಿದರೆ, ಇನ್ನು ಕೆಲವರು ಅಪೌರುಷೇಯ ಶಕ್ತಿಯಿದೆಂದು ಹೇಳಿದರು. ಆದರೆ ನನ್ನ ಶ್ರದ್ಧೆಯ ಮೇಲೆ ಇದರಿಂದಾಗಿರುವ ಪರಿಣಾಮವನ್ನು ನಾನು ರಹಸ್ಯವೆಂದೇ ಕಾಪಾಡಿಕೊಂಡು ಬಂದಿದ್ದೇನೆ. ಆದರೆ ಮರಣವನ್ನು ಸಂದರ್ಶಿಸುವ ಸಂಭ್ರಮವು ಅಶಕ್ಯಪ್ರಾಯವಾಗಿರುವುದರಿಂದ ವಾಚಕರಿಗೆ ವಿಶ್ವಾಸದಿಂದ, ಆತ್ಮೀಯತೆಯಿಂದ ನಿವೇದಿಸಿದ್ದೇನೆ. ನೋಡಿದ ಮರಣದ ಮೃತ್ಯು ಲೇಖವನ್ನು ಸಂಪಾದಕನ ಬದಲು ನಾನೇ ಬರೆದಿದ್ದೇನೆ! ●

('ಅನಗಡ ಮೋತಿ'ಯಿಂದ)

# ಬಡತನ

'ಬಡತನದ ಬಾಳು' ಎಂದರೆ ಮೈಗೆ ಮುಳ್ಳು ಬರುವವು. ಕುಷ್ಠರೋಗಿಯನ್ನು ಮುಟ್ಟಿಸಿಕೊಳ್ಳದಂತೆ, ಬಡತನದ ಸ್ಪರ್ಶವೂ ತಮಗಾಗಬಾರದೆಂದು ಎಲ್ಲರೂ ಯತ್ನಿಸುವರು. ಆದರೆ 'ಬಡತನವೆಂಬುದು ಕಡೆತನಕಿರಲಿ' ಎಂದು ಹಾಡಿಕೊಂಡ ದಾಸರುಂಟು. ಇದು ದಾಸರ ಮಾತು ಎಂದು ನಾವು ಮರೆಯಬಾರದು. 'ಎಲ್ಲರಿಗೂ ಬಡತನ ಬಡಿದುಕೊಳ್ಳಲಿ ದೇವಾ' ಎಂದು ಅವರು ಹಾಡಿಲ್ಲ. 'ಸೂಜಿಯ ಕಣ್ಣೊಳಗಿಂದ ಒಂಟೆಯು ಹಾಯ್ದು ಹೋಗಬಹುದು; ಆದರೆ ಸ್ವರ್ಗದ ಹೆಬ್ಬಾಗಿಲೊಳಗಿಂದ ಸಿರಿವಂತನು ಹಾಯ್ದು ಹೋಗಲಾರನು ಎಂದುಸುರಿದ ಮಾತಿನಲ್ಲಿ ಮೂಡಿದ್ದು ಬಡತನದ ಮೇಲುತನವಲ್ಲ; ಸಿರಿವಂತಿಕೆಯ ಕೀಳುತನ. ಬೇರೆ ಮನೆಗಳು ಹಾಳು ಆಗದಂತೆ, ಒಂದು ಮನೆಯ ಅಂತಸ್ತು ಏರುವುದು. ಹೀಗೆ ಉಳ್ಳವರಾಗುವುದಕ್ಕಿಂತ ಇಲ್ಲದವರಾಗುವುದು ಲೇಸು ಎಂಬುದು ತಾರತಮ್ಯದ ಮಾತು. 'ಬಡತನ'ವು ನನಗಿರಲಿ. ಬಹಳ ಮಕ್ಕಳಿರಲಿ. ಮೇಲೆ ಗುರುವಿನ ದಯವಿರಲಿ' ಎಂಬ ಕರುಣ ಗೀತ ದಲ್ಲಿ ಗುರುವಿನ ದಯವಿಲ್ಲದಿದ್ದರೆ ಬಡತನವು ದಕ್ಕುವುದಿಲ್ಲವೆಂದೇ ಸೂಚಿತವಾಗಿದೆ. ಇಷ್ಟೇಕೆ, ಬಡತನವೇ ದಿವ್ಯವೆಂದು ಹೇಳುವುದಿದ್ದರೆ ವಿಷ್ಣುವಿನ ಹೆಂಡತಿಯು 'ಇದಿ'ಯಾಗಿರಬೇಕಾಗುತ್ತಿತ್ತು, ಲಕ್ಷ್ಮಿಯಲ್ಲ.

ಬಡತನವು ಅವರವರ ಪಾಪದ ಫಲವೆಂಬ ಗ್ರಹಿಕೆ ಒಂದು ಗ್ರಹಿಕೆಯಾಗಿಬಿಟ್ಟಿದ್ದರಿಂದಲೇ ಇದುವರೆಗೆ ಯಾರೂ ಅದನ್ನು ನಿರ್ನಾಮವಾಗಿ ಮಾಡಲು ಪ್ರಯತ್ನಪಟ್ಟಿಲ್ಲ. ಒಂದು ಸಮಾಜದಲ್ಲಿ ಬಡವರಿರುವುದು ಆ ಸಮಾಜಕ್ಕೆ ಒಂದು ಕೊರತೆ. ಬಡತನವು ಸಾಂಕ್ರಾಮಿಕ ರೋಗ. ಆದರೆ ಪ್ಲೇಗುಗೀಗುಗಳಂತಲ್ಲ. ಪ್ಲೇಗಿನ ಸಂಪರ್ಕದಿಂದ ಪ್ಲೇಗೇ ಬರುವುದಲ್ಲದೇ

# ಸಾಹಿತ್ಯದ ಸಾರ್ವಭೌಮ ವಸ್ತು ಯಾಕೆ?

ಡಾ. ದ.ರಾ. ಬೇಂದ್ರೆ
('ಸಾಹಿತ್ಯದ ವಿರಾಟ್ ಸ್ವರೂಪ')

ಸಂಗ್ರಹ: 'ಸರ್ವಜಿತು'

ಕಾಲರಾ ಬರಲಾರದು. ಆದರೆ ಬಡತನವು ಒಂದು ವಿಚಿತ್ರ ರೋಗ. ಬಡವರು ದೀನರಾದಂತೆ ಬಲ್ಲಿದರಲ್ಲಿ ಸೊಕ್ಕು ಹೆಚ್ಚು. ಅವರು ದಿಟ್ಟರಾದರೆ, ಇವರಿಗೆ ಹೆದರಿಕೆ. ಅವರು ಹಕ್ಕಿನ ತಿರುಕರಾದರೆ, ಇವರು ಶಾಸ್ತ್ರದ ಧಾರ್ಮಿಕರು. ಅವರು ನಿರು ಪದ್ರವಿಗಳಾದ ಕೂಲಿಕಾರರಾದರೆ, ಇವರು ಜಂಬದ ಪರೋಪಕಾರಿಗಳು. ಅಂತೂ ಅವರಿಗೊಂದು ವಿಕಾರ. ಇವರಿಗೊಂದು ವಿಕಾರ. ಒಂದು ಗುಣವಾಗದೆ ಇನ್ನೊಂದು ಗುಣವಾಗದು. ಬಡತನವು ಸಾಮಾಜಿಕ ಪಾಪವೆಂದು ತಿಳಿಯದ ಹೊರತು, ಮನುಷ್ಯನಿಗೆ ಗತಿಯಿಲ್ಲ. ಬಡತನವು ಅವರವರ ಪಾಪದ ಫಲವೆಂಬುದು ತ್ರೇತಾಯುಗದಲ್ಲಿರಬಹುದು. ಈ ಯುಗದಲ್ಲಿ ಅಲ್ಲ. ಭೂಮಿತಾಯಿಯು ಬಡವಿಯಲ್ಲ; ಅವಳು ಕಾಳಿನ ಕಣಜ, ಹಣದ ಕಣ. ಅವಳ ಮಕ್ಕಳಿಗೆ ಬಡತನವೆಂದರೇನು?

ಮೈಗಳ್ಳತನದಿಂದಲೇ ಬಡತನವು ಎಂಬ ಮಾತಿನಲ್ಲಿ ಸತ್ಯಕ್ಕಿಂತ ಸುಳ್ಳೇ ಹೆಚ್ಚಾಗಿದೆ. ಬಡವರಷ್ಟು ದುಡಿಯುವವರನ್ನು ಎಲ್ಲಿಯೂ ಕಾಣಲಾರೆವು. 'ಬಲ್ಲವರೆ ಬಲ್ಲಿದರಾಗುವರು. ಬರಿ ಕೋಣನಂತೆ ದುಡಿದರೇನು?' ಎಂದೂ ಕೇಳಬಹುದು. ಸರಿ. ಇಲ್ಲಿ ಬಲ್ಲವರೆಂದರೆ, ದುಡ್ಡು ಸೆಳೆದುಕೊಳ್ಳಲು ಬಲ್ಲವರು ಎಂದು ಅರ್ಥ ಮಾಡಿದರೆ ಸರಿ ಹೋಗುವುದು. ಬಲ್ಲವರು ಎಂದರೆ ತಿಳುವಳಿಕೆಯನ್ನು ಹರಡಬಲ್ಲವರು. ಗಂಟು ಕಟ್ಟಬಲ್ಲವರಲ್ಲ. ಇವರು ತಮ್ಮ ಬೇಳೆ ಬೇಯಿಸಿಕೊಳ್ಳಬಲ್ಲವರು. ಏನೇ ಇರಲಿ ಬಡತನವು ಸಾಮೂಹಿಕ ಪಾಪವೆಂಬ ತಿಳುವಳಿಕೆಯು ಬೇರೂರಿ ಬೆಳೆದು ಬಲಿತು ಇಂದು ಬಡತನವನ್ನು ಬೇರು ಸಹಿತ ಕಿತ್ತೊಗೆಯಲು ನಿಂತಿದೆ. ಈ ತಿಳುವಳಿಕೆಗೆ ಸಮಾಜಸತ್ತಾವಾದ (Socialism) ಸಂಘವಾದ (Trade Unionism) ರಾಷ್ಟ್ರವಾದ, ಸ್ವಾತಂತ್ರ್ಯವಾದ, ಇತ್ಯಾದಿ ಹೆಸರು. ರೂಪದಂತೆ ನಾಮ ಬೇಡಾದದ್ದು ಬೇತಾಳವೆಂಬಂತೆ. ಒಮ್ಮೊಮ್ಮೆ ಅದಕ್ಕೆ 'ಬೊಲೆವಿಜಮ್' ಎಂದೂ ಎನ್ನುವರು. ರೂಪವೇನೇ ಇರಲಿ, ಅದರ ನಾಮವೇನೇ ಇರಲಿ. ಬಡತನವನ್ನು ಭೂಮಿಯಿಂದ ಕಿತ್ತೊಗೆಯುವುದು ಇನ್ನೊಮ್ಮೆ ಮೊಳೆಯದಂತೆ, ಎಲ್ಲಿಯೂ ಮೊಳೆಯದಂತೆ ಕಿತ್ತೊಗೆಯುವುದು ಅದರ ಸ್ವರೂಪ. ಇದೊಂದು ರುದ್ರಲೀಲೆ.

ಬಡತನ, ಅಲ್ಪಾಯುಷ್ಯ, ಅಜ್ಞಾನ ಇವು ಸಾಮಾಜಿಕ ಪಾಪಗಳು. ಅಜ್ಞಾನವು ಎಲ್ಲ ಪಾಪಗಳ ಬೀಜವೆಂದು ಹೇಳುವರು. ಆದರೆ ಬಡತನದ ಹೊಟ್ಟೆಯಲ್ಲಿ ಎಲ್ಲವೂ ಬರುವುದು. ಬಡತನವನ್ನು ಭೂಮಿಯಲ್ಲಿ ನಿಲ್ಲಿಸಿಕೊಟ್ಟದ್ದೇ ಜ್ಞಾನದ ಕೊರತೆ. ದಾನ, ಧರ್ಮದಿಂದ ಸರಿಪಡಿಸಿಕೊಳ್ಳಲು ಬಡತನವು ತಿರುಕರ ಜೋಳಿಗೆಯಲ್ಲ; ಅದು ರುದ್ರನೊಡ್ಡಿದ ಕೈ. ಇಲ್ಲಿ ಬಡತನವಿರುವುದರಿಂದಲೇ ಭೂಮಿಯ ಸೀಮೆಯನ್ನು ದಾಟಿ ಕೈಲಾಸವನ್ನು ಕಟ್ಟಬೇಕಾಯಿತು. ವ್ಯಕ್ತಿಯ ಧರ್ಮ ಸಾಧನಗಳಲ್ಲಿ ಶರೀರವೇ ಮೊದಲನೆಯದು. ಮಾನವ ಸಮಾಜದ ಧರ್ಮ ಸಾಧನಗಳಲ್ಲಿ ಬಡತನವನ್ನು ಕಳೆಯುವುದೇ ಮೊದಲು. ಆದರೆ ಮಾನವನು ಬಹುರೂಪನಾಗಿದ್ದರಿಂದ ಮಗುವಿನ ಸ್ವರೂಪವು ಹೊಳೆಯದಾಗಿದೆ. ಅವನ ಏಕರೂಪವು ಹೊಳೆದರೆ ಒಬ್ಬನ ದೋಷವು ಎಲ್ಲದರೊಳಗಿನ ಕೊರತೆ ಎಂಬುದು ಸ್ಪಷ್ಟವಾಗಬಹುದು. ಈ ಜ್ಞಾನದ ಉದಯವೇ ಆ ಕಾರ್ಯದ ಆರಂಭ. ಅಂತೆಯೇ ಬಡತನವನ್ನು ನಿರ್ಬೀಜವನ್ನಾಗಿ ಹೇಗೆ ಮಾಡುವುದೆಂಬುದೇ ಇಂದಿನ ವೇದಾಂತಿಗಳ ಒಗಟು; ರಾಜಕಾರಣಿಗಳ ಗುರಿ; ದುಡ್ಡುಳ್ಳವರ ಸಮಸ್ಯೆ; ಬಡವರ ಬಡಿದಾಟ. ಆದಕಾರಣ, ಅದು ಸಾಹಿತ್ಯದ ಸಾರ್ವಭೌಮ ವಸ್ತು. ●




# ಬಿಲ್ವಪತ್ರಿಯಿಂದ ಕ್ಯಾನ್ಸರಿನ ನಿವಾರಣೆ ಸಾಧ್ಯವೇ ?

ಹಿಂದೆ ಮುಂಬಯಿ ವಿಶ್ವವಿದ್ಯಾಲಯದ ವೈದ್ಯಕೀಯ ವಿಭಾಗದ ಡೀನರೂ ಈಗ ವೈದ್ಯಕೀಯ ವೃತ್ತಿಯಲ್ಲಿ ನಿರತರಾದವರೂ ಆದ ಡಾ. ಬಿ.ಜೆ. ವಾದ್‌ರವರು ಟಾಟಾ ಮೂಲಭೂತ ಸಂಶೋಧನ ಕೇಂದ್ರದ ಡಾ. ಧರ್ಮಟ್ಟಿಯವರೊಡನೆ ಸಸ್ಯ, ನೀರು ಹಾಗೂ ವಾತಾವರಣದಲ್ಲಿನ ವಿಕಿರಣದ ಪ್ರಮಾಣದ ಬಗೆಗೆ ನಡೆಸಿದ ಸಂಶೋಧನೆಯ ಕುರಿತು ಚರ್ಚಿಸುತ್ತಿದ್ದಾಗ ತಮ್ಮ ಕಿಸೆಯಲ್ಲಿ ಬಿಲ್ವಪತ್ರಿಯ ಕಾಯಿಗಳಿದ್ದುದು ಅಕಸ್ಮಾತ್ತಾಗಿ ಲಕ್ಷ್ಯಕ್ಕೆ ಬಂತು. ಕೂಡಲೆ ಅವರು ಆ ಕಾಯಿಗಳನ್ನು ಧರ್ಮಟ್ಟಿಯವರಿಗೆ ಕೊಟ್ಟು, ಇವು ವಿಕಿರಣಶೀಲವಾಗಿವೆಯೋ ಹೇಗೆ ಎಂಬುದನ್ನು ಪರೀಕ್ಷಿಸಬೇಕೆಂದು ಹೇಳಿದರು. ಒಂದು ವಾರದಲ್ಲಿಯೇ ಉತ್ತರ ಬಂತು. ಅವೆಲ್ಲವುಗಳಲ್ಲಿಯೂ ವಿಕಿರಣಶೀಲವಾದ ಪೊಟ್ಯಾಸಿಯಂ ಇತ್ತು. ಹೀಗೆ ಆಕಸ್ಮಿಕವಾಗಿ ಹೊರಬಿದ್ದ ಸಂಗತಿಯೇ ಮುಂದೆ ಅನೇಕ ಪ್ರಯೋಗಗಳಿಗೆ ಕಾರಣವಾಗಿ ಬಿಲ್ವಪತ್ರಿಗೆ ಕ್ಯಾನ್ಸರನ್ನು ಗುಣಪಡಿಸುವ ಶಕ್ತಿಯಿದೆಯೆಂಬುದು ದೃಢಪಟ್ಟಿತು.

ಹಿಮಾಲಯದ ಕೆಳಗಿನ ಸ್ತರದಿಂದ ಪ್ರಾರಂಭವಾಗಿ ಸಮುದ್ರ ಮಟ್ಟದಿಂದ 3500 ಅಡಿಗಳಷ್ಟು ಎತ್ತರದವರೆಗಿನ ಪ್ರದೇಶದಲ್ಲಿ ಬೆಳೆಯುವ ಈ ಸಸ್ಯ ಮೂಲತಃ ಆಸ್ಟ್ರೇಲಿಯದ ಉತ್ತರ ಭಾಗ ಹಾಗೂ ಈಸ್ಟ್ ಇಂಡಿಯನ್ ದ್ವೀಪಗಳಿಂದ ಬಂದದ್ದು. ಬಿಲ್ವಪತ್ರಿಯ ಕಾಯಿಯ ಔಷಧಿಯ ಗುಣಗಳ ವಿಸ್ತೃತ ವಿವರಣೆ ಆಯುರ್ವೇದದಲ್ಲಿದೆ. ಇದನ್ನು ಬಲವರ್ಧಕವಾಗಿಯೂ, ಆಹಾರಪದಾರ್ಥಗಳಿಗೆ ಸುವಾಸನೆಯನ್ನು ಕೊಡಲೂ ಉಪಯೋಗಿಸುವುದುಂಟು.

ಕ್ಯಾನ್ಸರಿನ ಚಿಕಿತ್ಸೆಯಲ್ಲಿ ಇದು ಪ್ರಯೋಜನಕರವಾಗಿದೆಯೆಂಬುದನ್ನು ಡಾ. ವಾದ್‌ರವರ ಪ್ರಯೋಗಗಳು ತೋರಿಸಿಕೊಟ್ಟ ನಂತರ, ಆದರಿಂದ ಸಹಜವಾಗಿಯೇ ಕುತೂಹಲಗೊಂಡ ಡಾ. ಕೆ.ಜೆ. ರಣದಿವೆ (ನಿರ್ದೇಶಕರು, ಭಾರತೀಯ ಕ್ಯಾನ್ಸರ್ ಸಂಶೋಧನ ಕೇಂದ್ರ,

# 'ಸಾಧ್ಯ' ಎನ್ನುತ್ತಾರೆ ಆಯುರ್ವೇದ ಪಂಡಿತರು

ಮುಂಬಯಿ)ಯವರು ಬಿಲ್ವಪತ್ರಿಯ ಸಾಂದ್ರಗೊಳಿಸಿದ ತೈಲವನ್ನು ಪ್ರಯೋಗಾಲಯದ ಇಲಿಗಳಿಗೆ ಕೊಟ್ಟು ನೋಡಿದರು. ಆಗ ಆ ತೈಲಕ್ಕೆ ಕ್ಯಾನ್ಸರನ್ನು ನಿವಾರಿಸುವ ಶಕ್ತಿಯಿರುವುದು ಸಿದ್ಧವಾಯಿತು. ಕ್ಯಾನ್ಸರ್ ಇದ್ದ ಇಲಿಗಳನ್ನು ಆ ಪ್ರಯೋಗಕ್ಕೆಂದು ಆಯ್ದುಕೊಳ್ಳಲಾಗಿತ್ತು. ತೈಲವನ್ನು ಊಡಿಸದ ಇಲಿಗಳು ಎರಡು ವಾರಗಳಲ್ಲಿ ಸತ್ತು ಹೋದರೆ, ಊಡಿಸಿದವುಗಳು ಮುಂದೆ ಸುಮಾರು ಒಂದೂವರೆ ವರ್ಷದವರೆಗೆ ಬದುಕಿದ್ದವು. ಅಲ್ಲದೆ, ಅವು ಸತ್ತ ನಂತರ ಛೇದಿಸಿ ನೋಡಿದಾಗ ಕ್ಯಾನ್ಸರಿನ ಲವಲೇಶವೂ ಕಂಡುಬರಲಿಲ್ಲ.

ಮುಂದೆ ಡಾ. ವಾದ್‌ರವರು ಒಂದು ಬಿಲ್ವಪತ್ರಕಾಯಿಗೆ ಇನ್ನೂರು ಬಿಲ್ವಪತ್ರ ಬೀಜಗಳ ಪ್ರಮಾಣದಲ್ಲಿ ಔಷಧಿಯನ್ನು (ಅನಾಕಾರ್ಡಿಯಂ ಫೋರ್ಟೆ) ತಯಾರಿಸಿ, ಕ್ಯಾನ್ಸರ್ ರೋಗಿಗಳಿಗೆ ಇದು ಉಪಶಮನವನ್ನು ನೀಡುವುದೆಂದೂ, ಅವರ ಆರೋಗ್ಯವನ್ನು ಸುಧಾರಿಸಿ ಆಯುಷ್ಯವನ್ನು ವೃದ್ಧಿಸುವುದೆಂದೂ ಅವಾಂಛಿತ ಪರಿಣಾಮಗಳಿಗೆ ಎಡೆಮಾಡಿಕೊಡುವುದಿಲ್ಲವೆಂಬುದನ್ನೂ ಕಳೆದ ಹದಿನೈದು ವರ್ಷಗಳ ವರೆಗೆ ನಡೆಸಿದ ಪ್ರಯೋಗಗಳು ದೃಢ ಪಡಿಸಿವೆಯೆಂದೂ ಸಾರಿದರು.

ರೋಗಿ ವಿಕಿರಣ ನಿದಾನವನ್ನು ತಡೆದುಕೊಳ್ಳಲಾರದಷ್ಟು ಅಶಕ್ತನಾದಾಗ ಅಥವಾ ಶಸ್ತ್ರಕ್ರಿಯೆಗೆ ಒಳಪಡುವ ಸ್ಥಿತಿಯಲ್ಲಿಲ್ಲದಾಗ, ಅಷ್ಟೇ ಅಲ್ಲ, ರೋಗ ಮುಂದುವರಿದ ಅವಸ್ಥೆಯಲ್ಲಿದ್ದಾಗಲೂ ಈ ಔಷಧವನ್ನು ಪ್ರಯೋಗಿಸಲಾಗಿದೆ. ಕ್ಯಾನ್ಸರ್ ನಿದಾನ ಕೇಂದ್ರಗಳಿಗೆ ಉಪಚಾರವನ್ನರಸಿ ಬರುವವರ ಸಂಖ್ಯೆ ಬಹಳ. ಹೀಗಾಗಿ ರೋಗವನ್ನು ಪರಿಶೀಲಿಸಿ, ಅದು ಬಂದಿದ್ದೇ ಆದರೆ ರೋಗಿಯನ್ನು ಆಸ್ಪತ್ರೆಗೆ ಸೇರಿಸಿಕೊಳ್ಳಲು ಒಂದೆರಡು ತಿಂಗಳುಗಳೇ ಹಿಡಿಯುತ್ತವೆ. ಈ ಮಧ್ಯಂತರದ ಅವಧಿಯಲ್ಲಿ ಕ್ಯಾನ್ಸರ್‌ಗ್ರಸ್ತರಿಗೆ ಅನಾಕಾರ್ಡಿಯಂ ಫೋರ್ಟೆಯನ್ನು ವಿಧಿಸಲಾಯಿತು.

ಶರೀರದ ಬೇರೆ ಬೇರೆ ಭಾಗಗಳಿಗೆ ಕ್ಯಾನ್ಸರ್ ತಗಲಿಕೊಂಡ ಇಂಥ 150 ಜನರನ್ನು ಆಯ್ದುಕೊಂಡು ದಿನಕ್ಕೆ ಇಪ್ಪತ್ತರಿಂದ ನಲ್ವತ್ತು ಗ್ರಾಮ್‌ಗಳಷ್ಟು ಈ ಔಷಧವನ್ನು ಕೊಟ್ಟಾಗ ಒಳ್ಳೆ ಪರಿಣಾಮ ಕಂಡುಬಂತು. ಈ ಎಲ್ಲ ಪ್ರಕರಣಗಳಲ್ಲಿಯೂ ನೋವು ಕಡಿಮೆಯಾಯಿತು. ರೋಗದ ಲಕ್ಷಣಗಳು ಕಾಣೆಯಾದವು. ಹೆಚ್ಚು ಶಕ್ತಿ ಬಂತು. ಕೆಲವು ಪ್ರಕರಣಗಳಲ್ಲಿ ಹಸಿವು ಹೆಚ್ಚಿ, ಶರೀರದ ತೂಕ ಹೆಚ್ಚಿತು. ಗಾಢವಾಗಿ ನಿದ್ದೆಯೂ ಬರತೊಡಗಿತು. ಹೀಗಾಗಿ ಅನೇಕರಿಗೆ ಮೊದಲಿನ ದೈನಂದಿನ ಜೀವನಕ್ಕೆ ಮರಳಲು ಸಾಧ್ಯವಾಯಿತು.

ರೋಗದಲ್ಲಿ ಎಷ್ಟರಮಟ್ಟಿಗೆ ಸುಧಾರಣೆಯಾಗುವುದೆಂಬುದು ರೋಗ ಎಷ್ಟು ತೀವ್ರವಾಗಿದೆ, ಎಷ್ಟು ಕಾಲದಿಂದ ಆತ ರೋಗಗ್ರಸ್ತನಾಗಿದ್ದಾನೆ ಹಾಗೂ ಆತ ಎಂತಹ ಪರಿಸರದಲ್ಲಿ ಜೀವಿಸುತ್ತಿದ್ದಾನೆ ಎನ್ನುವುದನ್ನು ಅವಲಂಬಿಸಿದೆ. ಒಂದೆರಡು ವಾರಗಳವರೆಗೆ ಮಾತ್ರ ಈ ಔಷಧವನ್ನು ಕೊಟ್ಟಾಗ ಯಾವ ಸುಧಾರಣೆಯೂ ಕಂಡುಬರಲಿಲ್ಲ. ಆದರೆ ಅವಾಂಛಿತವಾದ ಉಪಪರಿಣಾಮಗಳು ಈ ಒಬ್ಬರಲ್ಲಿಯೂ ಉಂಟಾಗಲಿಲ್ಲ.

ಇತ್ತೀಚೆಗೆ ಮುಂಬಯಿಯ ಕಂಪನಿಯೊಂದು ಡಾ|| ವಾದ್‌ರವರ ನಿರ್ದೇಶನದಂತೆ ರುಚಿಯಲ್ಲಿ ಹಣ್ಣಿನ ಜಾಮ್ ಅನ್ನು ಹೋಲುವ ಅನಾಕಾರ್ಸಿನ್ ಫೋರ್ಟೆ ಎಂಬ ಔಷಧವನ್ನು ತಯಾರಿಸಿ ಮಾರುತ್ತಿದೆ. ನಾಲ್ಕರಿಂದ ಆರು ಚಮಚೆಗಳಷ್ಟು ಔಷಧ, ಇಪ್ಪತ್ತರಿಂದ ನಲ್ವತ್ತು ಗ್ರಾಮ್‌ಗಳಷ್ಟು ಪುಡಿಗೆ ಸಮನಾಗಿರುತ್ತದೆ. ಅಲ್ಲದೆ ಬಿಲ್ವಪತ್ರಿಯಿಂದ ತೆಗೆದ ಎಣ್ಣೆಯನ್ನು ಚುಚ್ಚುಮದ್ದಿನ ರೂಪದಲ್ಲೂ ಕೊಡಬಹುದು.

ಅನಾಕಾರ್ಸಿನ್ ಫೋರ್ಟೆಯಿಂದ ಕೆಲವು ಅಪ

ರೂಪದ ಸಂದರ್ಭಗಳಲ್ಲಿ ಚರ್ಮಕ್ಕೆ ಅಲರ್ಜಿಯುಂಟಾಗಬಹುದು. ಅಂತಹ ಪ್ರಸಂಗಗಳಲ್ಲಿ ಆ್ಯಂಟಿಹಿಸ್ಟಮೈನುಗಳನ್ನು ಕೊಟ್ಟು ಅಲರ್ಜಿಯನ್ನು ನಿವಾರಿಸಬಹುದು. ಆದರೆ ಈ ಔಷಧಿಯನ್ನು ವಿಧಿಸಿದ ಯಾವ ಪ್ರಸಂಗದಲ್ಲೂ ವಿಕಿರಣ ಚಿಕಿತ್ಸೆಯ ಸಮಯದಲ್ಲಿ ತಲೆದೋರಬಹುದಾದ ಓಕರಿಕೆಯಾಗಲಿ, ಕಾರುವುದಾಗಲಿ, ತಲೆ ಸುತ್ತುವುದಾಗಲಿ ಅಥವಾ ಕೂದಲು ಉದುರುವುದಾಗಲಿ ಕಂಡುಬರುವುದಿಲ್ಲ.

ವಿಕಿರಣ ಚಿಕಿತ್ಸೆ ನಡೆಸುವಾಗ ರಕ್ತದಲ್ಲಿನ ಕೆಂಪು ಗೋಲಕಗಳು ಕ್ಷತಿಗೊಳ್ಳಬಹುದು. ಕ್ಯಾನ್ಸರ್‌ಗ್ರಸ್ತ ಜೀವಕಣಗಳಲ್ಲದೆ, ಸದೃಢವಾದ, ಆರೋಗ್ಯಕರವಾದ ಜೀವಕಣಗಳೂ ನಾಶಗೊಳ್ಳಬಹುದು. ಆದರೆ ಅನಾಕಾರ್ಸಿನ್ನಿನ ಮಾತು ಹಾಗಲ್ಲ. ರಕ್ತದ ಕೆಂಪು ಗೋಲಕಗಳಾಗಲಿ, ಸುಸ್ಥಿತಿಯಲ್ಲಿರುವ ಜೀವಕಣಗಳಾಗಲಿ ನಾಶವಾಗುವ ಪ್ರಶ್ನೆಯೇ ಇಲ್ಲಿಲ್ಲ. ಮೇಲಾಗಿ, ಉಪಪರಿಣಾಮಗಳಿಲ್ಲದಿರುವುದರಿಂದ ಕ್ಯಾನ್ಸರಿನ ಲಕ್ಷಣಗಳು ಮಾಯವಾದ ಮೇಲೂ ಕ್ಯಾನ್ಸರ್ ಮರುಕಳಿಸದಂತೆ ಚಿಕಿತ್ಸೆಯನ್ನು ಮುಂದುವರಿಸಬಹುದು.

ಅನಾಕಾರ್ಸಿನ್ ಫೋರ್ಟೆಯನ್ನು ಮುಂಬಯಿಯ ಸೇಂಟ್ ಜಾರ್ಜ್ ಹಾಸ್ಪಿಟಲ್ಲಿನಲ್ಲಿ ಆರು ವರ್ಷಗಳವರೆಗೂ, ನಾಗಪುರದ ಎಸ್‌ಟಿಎಂ ಕ್ಯಾನ್ಸರ್ ಇನ್‌ಸ್ಟಿಟ್ಯೂಟಿನಲ್ಲಿ ಮೂರು ವರ್ಷಗಳವರೆಗೂ ಪ್ರಯೋಗಿಸಲಾಗಿದೆ. ಅಲ್ಲದೆ ಜರ್ಮನಿ, ಅಮೆರಿಕಗಳಲ್ಲೂ ಈ ಬಗೆಗೆ ಸಂಶೋಧನೆಯನ್ನು ಕೈಕೊಳ್ಳಲಾಗಿದೆ. ಲ್ಯುಕೀಮಿಯದ ಪ್ರಾರಂಭಿಕಾವಸ್ಥೆಯಲ್ಲಿ ಅನಾಕಾರ್ಸಿನ್ ಫೋರ್ಟೆ ಉಪಯೋಗಕ್ಕೆ ಬರುತ್ತದೆಂದು ಅಮೆರಿಕದಲ್ಲಿ ಪ್ರಕಟವಾದ 'ಇಯರ್ ಬುಕ್ ಆಫ್ ಕ್ಯಾನ್ಸರ್'ನ 1976ರ ಆವೃತ್ತಿ ಹೇಳುತ್ತದೆ.

ಆದರೆ ಬಿಲ್ವಪತ್ರಿಯ ಯಾವ ರಾಸಾಯನಿಕ ಘಟಕಗಳು ಸತ್ಪರಿಣಾಮವನ್ನು ಬೀರುತ್ತಿವೆಯೆಂಬುದು ಇನ್ನೂ ಸ್ಪಷ್ಟವಾಗಿಲ್ಲ. ಆದಕ್ಕಾಗಿ ಡಾ. ರಣದಿವೆಯವರ ನೇತೃತ್ವದಲ್ಲಿ ನಿಯಮಿಸಲ್ಪಟ್ಟ ಸಮಿತಿಯೊಂದು ಈ ದಿಶೆಯಲ್ಲಿ ಪ್ರಯೋಗ ನಡೆಸುತ್ತಿದೆ. ●



## ಕುದುರೆಗಾದ ಲಾಭ

1945ರ ಮೇ ತಿಂಗಳು. ಉರಿಬೇಸಿಗೆಯ ಸಮಯ. ಅದರಲ್ಲೂ ದೆಹಲಿಯ ಸುತ್ತಮುತ್ತ ಈ ಸಮಯದಲ್ಲಿ ವಿಪರೀತ ಸೆಕೆ. ವಿನೋಬಾ ಅವರು ಈ ಸಮಯದಲ್ಲಿಯೇ ತಾವಿದ್ದ ಬಿಡಾರದಿಂದ ಹತ್ತು ಮೈಲಿ ದೂರದಲ್ಲಿದ್ದ ಸೇವಾಗ್ರಾಮಕ್ಕೆ ಚರಕಾ ಸಂಘ ವಿದ್ಯಾಲಯವೊಂದರ ಉದ್ಘಾಟನೆಯ ಸಮಾರಂಭಕ್ಕೆ ಹೋಗಬೇಕಿತ್ತು.

ವಿನೋಬಾರ ಅನುಕೂಲಕ್ಕಾಗಿ ಸಂಘದ ವ್ಯವಸ್ಥಾಪಕರು ಒಂದು ಟಾಂಗಾವನ್ನು ಕರೆತರಲು ಕಳಿಸಿಕೊಟ್ಟರು. ಆದರೆ ವಿನೋಬಾರಿಗೆ ಅದು ಸ್ವಲ್ಪವೂ ಹಿಡಿಸಲಿಲ್ಲ. ಅವರು ನಗುತ್ತಲೇ ಹೇಳಿದರು,

"ನನ್ನ ಭಾಷಣದಿಂದ ಯಾರಿಗೆ ಏನು ಲಾಭವೋ ನನಗೆ ತಿಳಿಯದು. ಯಾರಿಗೆ ಏನೇ ಲಾಭ ದೊರೆಯದಿದ್ದರೂ ಈ ಉರಿ ಬೇಸಿಗೆಯಲ್ಲಿ ನನ್ನ ಸಲುವಾಗಿ ಬಂದಿರುವ ಈ ಕುದುರೆಗೆ ಸ್ವಲ್ಪವಾದರೂ ಈಗ ನನ್ನಿಂದ ಲಾಭವಾಗಬೇಕು. ಇದನ್ನು ಹಿಂದಿರುಗಿಸಿ; ನಾನು ಪಾದಯಾತ್ರೆಯಲ್ಲೇ ಸಕಾಲದಲ್ಲಿ ಸೇವಾಗ್ರಾಮಕ್ಕೆ ಬರುತ್ತೇನೆ."

ಇದಾದ ನಂತರ ವಿನೋಬಾ ಅವರು ಸೇವಾಗ್ರಾಮವನ್ನು ಸೇರಿದ್ದೂ ಪಾದಯಾತ್ರೆಯಲ್ಲಿಯೇ!

**ಸಂಗ್ರಹ: ವಿ.ನಾ.ಭ**

# ಫಾತಿಮಾ, ನಾನು ಮತ್ತು ಶ್ರಾವಣಸೋಮವಾರ

—ಸಿದ್ಧರಾಜ ಪೂಜಾರಿ

ಬೆಳಗಿನ ಆರು ಗಂಟೆಯಾಗಿರುವುದಿಲ್ಲ. ಡಿಂಗ್-ಡಾಂಗ್ ಕರೆಗಂಟೆಯ ಧ್ವನಿಗೆ ಎಚ್ಚರವಾಗಿ ಕಿರಿ ಕಿರಿ ಎನಿಸುತ್ತದೆ. ಇನ್ನು ಕೆಳಗೆ ಇಳಿದು ಬಾಗಿಲು ತೆರೆಯಬೇಕು. ಥೂ! ಎಂಥ ಆಲಸ್ಯ! ರಾತ್ರಿ ಬಹಳ ಹೊತ್ತು ಓದುತ್ತ, ಬರೆಯುತ್ತ ಕುಳಿತುಕೊಳ್ಳುವ ನನಗೆ ಬೇಗ ಬೆಳಕಾಗುವುದು ಪ್ರಿಯವೆನಿಸುವುದಿಲ್ಲ. ಹಾಸಿಗೆಯಲ್ಲಿಯೇ ಕುಳಿತು ಮೈ ಮುರಿದುಕೊಳ್ಳುವಾಗ ಮತ್ತೆ "ಡಿಂಗ್-ಡಾಂಗ್".

'ನನ್ನವಳು ತವರುಮನೆಗೆ ಹೋದದ್ದು ಈಗ ಹೆಚ್ಚು ಕೊರತೆ ಎನಿಸುತ್ತದೆ. ಎದ್ದು ನನ್ನ ಕೋಣೆಯ ಬಾಗಿಲು ತೆರೆಯುತ್ತೇನೆ ಬೆಳಕು ಕಣ್ಣು ಚುಚ್ಚುತ್ತದೆ. ಹಾಗೆಯೇ ಕೆಳಗೆ ಇಣುಕುತ್ತೇನೆ. ಬಂದವಳು ನನ್ನ ಮನೆಗೆಲಸದ ಹುಡುಗಿ. ಇನ್ನೂ ತುಂಬಾ ಚಿಕ್ಕವಳು. ಚಿಲಕದ ಆಧಾರದಿಂದ ಪ್ರಯತ್ನಪಟ್ಟು ಬಾಗಿಲು ಮೇಲೇರಿ ಬೆಲ್ ಬಾರಿಸುತ್ತಿದ್ದಾಳೆ.

"ಬಂದೆ, ಸ್ವಲ್ಪ ತಡೆ" ಎಂದು ಹೇಳಿ ಕೆಳಗೆ ಹೋಗಿ ಬಾಗಿಲು ತೆರೆಯುತ್ತೇನೆ.

ಕೆದರಿದ ಕೂದಲು, ಆಕರ್ಷಕ ಮುಖ, ಅವಳ ದಪ್ಪದಪ್ಪ ಕಣ್ಣುಗಳಲ್ಲಿ ಇನ್ನೂ ನಿದ್ದೆ ಇರಬೇಕು ಅಥವಾ ನಾನೇ ನಿದ್ದೆಗಣ್ಣಿನಲ್ಲಿರಬೇಕು. ಆ ಮಗು ಆಗ ತಾನೆ ಹಾಸಿಗೆಯಿಂದ ಎದ್ದು ಬಂದಂತಿತ್ತು, ಒಳಗೆ ಬಂದವಳೇ ಕಸಬರಿಗೆ ಹಾಗೂ ಕಸದ ತಟ್ಟೆ ಕೈಗೆತ್ತಿ ಕೊಂಡು ಕೇಳಿದಳು.

"ಮಾಮಿ ಯಾವಾಗ ಬರ್ತಾರ್ರೀ? ಸರ್."

"ಇನ್ನೂ ಏಳೆಂಟು ದಿನಗಳು ಬೇಕು." ನನ್ನ ಉತ್ತರಕ್ಕೂ ಕಾಯದೆ ಆಕೆ ಮಹಡಿ ಏರಿ ನನ್ನ ಕೋಣೆಗೆ ಧಾವಿಸುತ್ತಾಳೆ. ನಾನೂ ಹಿಂಬಾಲಿಸುತ್ತೇನೆ. ಅಲ್ಲಿ ಅಸ್ತವ್ಯಸ್ತವಾಗಿ ಬಿದ್ದ ಪುಸ್ತಕಗಳನ್ನು ಓರಣವಾಗಿ ಇಟ್ಟು ಹಾಸಿಗೆಯ ಮೇಲಿನ ಬೆಡ್‌ಶೀಟ್ ಹಾಗೂ, ರಗ್ಗನ್ನು ಮಡಿಸಿಟ್ಟಳು. ಬೆಡ್ಡನ್ನು ಅತ್ತೊಮ್ಮೆ ಹೊರಳಿಸಿ ಮಡಿಸಿ ಮೇಲಿಡಲು ಪ್ರಯತ್ನಿಸುತ್ತಿರುವಾಗ ಭಾರವಾಗಿದ್ದರಿಂದ ನಾನೇ ಎತ್ತಿ ಮೇಲಿಡುತ್ತೇನೆ. ನಂತರ ಸ್ವಚ್ಛವಾಗಿ ಕಸಗುಡಿಸಿ ನನ್ನ ಟೇಬಲ್ಲು, ಖುರ್ಚಿಗಳನ್ನು ಒರೆಸುತ್ತಾಳೆ. ಕೋಣೆ ಲಕಲಕವೆನಿಸತೊಡಗುತ್ತದೆ. ಇಷ್ಟೆಲ್ಲ ಮಾಡುವಾಗ ಫಾತಿಮಾ ನನ್ನತ್ತ ಗಮನ ವೀಯುವುದೇ ಇಲ್ಲ. ಆಕೆ ಕೆಲಸದಲ್ಲಿಯೇ ತಲ್ಲೀನ. ಪುಟ್ಟಪುಟ್ಟ ಕೈಗಳಿಂದ ಆಕೆ ಚುರುಕಾಗಿ ಕೆಲಸ ಮಾಡುತ್ತಾಳೆ. ಅವಳು ಇಷ್ಟೆಲ್ಲ ಕೆಲಸ ಮಾಡಬಹುದೆಂದು ನನಗೆ ಅನಿಸಿರಲಿಲ್ಲ.

(ಕೃಪೆ: 'ನವನಾಡು')

ರಾತ್ರಿಯೆಲ್ಲ ಮಳೆಯಾಗಿದ್ದರಿಂದ ತಣ್ಣನೆಯ ಗಾಳಿ ಬೀಸುತ್ತಿತ್ತು. ಭಾರವಾದ ಮೋಡಗಳಿನ್ನೂ ತೇಲುತ್ತಿದ್ದವು . ಮೋಡಗಳ ಮಧ್ಯೆ ಚದುರಿದ ಮಬ್ಬು ಬೆಳಕು. ದೂರದ ಗುಡ್ಡದ ಮೇಲಿರುವ ಮಂದಿರದ ದೀಪಗಳಿನ್ನೂ ಬೆಳಗುತ್ತಿದ್ದವು. ಈಗ ಬೆಳಕಿಗೆ ನನ್ನ ಕಣ್ಣುಗಳು ಹೊಂದಿಕೊಂಡಿದ್ದವು. ನಿದ್ದೆ ಹಾರಿ ಹೋಗಿತ್ತು. ಬೆಳಗು ಚೆಂದವೆನಿಸಿತು. ಆಹ್ಲಾದಕರವೆನಿಸ ತೊಡಗಿತು. ಮಹಡಿಯ ಮೇಲೆ ನಿಂತುಕೊಂಡೇ ಬೆಳಗು ಅನುಭವಿಸತೊಡಗಿದೆ. ಫಾತಿಮಾ ಕೆಳಗೆ ಹೋಗಿ ಅಡಿಗೆ ಮನೆ ಹಾಗೂ ಪಡಸಾಲೆಯ ಕಸ ಗುಡಿಸುತ್ತಿದ್ದಳು.

ಕಟಾಂಜನದ ಮೇಲೆ ಒರಗಿಕೊಂಡು ನಾನು ಸುತ್ತೆಲ್ಲ ಕಣ್ಣಾಡಿಸಿದೆ. ಎಲ್ಲರ ಮನೆಯ ದೀಪಗಳೂ ಬೆಳಗುತ್ತಿದ್ದವು. ನಮ್ಮ ಓಣಿಯ. ವಿಶಿಷ್ಟ ವ್ಯಕ್ತಿಗಳೆಲ್ಲ ನೆನಪಾದರು. ಅವರಲ್ಲಿ ಶಿಸ್ತಿನ ಸಿಪಾಯಿ. ಎನಿಸಿಕೊಳ್ಳುವ ಚಾಚಾ, ತತ್ತ್ವಜ್ಞಾನವನ್ನೇ ಬದುಕುವ ದೇಸಾಯಿದಾದಾ, ಮರೆಯಲಾಗದ ಮಧುಕಾಕಾ ಹಾಗೂ ಸದಾ• ಕೆಲಸದ ಗಡಿಬಿಡಿಯಲ್ಲಿರುವ ನಿಂಬರಗಿಮಾಮಾ ಪ್ರಮುಖರು. ಅವರೆಲ್ಲ ವಾಕಿಂಗ್‌ಗೆ ಹೋಗಿರಬಹುದು. ಇಷ್ಟರಲ್ಲೇ ಬಂದು ಬಿಡುತ್ತಾರೆ. ಬೆಳಗು ಯಾವಾಗಲೂ ಈ ನಾಲ್ವರ ಸೊತ್ತು ಎನಿಸಿಬಿಡುತ್ತದೆ. 'ದಾದಾ' ಬಂದೇ ಬಿಟ್ಟರು. ಬರುವಾಗ ಕೈಚೀಲದ ತುಂಬ ಹೂವು, ಪತ್ರಿ, ಗರಿಕೆ ತಂದಿದ್ದರು. ಅವರಿಗೆ ನಮಸ್ಕಾರ ಹೇಳಿದೆ. ಔಪಚಾರಿಕವಾಗಿ ಮಾತನಾಡಿದೆ. ಅಷ್ಟರಲ್ಲಿ ಅನೇಕರು ಸ್ನಾನ ಮುಗಿಸಿ ಮಡಿ ವಸ್ತ್ರ ಉಟ್ಟುಕೊಂಡು ದೇವರಿಗೆ ನಡೆದಿದ್ದರು. ಎಲ್ಲೆಲ್ಲೂ ಸಂಭ್ರಮದ ವಾತಾವರಣ ನೆನಪಾಯಿತು. ಇಂದು ಪವಿತ್ರವಾದ ಶ್ರಾವಣ ಸೋಮವಾರ. ಅಲ್ಲದೆ ರಾಮಲಿಂಗೇಶ್ವರ ಜಾತ್ರೆಯ ದಿನ ಬೇರೆ.

ಹಾಗಾದರೆ ನಿಂಬರಗಿ ಮಾಮಿ ಎದ್ದು ಹಳೆಯ ಮಾತಾಗಿರಬೇಕು. ಮಾಮಿ ಅಡಿಗಡಿಗೆ ಮಡಿ ಮಾಡುವುದಕ್ಕೆ ಹೆಸರಾದವರು. ಸದ್ಯ ಅವರ ಮನೆ ಹೊಕ್ಕು ಎಲ್ಲ ವನ್ನೂ ಮುಟ್ಟಿ ಮೈಲಿಗೆ ಮಾಡಬೇಕೆನಿಸಿತು. ಅಂಥ ವಿಚಾರಕ್ಕಾಗಿ ನಗು ಬಂತು. ಪ್ರೀತಿಯ ಮಾಮಿಯನ್ನು ಹಾಗೆಲ್ಲ ಕಾಡಬೇಕೆನಿಸುತ್ತದೆ. ಅವರ ಗೊಣಗಾಟದ ಬಗ್ಗೆ ನನಗೆ ಕನಿಕರವೆನಿಸುತ್ತದೆ.

ಮಳೆಯಲ್ಲಿ ತೊಯ್ದ ಭೂಮಿ ಮಾಮಿಯ ತರಹ ಮಡಿ ವಸ್ತ್ರ ಉಟ್ಟುಕೊಂಡಂತಿತ್ತು. ಆಹಾ! ಶ್ರಾವಣದ ತಿಂಗಳನ್ನು ಪ್ರೀತಿಸದವರಾರು? ಮಾಮಿ ಪದೇಪದೇ ಹೇಳುವ ಮಾತೂ ನೆನಪಾಗುತ್ತದೆ.

"ನನಗ ಮಡಿ ಮಾಡಬಾರ್ದು ಅನಸ್ತದರಿ ನಮ್ಮ ರಾಜಾ, ದತ್ತು, ವಿಷ್ಣುಗ (ಅವರ ಮಕ್ಕಳು) ಇದೆಲ್ಲ ಸ್ವಲ್ಪೂ ಸೇರಾಂಗಿಲ್ರಿ. ಆದರೂ ಯಾಕೋ ಮನಸ್ಸು ಕೇಳಾಂಗಿಲ್ರಿ"

ಮಾಮಿಯ ನಿಷ್ಕಪಟ ಮಾತುಗಳು ಯಾವಾಗಲೂ ನನಗೆ ಪ್ರಿಯವೆನಿಸುತ್ತವೆ.

ದೇವಮಂದಿರಕ್ಕೆ ಹೋಗುವ ಜನರ ಗದ್ದಲ ಹೆಚ್ಚತೊಡಗುತ್ತದೆ. ನನಗೂ ಅವರ ಬೆಂಬತ್ತಿ ಹೋಗಬೇಕೆನಿಸುತ್ತದೆ. ನಾನು ಆ ಸಂಭ್ರಮವನ್ನು ಪ್ರೀತಿಸುತ್ತೇನೆ. ಹೌದು, ಬೇಗನೇ ಸ್ನಾನ ಮಾಡಿಕೊಂಡು ಹೋದರಾಯಿತು. ಆ ತವಕದಿಂದಲೇ ಕೆಳಗಿಳಿಯುತ್ತೇನೆ.

ಫಾತಿಮಾ ಆಗಲೇ ಕಸ ಗುಡಿಸಿ ಅಂಗಳಕ್ಕೆ ನೀರು ಚಿಮುಕಿಸಿದ್ದಳು. ಈಗ ಅಡಿಗೆ ಮನೆ ಹೊಕ್ಕು ದೇವರ ಜಗುಲಿಯ ಮೇಲೆ ಏನನ್ನೋ ಹುಡುಕ ತೊಡಗಿದ್ದಾಳೆ.

'ಮುಸಲ್ಮಾನ್ ಹುಡಗಿ ನನ್ನ ಮನೆಯ ದೇವರ ಜಗಲಿ ಮುಟ್ಟಿ ಮೈಲಿಗೆ ಮಾಡಿದಳಲ್ಲ! ಛೆ!ಛೆ!! ಇಂದು ಶ್ರಾವಣ ಸೋಮವಾರ ಬೇರೆ!' ಮಾತು ಮನದಲ್ಲಿಯೇ ಮಿಂಚಿ ಮಾಯವಾಗುತ್ತದೆ.

"ಏನು ಬೇಕು ಫಾತಿಮಾ?" ವಿಚಲಿತವಾಗಿ ಕೇಳುತ್ತೇನೆ. ನನ್ನ ಧ್ವನಿಯಲ್ಲಿ ಎಂಥದೋ ಆಘಾತ ಮಿಶ್ರಣವಿತ್ತು.

"ಇದು ಬೇಕರಿ....ಇದು ...ಕುಂಕುಮ" ಫಾತಿಮಾ ತನಗೆ ಬೇಕಾದ ವಸ್ತುವಿನ ಹೆಸರು ತಿಳಿಯದೇ ತಡವರಿಸುತ್ತಾಳೆ. ಅಷ್ಟರಲ್ಲಿ ಅವಳಿಗೆ ಪಂಚವಾಳ ದೊರಕುತ್ತದೆ.

"ಸಿಕ್ಕಿತು ಬಿಡ್ರಿ" ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡು ಹೊರಗೆ ಬಂದು ಹೊಸ್ತಿಲಕ್ಕೆ ಕುಂಕುಮ ಹಚ್ಚುತ್ತಾಳೆ. ಅವಳು ರಂಗವಲ್ಲಿ ಹಾಕುವುದನ್ನು ಕಂಡು ನನಗೆ ನಗು ಬರುತ್ತದೆ.



ಇದನ್ನೆಲ್ಲ ಮಾಡಲು ಅವಳಿಗೆ ಯಾರು ಹೇಳಿದರು.?

ಇಲ್ಲ. ಯಾರೂ ಹೇಳಿಲ್ಲ. ನನ್ನವಳು ಊರಲ್ಲಿಲ್ಲವೆಂದು ನನ್ನ ಮೇಲೆ ಕನಿಕರಿಸಿ ಅವಳು ಮುಂಜಾನೆಯ ಕೆಲಸವನ್ನೆಲ್ಲ ಮಾಡಿ ಮುಗಿಸಿದ್ದಾಳೆ. ಸದ್ಯ ಆಕೆಗೆ ಪಾತ್ರೆ ತೊಳೆದಿಡುವ ಗಡಿಬಿಡಿ.

ಫಾತಿಮಾಳಿಗೆ ತಾನೋರ್ವ ಮುಸ್ಲಿಮ್ ಎಂಬ ಅರಿವು ಇದೆಯೆ? ಇಲ್ಲ. ಆ ಪುಟ್ಟ ಜೀವದಲ್ಲಿ ಧರ್ಮ, ಜಾತಿ, ಮೇಲು-ಕೀಳು ಎಂಬ ಬೀಜಗಳಿನ್ನೂ ಮೊಳಕೆಯೊಡೆದಿಲ್ಲ. ತನ್ನ ಮನೆಯೇ ಎಂದು ತಿಳಿದು ಆಕೆ ನನ್ನವಳನ್ನು ಅನುಕರಿಸಿ ಕೆಲಸ ಮಾಡುತ್ತಿದ್ದಾಳೆ. ಅವಳ ಗಡಿಬಿಡಿ ಗಮನಿಸಿದರೆ ಅವಳಿಗೆ ಬೇರೆಲ್ಲೋ ಹೋಗಬೇಕಾಗಿದೆ ಎನಿಸುತ್ತದೆ.

ಫಾತಿಮಾಳನ್ನು ನೋಡುತ್ತಲೇ ಇದ್ದೇನೆ. ಮನದಲ್ಲಿ ಮಿಂಚಿಹೋದ ಮಾತು ಈಗ ಮುಳ್ಳಾಗಿ ಚುಚ್ಚುತ್ತಿದೆ. ಮನಸ್ಸು ವಿಹ್ವಲಗೊಳ್ಳುತ್ತದೆ. ಆ ಮುದ್ದು ಫಾತಿಮಾಳಿಗಿಂತ ನಾನು ಬಹಳ ಚಿಕ್ಕವ ಎಂದುಕೊಳ್ಳುತ್ತೇನೆ. ಆಕೆಯ ಮನದೊಳಗೆ ತಪ್ಪಿಯೂ ಸುಳಿಯದ ಮಡಿ-ಮೈಲಿಗೆ ಎಂಬ ದುರ್ಭಾವನೆಯನ್ನು ನನ್ನಲ್ಲಿ ಬಿತ್ತಿದವರಾರು? ನನ್ನ ಬಗ್ಗೆ ನನಗೇ ನಾಚಿಕೆ. ಎನಿಸುತ್ತದೆ. ಮೇಜಿನ ಮೇಲೆ ರಾಶಿರಾಶಿಯಾಗಿ ಬಿದ್ದಿರುವ ಪುಸ್ತಕಗಳಿಂದ ನಾನು ಅರಿತುಕೊಂಡ 'ಸತ್ಯ'ವಾದರೂ ಏನು? ನನ್ನ ಧರ್ಮ ನನಗೆ ಮಡಿವಂತಿಕೆಯನ್ನು ಕಲಿಸಿತೆ? ಹಿಂದು, ಮುಸ್ಲಿಮ್, ಬೌದ್ಧ, ಜೈನ, ಕ್ರೈಸ್ತ ಇತ್ಯಾದಿ ಮತಾನುಯಾಯಿಗಳೆಲ್ಲ ಮೂಲಭೂತವಾಗಿ ಮಾನವರಲ್ಲವೆ? ಅಥವಾ ಮಾನವನನ್ನು ಮರೆತ ಧರ್ಮಗಳುಂಟೆ? ಹಾಗಾದರೆ ಈ ಭೇದ ಭಾವ ಎಲ್ಲಿಯದು? ನನ್ನಷ್ಟಕ್ಕೆ ನಾನೇ ಸಂದಿಗ್ಧ ಎಂದುಕೊಳ್ಳುತ್ತೇನೆ. ಈ ಸಂದಿಗ್ಧತೆಯ ಆಳದಲ್ಲೆಲ್ಲೊ ಟ್ಟಿರುವ ಮೇಲು ಕೀಳು ಜಾತಿಯ ಬೇರುಗಳು ನನ್ನನ್ನು ವಿಹ್ವಲಗೊಳಿಸಿರಬೇಕು. ಇಂಥ ಯಾವುದಕ್ಕೂ ಸೋಲಬಾರದ ನಾನು ಸೋತೆ ಏಕೆ?

ಹೀಗೆಲ್ಲ ವಿಚಾರಿಸುವಾಗ ನನ್ನಲ್ಲುಂಟಾದ ಆವೇಶವೂ ಕೂಡ ಕೃತಕವೆನಿಸುತ್ತದೆ. ಆದರೆ ಫಾತಿಮಾ ಸರಳತೆಯ ಸಂದರ ಮೂರ್ತಿ.

"ಸರ್, ನೀರು ಕಾಯಿಸಿಕೊಡಲೆ?" ಅವಳ ಮುಗ್ಧಮಾತು ಮೊನಚಾಗಿ ಚುಚ್ಚುತ್ತದೆ. ನಾನು ಅವಳನ್ನು ಕೀಳಾಗಿ ಕಂಡೆ, ಅದರ ಬದಲಾಗಿ ಆಕೆ ನನ್ನನ್ನು ಉಪಚರಿಸುತ್ತಿದ್ದಾಳೆ. ನನ್ನಲ್ಲುಂಟಾದ ಗೊಂದಲ ಪಾಪ ಆ ಮಗುವಿಗೇನು ಗೊತ್ತು?.

ಅವಳ ಮಾತಿಗೆ ಒಂದು ರೀತಿಯ ಮಮತೆ ಉಂಟಾಗಿ "ಫಾತಿಮಾ, ಬಾ ಇಲ್ಲಿ" ಎಂದು ಹತ್ತಿರ ಕರೆದು ತಲೆ ನೇವರಿಸುತ್ತೇನೆ. ತಲೆ ಹಸಿ ಯಾಗಿತ್ತು.

"ತಲೆ ಏಕೆ ತೋಯಿಸಿಕೊಂಡೆ, ಫಾತಿಮಾ?" ಮರುಕದಿಂದ ಕೇಳಿದೆ.

"ನಿನ್ನೆ ರಾತ್ರಿ ಮಳಿ ಆತಲ್ರಿ ಸರ್, ಗುಡಿಸ್ಲ ಸೋರಿ ಎಲ್ಲಾರೂ ತೋಯ್ಸಿಕೊಂಡಿವ್ರಿ" ಅದೆಲ್ಲ ಮಾಮೂಲು ಅನ್ನುವ ತರಹ ಆಕೆ ಉತ್ತರಿಸುತ್ತಿದ್ದಾಳೆ.

ನಮ್ಮ ಮನೆಗೆ ಬರಬಾರದೇ ಫಾತಿಮಾ? ನನ್ನಲ್ಲಿ ಅನುಕಂಪ ಉಕ್ಕತೊಡಗುತ್ತದೆ.

"ನಮ್ಮಪ್ಪಾಗ ಆರಾಮ ಇಲ್ರಿ. ಬಿಟ್ಟ ಹ್ಯಾಂಗ ಬರೂದರಿ. ಅಮ್ಮಿ (ಫಾತಿಮಾಳ ತಂಗಿ) ಬ್ಯಾರೆ ಅಳತಾಳ್ರೀ, ಬಂದ್ರ ನಿಮಗೂ ತ್ರಾಸ ಅಲ್ಲೇನ್ರಿ.?

ಆಕೆ ದೊಡ್ಡವರ ಬಗ್ಗೆ ಹಾಗೆ ಮಾತ ನಾಡುತ್ತಾಳೆ. 'ಪಾಪ, ಫಾತಿಮಾಳಿಗೆ ಎಷ್ಟೊಂದು ಜವಾಬ್ದಾರಿ?" ಎಂದು ಮರಗು ತ್ತೇನೆ.

ಏಳು ಜನ ಹೆಣ್ಣು ಮಕ್ಕಳಿಗೆ ಜನ್ಮವಿತ್ತು ಫಾತಿಮಾಳ ತಾಯಿ ತೀರಿಕೊಂಡು ಐದು ವರ್ಷಗಳಾಗಿವೆ. ತಂದೆ ಟ್ಯಾಕ್ಸಿ ಡ್ರೈವರ್ ತೀವ್ರ ಕಾಯಿಲೆಯಿಂದ ಮಲಗಿದ್ದಾನೆ, ಸದ್ಯ ದಿನ ವಿಡೀ ದುಡಿದು ಫಾತಿಮಾಳೇ ತಂದೆಯನ್ನು ಹಾಗೂ ಇಬ್ಬರೂ ತಂಗಿಯರನ್ನು ಉಪ ಚರಿಸಬೇಕು. ಅಕ್ಕಂದಿರೆಲ್ಲ ಅದ್ಹೇಗೋ ಗಂಡನ ಮನೆ ಸೇರಿದ್ದಾರೆ. ಫಾತಿಮಾ ಇಬ್ಬರು ತಂಗಿಯರನ್ನು ಕಟ್ಟಿಕೊಂಡು ಕೆಲಸಕ್ಕಾಗಿ ಮನೆ ಮನೆ ಅಲೆಯುತ್ತಾಳೆ. ತನ್ನ ವಯಸ್ಸಿಗೂ ಮೀರಿ ಕೆಲಸ ಮಾಡುತ್ತಾಳೆ. ಕೊಟ್ಟುದರಲ್ಲಿ ಆ ಮಕ್ಕಳು ಹಂಚಿಕೊಂಡು ಊಟ ಮಾಡುತ್ತವೆ. ತಾವು ಪ್ರೀತಿ ವಾತ್ಸಲ್ಯದಿಂದ ವಂಚಿತರಾದ ಬಗ್ಗೆ ಬಾಲ್ಯದ ಸುಂದರ ಕನಸುಗಳ ಬಗ್ಗೆ ಆ ಮಕ್ಕಳಿಗೆ ಗೊತ್ತಿದೆಯೇ? ಫಾತಿಮಾಳಿಗಿರ ಬಹುದಾದ ಯೋಚನೆ ಎಂದರೆ ದುಡಿಯು ವುದು. ಹೊಟ್ಟೆ ತುಂಬಿಸಿಕೊಳ್ಳುವುದು.

ಫಾತಿಮಾ ಇದ್ದಕ್ಕಿದ್ದಂತೆ ತುಂಬ ಸಂಕೋಚ ದಿಂದ ನನ್ನನ್ನು ಕೇಳುತ್ತಾಳೆ.

"ಸರ್, ಎರಡು ರೂಪಾಯಿ ಕೊಡ್ರಿ. ಅಪ್ಪಾಗ ಔಷಧಿ ತರಬೇಕ್ರಿ." ಅವಳು ತನ್ನ ಫ್ರಾಕಿನ ಜೇಬಿನಿಂದ ವೈದ್ಯರು ಬರೆದುಕೊಟ್ಟ ಚೀಟಿ ಹೊರತೆಗೆದು ತೋರಿಸಿದಳು. ಫಾತಿಮಾಳ ಮುಖದ ಮೇಲೆ ಮೂಡಿದ ಆತಂಕ ಹಾಗೂ ಗಡಿಬಿಡಿಯ ಅರ್ಥ ಈಗ ಹೆಚ್ಚು ಸ್ಪಷ್ಟ ವಾಯಿತು.

ಫಾತಿಮಾಳ ತಂದೆಯ ದುಃಸ್ಥಿತಿ ಕಂಡು ಬಡವರ ವೈದ್ಯರೆಂದೇ ಹೆಸರಾದ ಡಾ॥ ಮಳಗಿ ಅವಳ ಗುಡಿಸಲಿಗೆ ಬಂದು ಚಿಕಿತ್ಸೆ ನೀಡಿದ್ದರು.

ಫಾತಿಮಾಳಿಂದ ಔಷಧ ಚೀಟಿ ಇಸಿದು ಕೊಂಡೆ. ನಾನೇ ಔಷಧದ ಅಂಗಡಿಗೆ ಹೋದೆ. ಬಿಲ್ಲು ಇಪ್ಪತ್ತು ರೂಪಾಯಿಗಳಿಗೂ ಮಿಕ್ಕಿತು. ಅಷ್ಟು ಹಣ ಬೇಕಾಗಬಹುದೆಂದು ಅವಳಿಗೆ ಹೇಗೆ ಗೊತ್ತು? ಎರಡು ರೂಪಾಯಿಗಳೇ ಅವಳಿಗೆ ದೊಡ್ಡ ಮೊತ್ತ.

ಔಷಧ ತೆಗೆದುಕೊಂಡು ಅವಳಿದ್ದ ಬಡಾವಣೆ ಯವರೆಗೂ ಹೋದೆ. ಒಂದು ಚಿಕ್ಕ ಗುಡಿಸಲು ಹಸಿ ನೆಲದ ಮೇಲೆ ಚಾಪೆ ಹಾಸಿಕೊಂಡು ಅವಳ ಅಪ್ಪ ಮಲಗಿದ್ದ ಅವನ ನರಳುವ ಧ್ವನಿಗೆ ಫಾತಿಮಾಳ ತಂಗಿ ಅಮ್ಮಿ ಅವನ ಮುಖ ನೋಡಿ ಅಳುತ್ತಿತ್ತು. ಆತನ ಮೈ ಕೆಂಡ ವಾಗಿತ್ತು. ಔಷಧ ನೀಡಿದೆ. ಆತ ಕೃತಜ್ಞತೆ ಯಿಂದ ನನ್ನನ್ನು ನೋಡಿ ಫಾತಿಮಾಳಿಗೆ ಹೇಳಿದ.

"ಅವ್ರು ದೇವರಂಥ ಮನುಷ್ಯರು, ಎಂದೂ ಅವರ ಮನೆಗೆಲಸ ಬಿಡಬೇಡ. ಅವರ ಕಾಲಿಗೆ ಬೀಳು." ಇತ್ತ ಹಿಂದಿಯೂ ಅಲ್ಲ, ಅತ್ತ ಉರ್ದುವೂ ಅಲ್ಲದೆ ವಿಚಿತ್ರ ಭಾಷೆಯಲ್ಲಿ ಆತ ಬಡಬಡಿಸುವವರಂತೆ ಮಾತಾಡುತ್ತಿದ್ದ.

ಮಕ್ಕಳು ನನ್ನ ಕಾಲಿಗೆ ನಮಸ್ಕರಿಸಲು ಬಂದವು. ನಾನೇ ತಡೆದೆ, ಗಂಟಲು ಬಿಗಿದು

ನಾನು ಮೂಕನಾಗಿದ್ದೆ. ಅವರ ಬಡತನ ಅಸಹಾಯಕತೆ, ವಿಧೇಯತೆಗಳ ಮುಂದೆ ನಾನು ದೇವರಾಗಿದ್ದೆ, ಅಷ್ಟೆ.

ಫಾತಿಮಾ ನಮ್ಮ ಮನೆಗೆಲಸದ ಹುಡುಗಿಯಾಗಿ ಬಂದು ಹಲವು ತಿಂಗಳಾಗಿರಬೇಕು. ಅಂದು ಓರ್ವ ಮುದುಕಿ ಬಂದು ನಮ್ಮನ್ನು ವಿನಂತಿಸಿಕೊಂಡಿದ್ದಳು. 'ತಾಯಿ ಇಲ್ಲದ ತಬ್ಬಲಿ' ಇನ್ನೂ ಸಣ್ಣಕೂಸು . ಕಸಮುಸರೆ ಮಾಡ್ತೈತಿ, ಬ್ಯಾಡ ಅನಬ್ಯಾಡ್ರಿ, ಮಗ್ಗಳಾಂಗ ನೋಡ್ಕೊಳ್ರಿ, ಪುಣ್ಣೇ ಹತ್ತೈತಿ!

ಮುದುಕಿ ಅಂಗಲಾಚಿದ್ದಳು. ನಾವು ಬೇಡ ಅನ್ನಲಿಲ್ಲ. ಮಕ್ಕಳನ್ನು ದುಡಿಸಿಕೊಳ್ಳುವುದು ಅಪರಾಧವಲ್ಲವೆ? ಇರಬಹುದು. ಆ ಅಸಹಾಯಕ ಮಗುವಿಗಾಗಿ ನಮ್ಮಲ್ಲಿ ಹುಟ್ಟಿಕೊಂಡ ಅನುಕಂಪದಿಂದ ನಾವು ಅಪರಾಧ ಮಾಡಿದ್ದೇವೆ. ಈಗ ಫಾತಿಮಾಳನ್ನು ನಮ್ಮ ಮಗಳೆಂದೇ ಭಾವಿಸಿದ್ದೇನೆ.

ಹೌದು. ಆಕೆಗೆ ತಾನೋರ್ವ ಮುಸ್ಲಿಮ್ ಎಂದು ಅರಿವು ಮೂಡುವವರೆಗೆ ಆಕೆ ನಮ್ಮ ಮಗಳೇ. ಬದುಕಿನ ಕ್ಷುದ್ರ ಅರಿವುಗಳು ನಮ್ಮನ್ನು ಅಣಕಿಸುತ್ತಲೇ ಇರುತ್ತವೆ.

ಅವಳ ಗುಡಿಸಲಿನಿಂದ ಮನೆಗೆ ಹೊರಟೆ. ಜಾತ್ರೆಯ ದಿನವಾಗಿದ್ದರಿಂದ ದಾರಿಯಲ್ಲಿ ಜನ ಸಂದಣಿ ಅಧಿಕವಾಗ ತೊಡಗಿತ್ತು. ಶ್ರಾವಣ ಸೋಮವಾರದ ಸಂಭ್ರಮ, ಸೊಬಗು ಇದ್ದೇ ಇತ್ತು. ಎಲ್ಲರನ್ನೂ ದಾಟಿ ಮನೆಗೆ ಬಂದೆ.

ಮತ್ತೆ ಮಾಮಿ, ಮಾಮಾ, ದಾದಾ, ಚಾಚಾ, ಮಧುಕಾಕಾ ಎಲ್ಲರೂ ನೆನಪಾದರು ತಣ್ಣೀರು ಸ್ನಾನ ಮಾಡುವಾಗ ನನ್ನವಳೂ ನೆನಪಾದಳು. ಈಗ ಜಾತ್ರೆಗೆ ಹೋಗುವ ಉತ್ಸಾಹ ಕಡಿಮೆಯಾಗಿತ್ತು. ಶ್ರಾವಣ ಸೋಮವಾರದಂದು ಮಾಡಬೇಕಿದ್ದ ವಿಧಿ-ವಿಧಾನಗಳ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳದೆ ನನ್ನ ಕೋಣೆಗೆ ಧಾವಿಸಿದೆ.

ಜಿಲ್ಲಾ ಸಾಹಿತ್ಯ ಪರಿಷತ್ ಅಧ್ಯಕ್ಷರಿಂದ ನಿನ್ನೆ ಬಂದ ಪತ್ರ ಹಾಗೆಯೇ ಇತ್ತು. ಒಡೆದು ಓದಿದೆ. "ನಾನೇಕೆ ಬರೆಯುತ್ತೇನೆ" ಎಂಬ ವಿಷಯವಾಗಿ ಪ್ರಬಂಧ ಮಂಡಿಸಲು ಕೇಳಿದ್ದರು.

ಮೇಜಿನ ಮೇಲೆ ತಲೆಯಿಟ್ಟು ನಾನು ಯೋಚಿಸ ತೊಡಗಿದೆ. ●



## ಶಿಖರವೇರಿದರು!

ಹಿಮಾಲಯದ ಉನ್ನತ ಶಿಖರವನ್ನು ಏರುವ ಉದ್ದೇಶದಿಂದ ಇಪ್ಪತ್ತು ಜನರ ಒಂದು ತಂಡ ಯತ್ನವನ್ನಾರಂಭಿಸಿತು. ಇದು ಸ್ತ್ರೀ-ಪುರುಷ ಪರ್ವತಾರೋಹಿಗಳಿಬ್ಬರೂ ಇದ್ದ ತಂಡ. ಶಿಖರವನ್ನು ತಲಪುವುದಕ್ಕೆ ಮುಂಚಿನ ಮೂರನೆಯ ಶಿಬಿರವನ್ನು ತಲಪಿದವರು ಇಬ್ಬರು ಮಾತ್ರ-ಒಬ್ಬ ಪುರುಷ, ಇನ್ನೊಬ್ಬಳು ಸ್ತ್ರೀ. ಆ ಒಂದು ರಾತ್ರಿಯನ್ನು ಈ ಶಿಬಿರದಲ್ಲಿ ಇಬ್ಬರೇ ಕಳೆದು ಮರುದಿನ ಇಬ್ಬರೂ ಶಿಖರದ ಕೊನೆಯ ಹಂತವನ್ನೇರಬೇಕು. ತಾವಿಬ್ಬರೂ ಗಂಡ-ಹೆಂಡಿರಲ್ಲವೆಂಬ ಸಂಗತಿ ಅವರಿಬ್ಬರ ನಡುವೆ ಸಂಕೋಚದ ಗೋಡೆಯನ್ನೇ ಕಟ್ಟಿತು. ಕೊನೆಗೆ ಆಕೆಯೇ ಹೇಳಿದಳು: "ಇದು ನೋಡಿ, ನಾನು ಈ ಕಲ್ಲನ್ನು ನಮ್ಮಿಬ್ಬರ ಮಧ್ಯೆ ಇಡುತ್ತೇನೆ. ಇದು ಲಕ್ಷ್ಮಣ ರೇಖೆ ನೀವಿದನ್ನು ದಾಟಬಾರದು."

ಬೆಳಗ್ಗೆ ಸೂರ್ಯೋದಯಕ್ಕೆ ಎದ್ದ ನಂತರ ಆತ ಸಂಗಾತಿಗೆ, "ಇನ್ನು ಸಿದ್ಧರಾಗಿರಿ, ಹೊತ್ತಿರುವಾಗಲೇ ನಾವು ಶಿಖರವನ್ನು ತಲಪಿ ಮತ್ತೆ ಕೆಳಕ್ಕಿಳಿಯಬೇಕಲ್ಲ," ಎಂದ.

"ನಡೆಯಿರಿ, ಈಗ ಕೆಳಕ್ಕೇ ಇಳಿಯುವುದು. ಇಡೀರಾತ್ರಿ ಈ ಒಂದು ಚಿಕ್ಕ ಕಲ್ಲನ್ನು ದಾಟಲಿಕ್ಕಾಗದ ನೀವು ಶಿಖರವನ್ನೇನು ಏರುತ್ತೀರಿ!" ಆಕೆ ಮೂದಲಿಸಿದಳು.

*ತಿರುಮಲೇಶ ದೇಶಪಾಂಡೆ*

# ಹುಂಜ ಮತ್ತು



ಹೊಳೆಗಿಳಿದ ಹೊಂಬಿಸಿಲು. ಜತೆಗೆ ನೀರಲ್ಲಾಡಿ
ಕೊಡ ತುಂಬಿಕೊಂಡು, ತಾವರೆಯ ಹಿಡಿದು
ಮೆಲ್ಲಗೆ ನಡೆದಹಲ್ಯೆಯನು ಕಂಡಿಂದ್ರ
ಆಕೆಗಂದನು ನಕ್ಕು ಸ್ವಲ್ಪ ತಡೆದು. -೧-

ಕನಸಿನಲ್ಲಿಷ್ಟೇಕೆ ಕಾಡಿ ಬಂದೆ? ಪ್ರಿಯೆ!
ಎಷ್ಟು ಬಾರಿಗೆ ನೆನೆಸಿಕೊಂಡೆ ನೀನು?
ಪಾರಿಜಾತದ ಮಾಲೆ ನಿನಗೆ ಮುಡಿಸೋಣೆಂ
ದು, ಐರಾವತದಿ ಕಾದು ಕೂತೆ ನಾನು. -೨-

ಇಷ್ಟರಲ್ಲೇ ನೀನು, ಗೌತಮನ ವಧುವಾಗಿ
ಹಸೆಯಲ್ಲಿ ಕೂತಿದ್ದೆ, ಹೋಮದೆದುರು
ಮೈಯ ಗೌತಮಗಿತ್ತು, ಮನವ ಇಂದ್ರನಿಗಿತ್ತು
ಎರಡು ಮಂಚದೊಳಿರುವುದಾವ ಚೆದುರು? -೩-

ನಕ್ಕುಬಿಟ್ಟಳಹಲ್ಯೆ. ನಗೆಯೊಂದು ನಂದನವೆ.
ಗಂಧವತಿ ಕೆನ್ನೆಯಲಿ ಮುಡಿದ ತಾರೆ
ಹೊಂಬೆಳಗಿನಲಿ ಕಡೆದ ಹಾಲು ವಿಗ್ರಹದಂತೆ
ಮಿಂಚಿದಳು, ಋಷಿಯ ಕೈಹಿಡಿದ ಬಾಲೆ. -೪-

ಕೊಡವ ಕೆಳಗಿಟ್ಟಳು. ತಾವರೆಯ ಕೊಟ್ಟಳು.
ತೂಗಿದಳು ಇಂದ್ರನ ತೋಳಿನೊಳಗೆ....
ಮೆಲ್ಲಗೆ ಕೇಳಿದಳಹಲ್ಯೆ...."ನೆನಪಾಯಿತಾ?
ಎಂದು ಚಿತ್ತೈಸುವಿರಿ ನನ್ನ ಬಳಿಗೆ?" -೫-

"ಕತ್ತಲಿರುವಾಗಲೆ, ತಾರೆ ಹೊಳೆವಾಗಲೆ,
ನಾಳೆಯೆ ಬರುವೆನು....ಹುಂಜವಾಗಿ,

# ಕಮಂಡಲು



ನಿನ್ನ ಹೊಸ್ತಿಲದಲ್ಲಿ ಕೂಗುವೆನು, ಓ ಪ್ರಿಯೆ
ಇಂದ್ರನೆ ಬಂದಿಹನಹಲ್ಯೆಗಾಗಿ" -೬-

ಆಗಲೆ ತೆರಳಿದ್ದು, ಗೌತಮರು ಮೀಹಕ್ಕೆ
ತಾರೆಗಳು ಹೊಳೆದವು ಬಾನಿನಲ್ಲಿ
ಪರಿಮಳದ ಅಲೆಗಿಳಿದ ಮೀನಿನಂತೆ, ಆ
ಹಲ್ಯೆ ಒರಗಿದಳು ಇಂದ್ರನ ತೋಳಿನಲ್ಲಿ. -೭-

ಪ್ರೀತಿಯೆ ಹಾಗೆ, ಅದರ ರೀತಿಯೆ ಹಾಗೆ,
ಕನಸಿನಲಿ ಕರಗಿದಳಹಲ್ಯೆ....ಆಗ
ಗೌತಮರು ಅಂದುಕೊಂಡರು. ಹೊಳೆಗೆ
ಬಂದದ್ದು, ಮಿಂದದ್ದು...ತೀರ ಬೇಗ. -೮-

ಹೊಸ್ತಿಲಿನ ಬಳಿ ಹುಂಜ, ಸೂರ್ಯನೆ ಬಂದಿಲ್ಲ
ಆಶ್ರಮದ ತುಂಬ ನಂದನದ ಹೂವು.
ಗೌತಮರು ಕೋಪದ ಕಮಂಡಲುವನೆತ್ತಿದರು.
ಇದಕಿಂತ ಇನ್ನುಂಟೆ ದೊಡ್ಡ ನೋವು? -೯-

"ಕಲ್ಲಾಗಿ ಹೋಯಿತೆ ಅಹಲ್ಯೆ, ನಿನ್ನ ಹೃದಯ?
ಮರೆತೆಯ ಗೌತಮರ ಹೋಮಕುಂಡ?
ಮುರಿದೆಯ ಇಂದ್ರನೆ, ನಮ್ಮ ಬಡ ಸಂಸಾರ"
ಗೌತಮರುಸುರಿದರು ನುಡಿಯ ಕೆಂಡ. -೧೦-

"ಕಲ್ಲಾಗಿ ಹೋಗು, ಇನ್ನಿಲ್ಲಿ ನಾ ನಿಲ್ಲೆನು.."
ಕಲ್ಲಾಗಿ ಒರಗಿದಳಹಲ್ಯೆ ನೆಲಕೆ...
ಕರುಣ ಜಲ ಬತ್ತಿದ ಕಮಂಡಲಿನ ಗೌತಮರು
ತಪಸ್ಸಿಗೆ ಕಾಡಿನೆಡೆಗೆ. -೧೧-

ಸುಬ್ಬಣ್ಣ ಯಕ್ಕುಂಡಿ

# ಅಂಗವಿಕಲ ಮಗುವಿಗೆ ವಿಶೇಷ ಆರೈಕೆ ಅಗತ್ಯ

ನಿಮ್ಮ ಮಗು ಅಂಗವಿಕಲವಾಗಿದ್ದರೆ ನಿರಾಶರಾಗದಿರಿ.

ನಿಮ್ಮ ಮಗುವಿಗೆ ಸಾಧ್ಯವಿರುವ ಎಲ್ಲಾ ಕಾರ್ಯಗಳ ಬಗ್ಗೆ ಚಿಂತಿಸಿರಿ.

ಅಂಗವಿಕಲ ಮಗು ನಿಮ್ಮ ಪ್ರೋತ್ಸಾಹದಿಂದ ಹೆಚ್ಚು ಕಡಿಮೆ ಸ್ವಾಭಾವಿಕ ಜೀವನ ನಡೆಸಲು ಮತ್ತು ಅಂಗವಿಕಲರಿಗೆ ಹೊಂದಿಕೊಳ್ಳಲು ಸಾಧ್ಯವಿದೆ.

ಮನೋದೌರ್ಬಲ್ಯದ ಮಗುವಿನೊಂದಿಗೆ ತಾಳ್ಮೆಯಿಂದ ವರ್ತಿಸಿ. ಆ ಮಗು ತನ್ನ ಮನೋವಿಕಲತೆಯ ಜೀವನಕ್ಕೆ ಹೊಂದಿಕೊಳ್ಳಲು ಸಹಕರಿಸಿ.

ನೆನಪಿಡಿ: ಅಂಗವಿಕಲತೆ ಮಗುವಿನ ತಪ್ಪಲ್ಲ ಎಷ್ಟಾದರೂ ಅದು ನಿಮ್ಮ ಮಗು ಅಲ್ಲವೇ?

ನೆನಪಿಡಿ: ಪ್ರತಿಯೊಂದು ಮಗುವಿನಲ್ಲೂ ವಿಶೇಷ ಚೈತನ್ಯವಿದೆ.

ಅದಕ್ಕೆ ನಿಮ್ಮ ಪ್ರೀತಿಯು ಅಗತ್ಯವಿದೆ.

**ಹೆಚ್ಚಿನ ವಿವರಗಳಿಗೆ:**

ನಿರ್ದೇಶಕರು,
ಸಮಾಜ ಕಲ್ಯಾಣ ಇಲಾಖೆ,
ಕರ್ನಾಟಕ ಸರ್ಕಾರ,
ಬೆಂಗಳೂರು

ಇವರನ್ನು ಸಂಪರ್ಕಿಸಿರಿ.

**'ಕರ್ನಾಟಕ ವಾರ್ತೆ'**

ಜಿಮ್ ರೀಯರ್ಡನ್

# ಇಲ್ಲಿ ನೆಲವೇ ಹೆಪ್ಪುಗಟ್ಟಿದೆ

ಪ್ರಪಂಚದ ಕೆಲ ಭಾಗಗಳಲ್ಲಿ ಒಮ್ಮೊಮ್ಮೆ ತಟ್ಟನೆ ಕಟ್ಟಡಗಳು, ರಸ್ತೆಗಳು ಭೂಮಿಯೊಳಗೆ ಹುಗಿದುಹೋಗಿ ಮಾಯವಾಗುತ್ತವೆ. ಸೇತುವೆಗೆ ಆಧಾರವೆಂದು ನಿಲ್ಲಿಸಿದ ಕಂಬಗಳು ಕುಸಿದು ಹೋಗುತ್ತವೆ. ಕಟ್ಟಡಗಳ ನೆಲದೊಳಗಿನಿಂದ ನೀರು ಪುಟಿಯಲಾರಂಭಿಸುತ್ತದೆ ಅಥವಾ ಉಳಲೆಂದು ಸಮ ಮಾಡಲ್ಪಟ್ಟ ಭೂಮಿಯೆಲ್ಲಿ ತಗ್ಗುದಿನ್ನೆಗಳುಂಟಾಗುತ್ತವೆ.

ಇದಕ್ಕೆಲ್ಲ ಕಾರಣ ಆ ಪ್ರದೇಶದ ಭೂಮಿಯೆಲ್ಲ ಶಾಶ್ವತವಾಗಿ ಗಡ್ಡೆಗಟ್ಟಿರುವುದು. ಇದಕ್ಕೆ ಇಂಗ್ಲೀಷಿನಲ್ಲಿ ಪರ್ಮಾಫ್ರಾಸ್ಟ್ (Permafrost) ಎನ್ನುತ್ತಾರೆ.

ಆರ್ಕಟಿಕ್ ಮಹಾಸಾಗರದ ದಕ್ಷಿಣಭಾಗದಿಂದ ಆರಂಭವಾಗುವ ಈ ಪರ್ಮಾಫ್ರಾಸ್ಟ್, ಭೂಮಿಯ 1/5 ದಷ್ಟು ಭಾಗವನ್ನು ಆಕ್ರಮಿಸಿಕೊಂಡಿದೆ. ರಶಿಯದ ಅರ್ಧದಷ್ಟು ಭಾಗ ಈ ರೀತಿ ಶಾಶ್ವತವಾಗಿ ಗಡ್ಡೆಗಟ್ಟಿದ್ದು, ಉತ್ತರ ಅಮೇರಿಕದಲ್ಲಿ ಇಪ್ಪತ್ತು ಲಕ್ಷ ಚದರು ಮೈಲುಗಳಷ್ಟು ಹಾಗೂ ಅಂಟಾರ್ಕ್ಟಿಕಾದ ಬಹುಭಾಗ ಪರ್ಮಾಫ್ರಾಸ್ಟ್‌ನಿಂದ ಆವೃತವಾಗಿದೆ. ಇಂಥ ಎಷ್ಟೋ ಪ್ರದೇಶಗಳಲ್ಲಿ ಅರ್ಧದಷ್ಟು ಭಾಗ ನೀರಿದ್ದರೂ ಪರ್ಮಾಫ್ರಾಸ್ಟ್‌ನಿಂದಾಗಿ ಅಲ್ಲಿಯ ಮಳೆಯ ಪ್ರಮಾಣ, ಮರುಭೂಮಿ ಪ್ರದೇಶದಲ್ಲಿಯಂತೆ ಬಹಳ ಕಡಿಮೆ.

ಪರ್ಮಾಫ್ರಾಸ್ಟ್ ಸಾರ್ವಜನಿಕರ ಗಮನ ಸೆಳೆದುದು ಇತ್ತೀಚಿನ ವರ್ಷಗಳಲ್ಲಿ ಮಾತ್ರ. ದೊಡ್ಡ ರಾಷ್ಟ್ರಗಳು ಇಂಥ ಪ್ರದೇಶಗಳಲ್ಲಿ ಸೈನಿಕ ಹಾಗೂ ನಾಗರಿಕ ನೆಲೆಗಳನ್ನು ಸ್ಥಾಪಿಸುವ ಯತ್ನ ಆರಂಭಿಸಿದ ನಂತರ ಇದರ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತಲಿದೆ. ಅಮೇರಿಕದ ಉತ್ತರ ಭಾಗದಲ್ಲಿ ಈ ಯತ್ನಗಳು ನಡೆಯುತ್ತಿವೆ. ಆರ್ಕಟಿಕ್‌ನಲ್ಲಿ ತನ್ನ ವಸಾಹತುಗಳನ್ನು ಸ್ಥಾಪಿಸುವ ದೃಷ್ಟಿಯಿಂದ ರಶಿಯ ಕಳೆದ ಸುಮಾರು ಮೂರೂವರೆ ದಶಕಗಳಿಂದ ಪರ್ಮಾಫ್ರಾಸ್ಟ್‌ನ ತೀವ್ರ ಅಧ್ಯಯನ ನಡೆಸುತ್ತಿದೆ.

ಭೂಮಿಯಿಂದ ಸುಮಾರು ಎರಡು ಸಾವಿರ ಅಡಿಗಳಷ್ಟು ಕೆಳಗೆ ಸಹ ಈ ಪರ್ಮಾಫ್ರಾಸ್ಟ್ ಪ್ರದೇಶ ಕಂಡುಬಂದಿದೆ. ಪರ್ಮಾಫ್ರಾಸ್ಟ್‌ನ ದಕ್ಷಿಣ ತುದಿಯಾದ ಉತ್ತರ ಅಮೇರಿಕದಲ್ಲಿ ಗಡ್ಡೆ ಗಟ್ಟಿದ ನೆಲದ ಪದರು ಬಹಳ ತೆಳ್ಳಗಿದೆ. ಆದ್ದರಿಂದ ಪರ್ಮಾಫ್ರಾಸ್ಟ್ ನಿರ್ಮಾಣವಾಗಲು ಬಹುಶಃ ಸರಾಸರಿ ವಾರ್ಷಿಕ ಉಷ್ಣತಾಮಾನ ಹೆಪ್ಪುಗಟ್ಟುವಿಕೆಯ ಮಟ್ಟಕ್ಕಿಂತ ಕೆಳಗಿರಬೇಕೆಂದು ತೋರುತ್ತದೆ. ಪರ್ಮಾಫ್ರಾಸ್ಟ್ ಮೇಲಿನ ಪದರು ಅಷ್ಟು ಗಟ್ಟಿಯಾಗಿರುವುದಿಲ್ಲ. ಇದಕ್ಕೆ ಸ್ವಲ್ಪ ಶಾಖ ಬಡಿದರೂ ಕರಗು

(ಕೃಪೆ: 'ಸೈನ್ಸ್ ಡೈಜೆಸ್ಟ್')

ತ್ತದೆ. ನಂತರ ಮತ್ತೆ ಹೆಪ್ಪುಗಟ್ಟುತ್ತದೆ. ಇದರಿಂದಾಗಿ ಪ್ರತಿ ವರ್ಷ ಪರ್ಮಾಫ್ರಾಸ್ಟ್‌ನಿಂದ ಆವೃತವಾದ ಪ್ರದೇಶ ಕೆಲ ಅಂಗುಲಗಳಷ್ಟು ಮೇಲೇರಬಹುದು ಅಥವಾ ಕುಸಿಯಬಹುದು.

ಸಮಶೀತೋಷ್ಣ ಹವಾಮಾನದಲ್ಲಿ ಕಟ್ಟಿಗೆ ಪುಡಿ ಹಿಮವನ್ನು ಕರಗದಂತೆ ರಕ್ಷಿಸಿಡುತ್ತದೆ. ಅದೇ ರೀತಿ ಪರ್ಮಾಫ್ರಾಸ್ಟ್ ಕರಗದಂತೆ ಪಾಚಿ ಮತ್ತು ಇತರ ಸಸ್ಯಗಳು ರಕ್ಷಿಸುತ್ತವೆ. ಕೃಷಿ ಸಾಗುವಳಿಗೆಂದೋ, ಕಟ್ಟಡ ನಿರ್ಮಾಣಕ್ಕೆಂದೋ ಮಾನವ ಈ ರಕ್ಷಣಾ ಕವಚವನ್ನು ತೆಗೆದುಹಾಕಿದಾಗ ಹಸಿ ಮಣ್ಣಿಗೆ ನೇರವಾಗಿ ಸೂರ್ಯಕಿರಣಗಳ ಸಂಪರ್ಕವುಂಟಾಗುತ್ತದೆ. ಆಗ ಪರ್ಮಾಫ್ರಾಸ್ಟ್ ಕರಗಿ ಆ ಪ್ರದೇಶವೆಲ್ಲ ಕೆಸರಿನ ರಾಡಿಯಾಗುತ್ತದೆ. ಆದ್ದರಿಂದ ಎಷ್ಟೋ ಬಾರಿ ರಸ್ತೆಗಳು ಮಣ್ಣಿನ ಮುದ್ದೆಗಳಾಗಿ ಸಂಪರ್ಕ ಕಡಿದು ಹೋಗುತ್ತದೆ.

ಪರ್ಮಾಫ್ರಾಸ್ಟ್‌ನಲ್ಲಿ ಕೆಲವು ಬಾರಿ ಸೀಳುಗಳುಂಟಾಗುತ್ತವೆ. ಆದರೆ ಗಡ್ಡೆಗಟ್ಟಿದ ಭೂಮಿ ತನ್ನ ಮೇಲಿನ ನೀರನ್ನೆಲ್ಲ ಹೀರಿಕೊಳ್ಳುವುದರಿಂದ ನೀರು ಸೀಳುಗಳೊಳಗೆ ನುಸುಳಿ, ಹೆಪ್ಪುಗಟ್ಟಿ ,ಸೀಳುಗಳು ತಂತಾನೇ ಮುಚ್ಚಿಕೊಳ್ಳುತ್ತವೆ. ಎಷ್ಟೋ ಬಾರಿ ಈ ಹೀರುವಿಕೆಯಿಂದ ಪರ್ಮಾಫ್ರಾಸ್ಟ್‌ನ ಮೇಲೆ ನೀರ್ಗಡ್ಡೆಗಳು ಉಂಟಾಗಬಹುದು. ಹೊಸದಾಗಿ ಒಣಗಿದ ಸರೋವರ ಪ್ರದೇಶಗಳಲ್ಲಿ ಒಳಗೆ ನೀರು ಇನ್ನೂ ಉಳಿದಿರುತ್ತದೆ. ಅದು ಮೇಲಿನಿಂದ ಕೆಳಗೆ ಹೆಪ್ಪುಗಟ್ಟುತ್ತಾ ಬರುತ್ತದೆ. ಈ ರೀತಿ ನೀರು ಹಿಮವಾದ ವೇಲೆ ಅದು ವಿಸ್ತಾರಗೊಳ್ಳುತ್ತದೆ. ಆಗ ನೀರ್ಗಡ್ಡೆಗಳ ನಿರ್ಮಾಣವಾಗುತ್ತದೆ. ಈ ನೀರ್ಗಡ್ಡೆಗಳು ಎಷ್ಟೋ ಬಾರಿ 300 ಅಡಿಗಳ ಎತ್ತರದವರೆಗೆ ಹಾಗೂ 3000 ಅಡಿಗಳ ಸುತ್ತಳತೆಯವರೆಗೆ ಬೆಳೆಯಬಹುದು.

ಗಡ್ಡೆಗಟ್ಟಿದ ಭೂಮಿ ಮತ್ತು ಅಡಿಪಾಯದ ಯಾವುದೇ ರಕ್ಷಣೆಯಿಲ್ಲದೇ ಕಟ್ಟಿದ ಮನೆಯಲ್ಲಿ ಶಾಖ ಹೆಚ್ಚಾದಾಗ ಅದು ನೆಲದೊಳಗೆ ಸೇರಿ ಹೋಗಿ ಪರ್ಮಾಫ್ರಾಸ್ಟನ್ನು ಕರಗಿಸಬಹುದು. ಆಗ ಮನೆಯ ಅಡಿಪಾಯ ಕುಸಿಯಲಾರಂಭಿಸುತ್ತದೆ. ಉತ್ತರ ಅಮೇರಿಕದಲ್ಲಿ ಈ ರೀತಿಯಾಗಿ ಪರ್ಮಾಫ್ರಾಸ್ಟ್ ಕರಗಿ, ಒಂದೆಡೆ ಮನೆಯ ನೆಲ ಕುಸಿದಿರುವುದು. ತತ್ಪರಿಣಾಮವಾಗಿ ಮಾಳಿಗೆ ಕೆಳಗೆ ಇಳಿದಿರುವುದನ್ನು ಕಾಣಬಹುದು.

ಎಷ್ಟೋ ಸಲ ಇದಕ್ಕಿಂತ ಹೆಚ್ಚಿನ ವ್ಯತಿರಿಕ್ತ ಪರಿಣಾಮ ಉಂಟಾಗಬಹುದು. ಮನೆಯ ಅಡಿಪಾಯ ಹಾಗೂ ಕೆಳಗಿನ ಪರ್ಮಾಫ್ರಾಸ್ಟ್ ಮಧ್ಯೆ ಯಾವುದೇ ರಕ್ಷಣೆ ಇಲ್ಲದಿದ್ದಾಗ, ಮನೆಯೊಳಗಿನ ಶಾಖದಿಂದ ಕರಗಿದ ಪರ್ಮಾಫ್ರಾಸ್ಟ್‌ನಿಂದಾಗಿ ಮನೆಯ ನೆಲದೊಳಗಿನಿಂದ ನೀರು ಪುಟಿಯಲಾರಂಭಿಸುತ್ತದೆ.

ನೀರಿನ ಝರಿಗಳಲ್ಲಿ ಹಿಮದ ಮೇಲ್ಮೈ ಹಾಗೂ ತಳದಲ್ಲಿರುವ ಹಿಮದ ಹಾಸಿಗೆಯ ಮಧ್ಯೆ ಸಿಕ್ಕಿಕೊಂಡ ನೀರಿನ ಮೇಲೆ ಹೊರಬರಲು ಬಹಳ ಒತ್ತಡ ಬೀಳುತ್ತದೆ. ಆದರೆ ನೀರು ಹೆಪ್ಪುಗಟ್ಟಿ ಹಿಮವಾದಾಗ ಅದರ ಗಾತ್ರ ವಿಸ್ತಾರವಾಗುತ್ತ ಹೋಗುವುದರಿಂದ ಈ ನೀರಿಗೆ ಮೇಲೆ ಬರಲು ಸಾಧ್ಯವಾಗುವುದಿಲ್ಲ. ಆಗ ಅದು ಝರಿಯ ಪಕ್ಕದ, ಗಡ್ಡೆಗಟ್ಟದಿರುವ ಮಣ್ಣಿನ ಪದರುಗಳಲ್ಲಿ ಸೇರಿಕೊಳ್ಳುತ್ತದೆ. ಸಾಮಾನ್ಯವಾಗಿ ಗಡ್ಡೆಗಟ್ಟದಿರುವ ಮಣ್ಣಿನ ಪದರುಗಳಿರುವುದು ಪರ್ಮಾಫ್ರಾಸ್ಟ್‌ನ ಪದರುಗಳ ಕೆಳಗೆ. ಆದ್ದರಿಂದ ಅಕಸ್ಮಾತ್ತಾಗಿ ಪರ್ಮಾಫ್ರಾಸ್ಟ್‌ಗೆ ಬಹಳ ಶಾಖ ಬಡಿದು ಅದು ಕರಗಿದರೆ ಕೆಳಗಿರುವ ನೀರು ಮೇಲೆ ಪುಟಿಯಲಾರಂಭಿಸುತ್ತದೆ. ಈಗ ಈ ಪರ್ಮಾಫ್ರಾಸ್ಟ್‌ನ ಪದರು ಕರಗಲು ಅದರ ಮೇಲಿರುವ ಕಟ್ಟಡದಲ್ಲಿನ ಶಾಖವೇ ಕಾರಣವಾದರೆ, ಆ ಕಟ್ಟಡದ ನೆಲದಲ್ಲೇ ಭಾವಿ ಬೀಳುತ್ತದೆ.

ಉಷ್ಣತಾಮಾನ -30 ರಿಂದ 60 ಅಂಶಕ್ಕಿಂತ ಕಡಿಮೆಯಾದಾಗ ಹರಿಯುವ ನೀರು ತಕ್ಷಣ ಹೆಪ್ಪುಗಟ್ಟುತ್ತದೆ. ಎಷ್ಟೋ ಬಾರಿ ಮನೆಗಳಲ್ಲೂ ಈ ರೀತಿ ನೀರು ಹೆಪ್ಪುಗಟ್ಟಿ ಹಿಮದ ಪದರುಗಳಾಗುತ್ತವೆ. ಸೈಬೀರಿಯಾದಲ್ಲಿ ಸಾರ್ವಜನಿಕ ಸ್ನಾನದ ಮನೆಯೊಂದರಲ್ಲಿ ಈ ರೀತಿ ಹಿಮ ಹೆಪ್ಪುಗಟ್ಟಿ ಹಿಮದ ಪದರುಗಳುಂಟಾಗತೊಡಗಿದವು. ಮನೆಯ ಮಾಳಿಗೆಯವರೆಗೆ ಇದು ವಿಸ್ತರಿಸಿತು. ಮನೆಯೂ ಹಿಮದಲ್ಲಿ ಮುಚ್ಚಿಹೋಯಿತು. ಕೊನೆಗೆ ಚಳಿಗಾಲ ಮುಗಿದ ನಂತರ ಅದನ್ನು ಅಗೆದು ತೆಗೆದಾಗ ಸ್ನಾನದ ಮನೆಯ ಒಳಗಿನ ಆಕೃತಿಯಂತೇ ಹಿಮ ನಿರ್ಮಾಣವಾಗಿದ್ದು ಕಂಡುಬಂತು.

ಶಾಖ ಬಡಿದು ಪರ್ಮಾಫ್ರಾಸ್ಟ್ ಕರಗದಿದ್ದಲ್ಲಿ ಕೆಳಗಿನ ನೀರಿಗೆ ಮೇಲೆ ಬರಲು ಅವಕಾಶ ಸಿಗುವುದಿಲ್ಲವಷ್ಟೇ. ಸೈಬೇರಿಯಾದ ನದಿಯಲ್ಲೊಮ್ಮೆ ಈ ರೀತಿ ಕೆಳಗೆ ಸಿಲುಕಿಕೊಂಡ ನೀರಿಗೆ ಹೊರ ಹೋಗಲು ಅವಕಾಶ ಸಿಗದೇ, ಒತ್ತಡ ಬಹಳವಾದಾಗ ಮೇಲಿನ ನೆಲ ಸ್ಫೋಟಗೊಂಡು, ನೀರು ಹೊರಬಂತು. ಆ ಸ್ಫೋಟದ ಬಲ ಎಷ್ಟಿತ್ತೆಂದರೆ ಆರು ಅಡಿ ದಪ್ಪ ಹಾಗೂ 60 ಅಡಿಗಳಷ್ಟು ಉದ್ದದ ಹಿಮದ ಶಿಲೆಗಳು ನೂರಾರು ಅಡಿಗಳಷ್ಟು ದೂರ ಸಿಡಿದು ಬಿದ್ದವು.

ಪಳೆಯುಳಿಕೆ-ಶಾಸ್ತ್ರಜ್ಞರಿಗೆ ಹಾಗೂ ಪುರಾತತ್ವ ಶಾಸ್ತ್ರಜ್ಞರಿಗೆ ಪರ್ಮಾಫ್ರಾಸ್ಟ್ ಚಿನ್ನದ ಗಣಿಯಿದ್ದಂತೆ. ಪ್ರಾಚೀನ ಕಾಲದ ಸಸ್ತನಿಗಳು ಪರ್ಮಾಫ್ರಾಸ್ಟ್‌ನ ಒಳಗೆ ಕಂಡುಬಂದಿವೆ. ಮೈ ತುಂಬ ಕೂದಲುಗಳುಳ್ಳ ಒಂದು ಜಾತಿಯ ಸಸ್ತನಿಯ ದೇಹ ಎಷ್ಟು ಚೆನ್ನಾಗಿ ಕಾಯ್ದಿಡಲ್ಪಟ್ಟಿತ್ತೆಂದರೆ ವಿಜ್ಞಾನಿಗಳಿಗೆ ಅದರ ಹೊಟ್ಟೆಯೊಳಗಿದ್ದ ಆಹಾರದ ಕೊನೆಯ ಕಣವನ್ನು ಸಹ ಪತ್ತೆ ಹಚ್ಚಲು ಸಾಧ್ಯವಾಯಿತು. ಬಹುಶಃ ಅದು ಆ ಕೊನೆಯ ಊಟ ಮಾಡಿದ್ದು ಐವತ್ತು ಸಾವಿರ ವರ್ಷಗಳ ಹಿಂದೆ. ಸೈಬೇರಿಯಾದಲ್ಲಿ ಈ ರೀತಿ ಗಡ್ಡೆಗಟ್ಟಿದ ಪ್ರದೇಶದಲ್ಲಿ ಪ್ರಾಚೀನ ಕಾಲದ ಖಡ್ಗಮೃಗವೊಂದು ದೊರೆಯಿತು. ಅದರ ದೇಹ ಕೋಂಚವೂ ಕೆಟ್ಟಿರಲಿಲ್ಲ. ಅಲಸ್ಕಾದಲ್ಲೂ ಅನೇಕ ಸಸ್ತನಿಗಳು ಹಾಗೂ ಇಂದಿನ ತೋಳ, ಕಡವೆಗಳನ್ನು ಹೋಲುವ ಪ್ರಾಚೀನ ಪ್ರಾಣಿಗಳ ದೇಹಗಳು ದೊರೆತಿವೆ. ಇಣಚಿಗಳಂಥ ಪ್ರಾಣಿಗಳ ಬಿಲ, ಗೂಡುಗಳು ಸಹ ಸಾವಿರಾರು ವರ್ಷಗಳ ಹಿಂದೆ ಕಟ್ಟಿದಾಗ ಹೇಗಿದ್ದವೋ ಅದೇ ಸ್ಥಿತಿಯಲ್ಲಿ ದೊರಕಿವೆ. 27 ಜಾತಿಯ ವಿವಿಧ ಸಸ್ಯಗಳು ಲಭ್ಯವಾಗಿವೆ. ಎಷ್ಟೋ ಸಂದರ್ಭಗಳಲ್ಲಿ ಕೇವಲ ಗಿಡಗಳ ಕಾಂಡಗಳ ತುಂಡುಗಳು ಮಾತ್ರ ಉಳಿದಿರುವ ಅರಣ್ಯಗಳೇ ಕಂಡುಬಂದಿವೆ.

ಪರ್ಮಾಫ್ರಾಸ್ಟ್‌ನಿಂದಾವೃತವಾದ ಪ್ರದೇಶದಲ್ಲಿ ನಿರ್ಮಾಣ ಕಾರ್ಯದಲ್ಲಿ ಎಂಜಿನಿಯರುಗಳು ಹೊಸ ಹೊಸ ಪದ್ಧತಿಗಳನ್ನು ಹುಡುಕಬೇಕಾಗುತ್ತದೆ. ರಸ್ತೆಗಳನ್ನು ನಿರ್ಮಿಸುವಾಗ



"ಕಾಪಿ ಹೊಡೀತಿದ್ದಾಗ ಸಿಗ್ಹಾಕ್ಕೊಂಡಿದ್ರು.. ಈಗ ಮುಂದಿನ ಪರೀಕ್ಷೆಗೆ ಶ್ರದ್ಧೆಯಿಂದ ಓದ್ಕೋತಿದಾರೆ.."

ಪರ್ಮಾಫ್ರಾಸ್ಟ್ ಮತ್ತು ರಸ್ತೆಯ ಮಧ್ಯೆ ರಕ್ಷಣಾ ಕವಚವನ್ನು ನಿರ್ಮಿಸಲು ಗರಸು ಒಳ್ಳೆಯ ಸಾಧನವೆಂದು ಕಂಡುಹಿಡಿಯಲಾಗಿದೆ.

ಪರ್ಮಾಫ್ರಾಸ್ಟ್‌ನ ಮೇಲಿನ ತೆಳ್ಳಗಿನ ಪದರು ಕರಗಿದಾಗ ನೆಲದಲ್ಲಿ ತಗ್ಗುದಿನ್ನೆಗಳಾಗುತ್ತವೆಯಷ್ಟೇ. ಈ ಸಮಯದಲ್ಲಿ ನೆಲದಲ್ಲಿ ಹೂಳಲಾಗಿರುವ ಕಂಬಗಳು ಬಿದ್ದು ಹೋಗಬಹುದು. ಆದ್ದರಿಂದ ಮೇಲಿನ ಪದರು ಕರಗಿದಾಗಲೇ ಕಂಬಗಳನ್ನು ಆಳವಾಗಿ ಹೂಳುತ್ತಾರೆ. ಮೇಲಿನ ಪದರಿನೊಂದಿಗೆ ಸಂಪರ್ಕ ಬರುವ ಕಂಬದ ಭಾಗಕ್ಕೆ ಗ್ರೀಸ್ ಹಚ್ಚಿ, ಹಾಳೆಯಿಂದ ಸುತ್ತುತ್ತಾರೆ. ಇದರಿಂದ ಮಣ್ಣು ಕರಗುವುದರಿಂದಲೂ, ಹೆಪ್ಪುಗಟ್ಟುವಿಕೆಯಿಂದ ಕಂಪನವುಂಟಾದಾಗ ಕಂಬಗಳನ್ನು ಕಿತ್ತೊಗೆಯಲು ಮಣ್ಣಿಗೆ ಹಿಡಿತ ಸಿಗುವುದಿಲ್ಲ ಅಥವಾ ಕಂಬಗಳನ್ನು ಸುಮಾರು 50 ಅಡಿಗಳಷ್ಟು ಆಳವಾಗಿ ಹೂಳಿ ಮೇಲೆ 10 ರಿಂದ 20 ಅಡಿಗಳವರೆಗೆ ಅದಕ್ಕಿಂತ ಸ್ವಲ್ಪ ಹೆಚ್ಚಿನ ಸುತ್ತಳತೆಯ ಕಂಬವನ್ನು ಕವಚದಂತೆ ಹಾಕುತ್ತಾರೆ. ಇದರಿಂದ ಕಂಪನವುಂಟಾದಾಗ ಮೇಲಿನ ಕಂಬ ಮೇಲೆ, ಕೆಳಗೆ ಪುಟಿದು ಬೀಳುತ್ತದೆ ಅಷ್ಟೇ.

ಒಳಗಿನ ಕಂಬಕ್ಕೆ ಯಾವುದೇ ಧಕ್ಕೆಯುಂಟಾಗು ವುದಿಲ್ಲ.

ಪರ್ಮಾಫ್ರಾಸ್ಟ್‌ನಲ್ಲಿ ನೀರು ಸರಬರಾಜಿನ ಪೈಪುಗಳನ್ನು ಹಾಕುವಾಗ ಅವುಗಳಲ್ಲಿಯ ನೀರು ಹೆಪ್ಪುಗಟ್ಟದಂತೆ ರಕ್ಷಣಾ ಕ್ರಮಗಳನ್ನು ಕೈಗೊಳ್ಳುತ್ತಾರೆ. ಸಾಮಾನ್ಯವಾಗಿ ಈ ನೀರಿನ ಪೈಪುಗಳ ಮೇಲೆ ಕವಚದಂತೆ ಉಗಿಯ ಪೈಪು ಗಳನ್ನು ಹಾಕುತ್ತಾರೆ. ಅಲಾಸ್ಕಾದಲ್ಲಿ ಹೊಸ ಪದ್ಧತಿಯೊಂದನ್ನು ಬಳಸುತ್ತಾರೆ. ಅಲ್ಲಿ ಪಂಪು ಗಳು ಯಾವಾಗಲೂ ಜಲ ಪರಿಚಲನೆಯಲ್ಲಿ ತೊಡಗಿರುತ್ತವೆ. ನಂತರ ಅದನ್ನು ಬೇರೆ ಬೇರೆ ಪೈಪುಗಳಲ್ಲಿ ಬಿಡುವ ಮುನ್ನ ಬಿಸಿ ಮಾಡು ತ್ತಾರೆ. ಇದರಿಂದ ಆ ನೀರು ಹೆಪ್ಪುಗಟ್ಟುವು ದಿಲ್ಲ. ಜೊತೆಗೆ ನೀರಿನ ಪೈಪುಗಳಿಗೆ ರಕ್ಷಣಾ ಕವಚವನ್ನೊದಗಿಸುವ ಪ್ರಮೇಯವೂ ಇಲ್ಲ.

ಆದರೆ ಈ ರೀತಿ ಗಡ್ಡೆಗಟ್ಟಿದ ಪ್ರದೇಶದಲ್ಲಿ ಕಟ್ಟಡ ನಿರ್ಮಾಣ ಕಾರ್ಯ ಕೈಗೊಳ್ಳುವುದೇ ಕಷ್ಟ ಕರ. ಅಡಿಪಾಯ ಹಾಕಲು ನೆಲವನ್ನು ಅಗೆಯ ಬೇಕಲ್ಲವೆ? ಆದರೆ ಪರ್ಮಾಫ್ರಾಸ್ಟ್‌ನ್ನು ದೊಡ್ಡ ಬುಲ್ಡೋಜರ್‌ಗಳೂ ಭೇದಿಸಲಾರವು. ಆದ್ದರಿಂದ ಮೇಲಿನ ಪದರು ಕರಗಿದಾಗಷ್ಟೆ ನೆಲವನ್ನು ಅಗೆಯುವುದು ಸಾಧ್ಯವಾಗುತ್ತದೆ. ಈ ರೀತಿಯಾಗಿ ಸುಮಾರು ಹತ್ತು ಅಡಿ ಅಗೆ ಯಲು ಮೂರ್‍ನಾಲ್ಕು ತಿಂಗಳುಗಳೇ ಬೇಕಾಗ ಬಹುದು.

ಆರ್ಕಟಿಕ್‌ನಲ್ಲಿ ಭೂಮಿಯ ಮೇಲೆ ಬಿದ್ದ ನೀರು ಇಂಗಿ ಹೋಗುವುದಿಲ್ಲ. ಅದು ಪರ್ಮಾ ಫ್ರಾಸ್ಟ್‌ನ ಅಭೇದ್ಯ ಮೇಲ್ಮೈಯಲ್ಲಿ ಸಂಗ್ರಹ ವಾಗಿರುತ್ತದೆ. (ಒಂದು ವೇಳೆ ನೀರೆಲ್ಲ ಭೂಮಿ ಯೊಳಗೆ ಇಂಗಿಹೋದರೆ ಭೂಮಿಯ ಮೇಲೆ ಮಣ್ಣಿನಲ್ಲಿ ಆರ್ದ್ರತೆಯೇ ಉಳಿಯುವುದಿಲ್ಲ). ಆದ್ದರಿಂದಲೇ ಆರ್ಕಟಿಕ್‌ನಲ್ಲಿ ಜವುಳು ಪ್ರದೇಶಗಳು ಬಹಳ. ಅಲ್ಲಿ ಸಸ್ಯಗಳು ಹುಲು ಸಾಗಿ ಬೆಳೆಯಲೂ ಇದೇ ಕಾರಣ. ಆದರೆ ಜವುಳು ಪ್ರದೇಶಗಳಿಂದಾಗಿ ಅಲ್ಲಿ ಸೊಳ್ಳೆಗಳ ಹಾವಳಿಯೂ ವಿಪರೀತ. ಆರ್ಕಟಿಕ್‌ನಲ್ಲೇನಾ ದರೂ ಉಷ್ಣ ಹವಾಮಾನ ಉಂಟಾದರೆ ಪರ್ಮಾಫ್ರಾಸ್ಟ್ ಸಂಪೂರ್ಣ ಕರಗಿಬಿಡಬಹುದು. ಆಗ ಆ ಪ್ರದೇಶವೆಲ್ಲ ಮರುಭೂಮಿಯಾಗುತ್ತದೆ. ಏಕೆಂದರೆ ಅಲ್ಲಿ ಮಳೆಯ ಪ್ರಮಾಣವೂ ಬಹಳ ಕಡಿಮೆ.

ಪರ್ಮಾಫ್ರಾಸ್ಟ್‌ನಿಂದಾವೃತವಾದ ಪ್ರದೇಶ ಗಳಲ್ಲಿಯ ಅರಣ್ಯಗಳಲ್ಲಿ ಗಿಡಗಳು ಯಾವಾ ಗಲೂ ಅತ್ತಿತ್ತ ಬಹಳ ಓಲಾಡುತ್ತಿರುತ್ತವೆ. ಬಹುಶಃ ಪರ್ಮಾಫ್ರಾಸ್ಟ್‌ನ ಮೇಲಿನ ಪದರಿನ ಕರಗುವಿಕೆ ಮತ್ತು ಹೆಪ್ಪುಗಟ್ಟುವಿಕೆ ಇದಕ್ಕೆ ಕಾರಣವಿರಬಹುದು. ಅರಣ್ಯದಲ್ಲಿರುವ ಪ್ರಾಣಿ ಗಳ ಓಡಾಟದಿಂದ ಪಾಚಿಯಂಥ ರಕ್ಷಣಾ ಕವಚಗಳು ಬೆಳೆಯುವುದು ಕಡಿಮೆಯಾಗುವುದ ರಿಂದ ಸೂರ್ಯ ಕಿರಣಗಳು ನೇರವಾಗಿ ಪರ್ಮಾ ಫ್ರಾಸ್ಟ್‌ನ ಮೇಲೆ ಬಿದ್ದು ಅದನ್ನು ಕರಗಿಸು ತ್ತವೆ. ಗಿಡ ಮರಗಳ ಬೇರುಗಳು ಭೂಮಿ ಯಲ್ಲಿ ಅಗಲವಾಗಿ ಹರಡಿಕೊಂಡಿರುತ್ತವೆ. (ಆಳವಾಗಿ ಬೇರು ಬಿಡುವ ಗಿಡಗಳು ಪರ್ಮಾ ಫ್ರಾಸ್ಟ್‌ನಿಂದಾವೃತವಾದ ಪ್ರದೇಶಗಳಲ್ಲಿ ಬೆಳೆ ಯುವುದಿಲ್ಲ) ಇಂಥ ಮರಗಳು ಅತ್ತಿತ್ತ ಓಲಾ ಡುತ್ತ, ಕೊನೆಗೊಮ್ಮೆ ಬಿದ್ದು ಹೋಗುತ್ತವೆ.

ಗಡ್ಡೆಗಟ್ಟಿದ ಪ್ರದೇಶಗಳಲ್ಲಿ ಬೆಳೆಗಳನ್ನು ಬೆಳೆ ಯಲು ರೈತರು ವಿಶಿಷ್ಟ ವಿಧಾನಗಳನ್ನು ಬಳಸು ತ್ತಾರೆ. ವಸಂತ ಋತುವಿನಲ್ಲಿ ಭೂಮಿಯ ಮೇಲಿನ ಪದರಿನಲ್ಲಿರುವ ಮಣ್ಣಿನಲ್ಲಿ ಬಹಳ ಬೇಗನೇ ಆರ್ದ್ರತೆ ಉಂಟಾಗುತ್ತದೆ. ನೆಟ್ಟ ಬೆಳೆಗೆ ರಕ್ಷಣೆ ಒದಗಿಸಲೆಂದು ಹುಲ್ಲು ಅಥವಾ ಇತರ ರಕ್ಷಣಾ ಬೆಳೆಗಳನ್ನು ನೆಡುವುದು ಇಲ್ಲಿ ಸಾಧ್ಯವಿಲ್ಲ. ಏಕೆಂದರೆ, ಅವು ಬೆಳೆ ಮತ್ತು ಪರ್ಮಾಫ್ರಾಸ್ಟ್‌ಗೆ ಮಧ್ಯೆ ಕವಚವಾಗಿ ಪರ್ಮಾ ಫ್ರಾಸ್ಟ್‌ನ ಮೇಲಿನ ಪದರು ಕರಗಲು ಅಡ್ಡಿ ಯಾಗುತ್ತವೆ. ಇದರಿಂದ ಬೆಳೆಗಳಿಗೆ ನೀರು ದೊರೆಯುವುದಿಲ್ಲ. ಆದರೆ ಈ ರೀತಿ ರಕ್ಷಣೆ ಯಿಲ್ಲದೆ ಬಿಡುವುದರಿಂದಲೂ ಕೆಲ ಸಮಸ್ಯೆ ಗಳು ಉದ್ಭವಿಸುತ್ತವೆ. ಕೃಷಿಗೆಂದು ಉಪಯೋ ಗಿಸುತ್ತಿದ್ದ ಸಮತಟ್ಟಾದ ಭೂಮಿ ಕರಗಿ ಅಲ್ಲಿ ತಗ್ಗು ದಿನ್ನೆಗಳುಂಟಾಗಬಹುದು. ಆಗ ಆ ಭೂಮಿಯಲ್ಲಿ ಸಾಗುವಳಿ ಮಾಡುವುದು ಸಾಧ್ಯ ವಾಗುವುದಿಲ್ಲ.

ಇಲ್ಲಿ ಸರಿಯಾದ ಸಮಯಕ್ಕೆ ಬೀಜಗಳನ್ನು ಬಿತ್ತುವುದು ಬಹಳ ಮುಖ್ಯ. ಬೆಳೆ ತೆಗೆಯುವ ಋತುವಿನ ಅವಧಿ ಬಹಳ ಕಡಿಮೆಯಿರುವುದ ರಿಂದ ಬಿತ್ತಲು ಸ್ವಲ್ಪ ತಡವಾದರೂ ಬೆಳೆ ತೆಗೆ ಯುವ ಅವಕಾಶ ತಪ್ಪಿ ಹೋಗಬಹುದು. ●

15

ಕೆ.ಟಿ. ಪಾಂಡುರಂಗಿ

# ಒಬ್ಬಂಟಿಗ - ಜನಸಂದಣಿ

ಮನುಷ್ಯನು ಸದಾಕಾಲ ಒಬ್ಬಂಟಿಗನಾಗಿದ್ದರೂ ಸುಖವಾಗಿರುವುದಿಲ್ಲ. ಸದಾಕಾಲ ಜನಸಂದಣಿಯಲ್ಲಿದ್ದರೂ ಸುಖವಾಗಿರುವುದಿಲ್ಲ. ಒಂದು ಕಾಲದಲ್ಲಿ ಗುಹೆಗಳಲ್ಲಿ ಒಬ್ಬಂಟಿಗರಾಗಿರುವುದೇ ಆದರ್ಶಮಯ ಜೀವನ ಎಂಬ ನಂಬುಗೆಯಿತ್ತು. ಇತ್ತೀಚೆಗೆ ಸದಾಕಾಲ ಜನಸಂದಣಿಯಲ್ಲಿರುವುದೇ ದೊಡ್ಡಸ್ತಿಕೆ ಎಂಬ ಕಲ್ಪನೆ ಪ್ರಬಲವಾಗಿದೆ. ಆದರೆ ಇವೆರಡೂ ಮನುಷ್ಯನನ್ನು ಸುಖಿಯನ್ನಾಗಿ ಮಾಡುವುದಿಲ್ಲ.

ಒಬ್ಬಂಟಿಗತನ ಅಥವಾ ಜನಸಂದಣಿ ಕೇವಲ ಹತ್ತಿರದಲ್ಲಿ ಯಾರೂ ಇಲ್ಲ ಅಥವಾ ಅನೇಕರು ಇರುವರು ಎಂಬುದನ್ನು ಮಾತ್ರ ಅವಲಂಬಿಸಿರುವುದಿಲ್ಲ. ಆದರೆ ಮಾನಸಿಕವಾಗಿ ಬೇರೆಯವರಿಂದ ಪ್ರತ್ಯೇಕಿಸಿಕೊಳ್ಳುವುದು ಅಥವಾ ಮಾನಸಿಕವಾಗಿ ಬೇರೆ ಅನೇಕರ ಚಿಂತೆ ಮಾಡುವುದು ಇದನ್ನೂ ಅವಲಂಬಿಸಿರುತ್ತದೆ. ಕೆಲವರಿಗೆ ಬೇರೆಯವರು ತಮ್ಮ ಮನೆಗೆ ಬಂದರೆ, ತಮ್ಮ ಜೊತೆಗಿದ್ದರೆ, ತಮ್ಮೊಡನೆ ಮಾತನಾಡಿದರೆ ತಾವು ಕೈಕೊಂಡ ಕಾರ್ಯಗಳಲ್ಲಿ ಭಾಗಿಯಾಗತೊಡಗಿದರೆ ಸೇರುವುದಿಲ್ಲ. ಅವರೊಡನೆ ನಿಷ್ಠುರತೆಯಿಂದ, ಉದಾಸೀನಭಾವದಿಂದ ನಡೆದುಕೊಂಡು ಅವರು ಬರದಂತೆ ಮಾಡುವರು. ಮನೆಯಲ್ಲಿಯಂತೂ ಯಾರೊಡನೆಯೂ ಹೆಚ್ಚು ಮಾತನಾಡದೆ ತಮ್ಮನ್ನು ಪ್ರತ್ಯೇಕಿಸಿಕೊಂಡಿರುವರು. ಇಂಥವರಲ್ಲಿ ಎರಡು ವರ್ಗಗಳಿರುವವು. ೧. ಯಾವುದಾದರೊಂದು ಜ್ಞಾನದ ಕ್ಷೇತ್ರ, ಕಲೆ ಅಥವಾ ಇನ್ನಿತರ ರಚನಾತ್ಮಕ ಕಾರ್ಯಕ್ಷೇತ್ರದಲ್ಲಿ ತಲ್ಲೀನರಾಗಿದ್ದು, ಅದಕ್ಕೇ ಜೀವನವನ್ನು ಮೀಸಲಾಗಿಟ್ಟು ಒಬ್ಬಂಟಿಗರಾಗಿರುವವರು. ಇದು ನಿಜವಾಗಿ ನೋಡಿದರೆ ಒಬ್ಬಂಟಿಗತನವಲ್ಲ. ಆ ಜ್ಞಾನದ ಕ್ಷೇತ್ರ, ಆ ಕಲೆ ಅಥವಾ ಆ ಕಾರ್ಯಕ್ಷೇತ್ರವೇ ಇವರ ಸಂಗಾತಿ. ಈ ಕ್ಷೇತ್ರಗಳಲ್ಲಿ ಹಿಂದೆ ಕಾರ್ಯ ಮಾಡಿದವರು ಇವರ ಸಂಗಾತಿ. ಎಲ್ಲಿಯೋ ದೂರದಲ್ಲಿದ್ದರೂ ಈಗ ಈ ಕ್ಷೇತ್ರಗಳಲ್ಲಿ ಕಾರ್ಯ ಮಾಡುಪವರೂ ಇವರ ಸಂಗಾತಿ. ಆದ್ದರಿಂದ ಇವರು ನಮ್ಮ ಕಣ್ಣಿಗೆ ಮಾತ್ರ ಒಬ್ಬಂಟಿಗರು. ಆದರೆ ತಮ್ಮ ಕ್ಷೇತ್ರದ ಸಂಗಾತಿಗಳನ್ನು ಪಡೆದವರು. ೨. ಇನ್ನೊಂದು ವರ್ಗ ಯಾರ ಸ್ವಭಾವವೂ ಸೇರದವರು, ಸುಪ್ತವಾದ ಅಹಂಕಾರವಿದ್ದವರು, ತಾವು ಇತರರಿಗಿಂತ ಕಡಿಮೆ ಎಂಬ ಕೀಳರಿಮೆ ಇದ್ದವರು, ಸುಪ್ತವಾದ ಅಸೂಯೆಯಿದ್ದವರು. ಇವರಿಗೆ ಒಬ್ಬಂಟಿಗತನ ಒಂದು ರೀತಿಯಿಂದ ತಮ್ಮ ಅಶಕ್ತಿಯನ್ನು ಮುಚ್ಚಿಕೊಳ್ಳುವ ಸಾಧನವಾಗಿರುತ್ತದೆ.

ಇನ್ನು ಯಾವಾಗಲೂ ಜನಸಂದಣಿಯನ್ನೂ, ಗದ್ದಲವನ್ನೂ ಅಪೇಕ್ಷಿಸುವವರಲ್ಲಿಯೂ ಎರಡು ವರ್ಗಗಳಿರುತ್ತವೆ. ೧. ಯಾವ ಕೆಲಸವನ್ನೂ ಕೇವಲ ಒಬ್ಬಂಟಿಗರಾಗಿ ಮಾಡದೆ ನಾಲ್ಕು ಜನ ಸೇರಿಸಿಕೊಂಡು ಮಾಡುವ ಸ್ವಭಾವದವರು. ಸಹಕಾರ ಕೊಡುವವರು, ಸಹಕಾರ ಪಡೆಯುವವರು ತಮ್ಮ ಕಾರ್ಯಕ್ಕೆ ಜನರ ಮೆಚ್ಚುಗೆ, ಜನರ ಪ್ರೀತಿ ಇರಬೇಕು ಎಂದು ಅಪೇಕ್ಷಿಸುವವರು. ತಾವು ಮತ್ತು ತಮ್ಮ ಕಾರ್ಯ ಅನೇಕರಿಗೆ ಪ್ರಯೋಜನವಾಗಬೇಕು ಎಂಬ ಅಭಿಲಾಷೆ, ಉತ್ಸಾಹ ಇರುಪವರು. ೨. ಇನ್ನೊಂದು ವರ್ಗ ನಿಜವಾದ ಕಾರ್ಯ ಮಾಡದೆ ಪ್ರಚಾರವನ್ನು ಅಪೇಕ್ಷಿಸುವವರು, ಪೊಳ್ಳು ಆಶ್ವಾಸನೆಗಳಿಂದ ಜನರನ್ನು ಹುರಿದುಂಬಿಸುವವರು, ಜನ ಮರುಳೋ ಜಾತ್ರೆ ಮರುಳೋ ಎಂಬ ಮನೋಧರ್ಮವನ್ನು ಉಪಯೋಗಿಸಿಕೊಳ್ಳುವ ಜಾಣ್ಮೆಯಿದ್ದವರು.

ಕೆಲವೇ ಸಂದರ್ಭಗಳಲ್ಲಿ ಒಂದು ಆದರ್ಶ ಅಥವಾ ಒಂದು ನಿಷ್ಠೆ ಸಹಸ್ರಾರು ಜನರನ್ನು ಆಕರ್ಷಿಸಲು ಸಮರ್ಥವಾಗುವುದು.

ಹೀಗೆ ಒಬ್ಬಂಟಿಗರಾಗಿ ಇರುವ ಮನೋಧರ್ಮ ಅಥವಾ ಜನಸಂದಣಿಯಲ್ಲಿ ಇರುವ ಮನೋಧರ್ಮ ಇವೆರಡರಲ್ಲಿ ಒಂದನ್ನೇ ಅತಿಯಾಗಿ ಪಡೆದವರು ಇರುವುದು ವಿರಳ. ಶ್ರೀಸಾಮಾನ್ಯನು ಎರಡನ್ನೂ ಸ್ವಲ್ಪ ಮಟ್ಟಿಗೆ ಅಪೇಕ್ಷಿಸುವನು. ಅವನಿಗೆ ಕೆಲಮಟ್ಟಿಗೆ ಜನಸಂದಣಿ, ಜನಪ್ರಿಯತೆಗಳೂ ಬೇಕು. ಕೆಲಮಟ್ಟಿಗೆ ಏಕಾಂಗಿತನವೂ ಬೇಕು. ತನ್ನ ವೈಯಕ್ತಿಕ ವಿಷಯಗಳಲ್ಲಿ ಜನಪ್ರಿಯತೆ, ಜನ ಸಂಪರ್ಕ ಬೇಕು. ಇವೆರಡರ ಮಧುರ ಸಮನ್ವಯವೇ ಶ್ರೀಸಾಮಾನ್ಯನನ್ನು ಸುಖಿಯಾಗಿ ಮಾಡುವುದು.

# ಕಾಶ್ಮೀರದ ಸಹೃದಯಿ ಬ್ರಹ್ಮಪುತ್ರರು

**ಶೇಖ ಅಬ್ದುಲ್ಲಾರ ಆತ್ಮಚರಿತ್ರೆಯಿಂದ**

ಸಂಗ್ರಹ:
**ಆದ್ಯ ರಾಮಾಚಾರ್ಯ**

ಕಾಶ್ಮೀರದ ರಾಜಕೀಯ ಜೀವನದಲ್ಲಿ ಬಹು ಸಂಖ್ಯಾತ ಮುಸಲ್ಮಾನರಿಗಿಂತ ಅಲ್ಪ ಸಂಖ್ಯಾತ ಬ್ರಾಹ್ಮಣ ಸಮಾಜದ ಪ್ರಭಾವ ಸಾಕಷ್ಟಿದೆ ಯೆಂದು ಇತಿಹಾಸ ಹೇಳುತ್ತದೆ. ಮೊಗಲ್ ದೊರೆ ಅಹಮ್ಮದ ಶಹಾನ ದರ್ಬಾರಿನಲ್ಲಿ ಅಲ್ಪ ಸಂಖ್ಯಾತ ಬ್ರಾಹ್ಮಣನೊಬ್ಬ ಪ್ರಭಾವಶಾಲಿ ಯೆನಿಸಿದ್ದ. ಆತನೇ ಜಯರಾಮ ಭಾನ್. ತುಂಬ ಮಹಾತ್ವಾಕಾಂಕ್ಷಿಯಾಗಿದ್ದ ಆತ ತನ್ನ ಕುಟುಂಬದವರನ್ನೆಲ್ಲ 'ಪಂಡಿತ'ರೆಂದು ಕರೆಯು ವಂತೆ ರಾಜಾಜ್ಞೆ ಹೊರಡುವ ಹಾಗೆ ನೋಡಿ ಕೊಂಡ. ಅಂದಿನಿಂದ ಅಲ್ಪಸಂಖ್ಯಾತರಲ್ಲೇ ಈ ಪಂಡಿತರು ಸರ್ವಶ್ರೇಷ್ಠರೆನ್ನಿಸಿಕೊಳ್ಳತೊಡಗಿ ದರು. ಇವರು ಕರ್ಮಠ ಶೈವ ಬ್ರಾಹ್ಮಣರು. ಆದರೂ ಮುಸಲ್ಮಾನರೊಂದಿಗೆ ತುಂಬ ಸಾಮರಸ್ಯದ ಜೀವನ ನಡೆಸಿದರು. ಅದಕ್ಕೊಂದು ಉದಾಹರಣೆ ಲಲ್ಲೇಶ್ವರಿ ದೇವಿಯ ಸಮಾಧಿ: ಒಂದುಗಳು ತಮ್ಮ ದೇವಿಯದೆಂದು ಪೂಜಿಸಿದರೆ ಮುಸಲ್ಮಾನರು ಇಸ್ಲಾಂ ಸಂತಳೊಬ್ಬಳದೆಂದು ಇಲ್ಲಿ ನಡೆದು ಕೊಳ್ಳುತ್ತಾರೆ.

ಕಾಶ್ಮೀರದ ಅನೇಕ ಹಿರಿಯ ಮುಸ್ಲಿಂ ನಾಯಕರು, ಪ್ರಸಿದ್ಧ ಪುರುಷರು ಈ ಅಲ್ಪ ಸಂಖ್ಯಾತ ಬ್ರಾಹ್ಮಣ ಮೂಲದವರೇ ಎಂದೂ ಹೇಳಲಾಗುತ್ತದೆ. ಕವಿ ಇಕಬಾಲರು ಇಂಥವರ ಲ್ಲೊಬ್ಬರು. ಅವರ ಪೂರ್ವಜರೆಲ್ಲ ಸೋಮ ನಾಥೀ ಪಂಥದ ಬ್ರಾಹ್ಮಣರು.

ಈ ಕುರಿತು ಬರೆದವರು ಕಾಶ್ಮೀರದ ಹುಲಿ ಶೇಖ ಅಬ್ದುಲ್ಲಾ. ಉರ್ದುವಿನಲ್ಲಿ ಅವರು ಬರೆದ ಆತ್ಮಚರಿತ್ರೆಯ 883ನೆಯ ಪುಟದಲ್ಲಿ "ಸಹೃದಯಿ ಬ್ರಹ್ಮಪುತ್ರರು" ಎಂಬುದಾಗಿ ಸಂಬೋಧಿಸಿ ಕಾಶ್ಮೀರದ ಈ ಅಲ್ಪ ಸಂಖ್ಯಾತರ ಕುರಿತು ವಿವರಿಸಿದ್ದಾರೆ.

ನಾಲ್ಕು ತಲೆಮಾರುಗಳ ಹಿಂದೆ ತಮ್ಮವರು ಕಾಶ್ಮೀರಿ ಬ್ರಾಹ್ಮಣರಾಗಿದ್ದರಿಂದ ಆ ರಕ್ತ ತಮ್ಮ ಮೈಯಲ್ಲಿನ್ನೂ ಸ್ವಲ್ಪ ಹರಿಯುತ್ತಿದೆ, ಹೀಗಾಗಿ ಜೀವನದುದ್ದಕ್ಕೂ ತಮಗೆ ಆ ಸಮಾಜದ ಸಂಬಂಧ ಬರುವಂತಾಗಿಬ. ಕೆಲವು ಬಾರಿ ಕಟು ಅನುಭವಗಳಾದರೂ ಹಲವು ಬಾರಿ ಮಧುರ ಪ್ರಸಂಗಗಳೂ ಜರುಗಿವೆ. ಆ ಸಮಾಜದವರ ಬುದ್ಧಿಮತ್ತೆ, ಕಾರ್ಯಕೌಶಲ ಮತ್ತು ಸೌಂದರ್ಯ ಗಳ ಬಗ್ಗೆ ಎರಡು ಮಾತೇ ಇಲ್ಲ ಎಂದು ಶೇಖ ಅಬ್ದುಲ್ಲಾ ಆತ್ಮಚರಿತ್ರೆಯಲ್ಲಿ ಹೇಳಿದ್ದಾರೆ.

"ಹದಿನಾಲ್ಕನೆಯ ಶತಮಾನದಿಂದಲೇ ಕಾಶ್ಮೀರದಲ್ಲಿ ಮುಸಲ್ಮಾನರ ಆಧಿಪತ್ಯ ಪ್ರಾರಂಭವಾಯಿತು. ಇದು ಖಡ್ಗಬಲ ದಿಂದಾದ ಪ್ರಾಬಲ್ಯವೇನಲ್ಲ. ಬೌದ್ಧ-ಹಿಂದೂ ಗಳಲ್ಲಿಯ ಅಂತಃಕಲಹ ಇದಕ್ಕೆ ಕಾರಣ. ಮುಂದೆ ಸೂಫಿ ಸಂತರಿಂದಾದ ಕಾರ್ಯ ಅವಿಸ್ಮರ ಣೀಯ. ಹಿಂದುಗಳಲ್ಲಿಯ ಮೇಲು- ಕೀಳುಗಳ ಭೇದವೂ ಮತಾಂತರಕ್ಕೊಂದು ಮುಖ್ಯ ಕಾರಣ. ಹೀಗಾಗಿ ಕಾಶ್ಮೀರದಲ್ಲಿ ಇಸ್ಲಾಂ ಧರ್ಮ ಖಡ್ಗಬಲದಿಂದ ಬೆಳೆದಿದೆ ಎಂದು ಹೇಳಿದರೆ ಅದು ಇತಿಹಾಸಕ್ಕೆ ಅಪಚಾರ ಬಗೆ ದಂತೆ. ನಾನು ಆ ಮತದವನಾದ್ದರಿಂದ ಹೀಗೆ ಬರೆಯುತ್ತಿದ್ದೇನೆಂದೇನಲ್ಲ. ಮತಾಂತರಕ್ಕೆ ಕೆಲ ಪ್ರಮಾಣದಲ್ಲಿ ಬಲಾತ್ಕಾರ ನಡೆದಿರಬಹುದು. ಸುಲ್ತಾನ ಸಿಕಂದರ ಶಹಸ ಕಾಲದಲ್ಲಿ ಹಿಂದು ಗಳ ಮೇಲೆ ಸಾಕಷ್ಟು ದೌರ್ಜನ್ಯಗಳಾಗಿವೆ. ಆದರೆ ಇದಕ್ಕೆಲ್ಲ ಆತನ ವಜೀರನೇ ಕಾರಣ. ಆತ ಮೂಲತಃ ಬ್ರಾಹ್ಮಣ -ಸೋಹಾ ಭಟ್ಟ ಎಂದಾತನ ಹೆಸರು. ಮತಾಂತರ ಹೊಂದಿ

ಮುಸಲ್ಮಾನನಾಗಿ ಸೈಪುಧ್ವೀನನಾದ. ಹಿಂದೂ ದೇವಾಲಯಗಳನ್ನೆಲ್ಲ ನಾಶಮಾಡಿದ. ಈ ಕೋಲಾಹಲದಿಂದ ಬ್ರಾಹ್ಮಣ ಕುಟುಂಬಗಳು ದೇಶತ್ಯಾಗ ಮಾಡಿದವು. ಹೀಗಾಗಿ ಸಿಕಂದರ ಶಹನಿಗೆ ಮೂರ್ತಿ ಭಂಜಕನೆಂಬ ಹೆಸರು ಬರುವಂತಾಯಿತು.

"ಆದರೆ ಸಿಕಂದರನ ಮರಣಾನಂತರ ಸಿಂಹಾಸನವನ್ನೇರಿದ ಜೈನುಲ್ ಅವಿಲಿನಾ ಎಂಬಾತ ತನ್ನ ತಂದೆಯ ಕುಟಿಲ ಮಂತ್ರಿಯಿಂದಾದ ಅನ್ಯಾಯಗಳ ನಿವಾರಣೆಗಾಗಿ ಎಲ್ಲ ಪ್ರಯತ್ನಗಳನ್ನೂ ಮಾಡಿದ. ಹೀಗಾಗಿ ಉದಾರಮತವಾದಿ ಎಂಬ ಕೀರ್ತಿಗೆ ಪಾತ್ರನಾದ. ಅಕಬರ ಬಾದಶಹನಿಗಿಂತ ಮೊದಲೇ ಇಂಥ ಕೆಲಸ ಮಾಡಿದ ಶ್ರೇಯಸ್ಸು ಕಾಶ್ಮೀರದ ರಾಜ ಸಿಂಹಾಸನಕ್ಕೆ ಸಲ್ಲುತ್ತದೆ. ದೇಶಾಂತರ ಹೋದವರೆಲ್ಲ ಕಾಶ್ಮೀರಕ್ಕೆ ಮರುಳುವಂತ ಮಾಡಿದ ಜೈನುಲ್ ಹಿಂದುಗಳೊಂದಿಗೆ ತುಂಬ ಆತ್ಮೀಯವಾಗಿ ನಡೆದುಕೊಂಡ. ಹಿಂದುಗಳು ಪ್ರವಚನ ನಿರತರಾದಾಗ ತಾನೂ ಹಣೆಗೆ ಗಂಧವನ್ನಿಟ್ಟುಕೊಂಡು ಅದನ್ನು ಆಲಿಸುತ್ತಿದ್ದ. ಗೋವಧೆಯನ್ನು ಕಾಶ್ಮೀರದಲ್ಲಿ ಪ್ರತಿಬಂಧಿಸಿದ ಜೈನುಲ್ ಬಲಾತ್ಕಾರದಿಂದ ಮತಾಂತರಗೊಂಡವರು ಮರಳಿ ಸ್ವಧರ್ಮ ಸೇರುವ ಅವಕಾಶವನ್ನು ಮಾಡಿಕೊಟ್ಟ. ಈತನ ಕಾಲದಲ್ಲಿ ಸರ್ವ ಧರ್ಮಗಳಿಗೂ ಸಮಭಾವನೆ ಮೂಡುವಂತಾಯಿತು" ಎನ್ನುತ್ತಾರೆ ಶೇಖ ಅಬ್ದುಲ್ಲಾ.

"ಕಾಶ್ಮೀರದ ಪಂಡಿತರು ಕಾಲದ ಬದಲಾವಣೆಯನ್ನರಿತು ಪಾರ್ಶಿ ಭಾಷೆಯನ್ನು ಕರಗತ ಮಾಡಿಕೊಂಡರು. ಆಗ ಈ ಪಂಡಿತರೆಲ್ಲ ಬಹುಸಂಖ್ಯೆಯಲ್ಲಿ ಮೊಗಲರ ಚಾಕರಿಗೆ ನಿಂತರು. ಆದ್ದರಿಂದ ಕಾಶ್ಮೀರೀ ಬ್ರಾಹ್ಮಣರಿಗೆ ಅಂದಿನಿಂದಲೇ ರಾಜಕೀಯ ಕ್ಷೇತ್ರದಲ್ಲಿ ಅನುಭವ ದೊರೆಯುವಂತಾಯಿತು. ಕಾಶ್ಮೀರದಲ್ಲಿ ಆದಿತ್ಯ ಭಟ್ಟನೆಂಬಾತ ಸಾಕಷ್ಟು ಪ್ರಭಾವಿ ವ್ಯಕ್ತಿ ಎನಿಸಿದ್ದ. ನೂರ್ ಜಹಾನಳ ಅಂಗರಕ್ಷಕ ಅಧಿಕಾರಿ ನೆಹರೂ ಕುಟುಂಬದವನು. ಮೊಹಬ್ಬತ ಖಾನನ ಬಂಡಾಯದಲ್ಲಿ ಜಹಾಂಗೀರ ಮತ್ತು ನೂರ್ ಜಹಾನರನ್ನು ಸುರಕ್ಷಿತವಾಗಿ ಪಾರು ಮಾಡಿದಾತನೂ ಈತನೆ.

"ಔರಂಗಜೇಬನ ಆಡಳಿತದ ಸಮಯದಲ್ಲಿ ಕಾಶ್ಮೀರದ ಮಹೇಶ ಶಂಕರದಾಸ ಪಂಡಿತ ಎಂಬಾತ ದೊಡ್ಡ ಹುದ್ದೆಯಲ್ಲಿದ್ದ. ಪಾರ್ಶಿ ಭಾಷೆಯಲ್ಲಿ ಅಸಾಮಾನ್ಯ ಪಂಡಿತನೂ ಅವನಾಗಿದ್ದ. ಅಹ್ಮದ್ ಶಹಾ ಅಬ್ದಾಲಿಯ ಕಾಲದಲ್ಲಿ ಈ ಭಾಗದ ಮೇಲೆ ಅಫಘಾನರ ಅಧಿಕಾರ ಪ್ರಾರಂಭವಾಯಿತು. ಆಗ ಕಾಶ್ಮೀರದ ಸುಭೇದಾರನಿಗೆ ಕೈಲಾಸನಾಥ ಪಂಡಿತ ಮತ್ತು ದಿಲಾರಾಮು ಪಂಡಿತ ಎಂಬಿಬ್ಬರು ಸಲಹೆಗಾರರಾಗಿದ್ದರು. ಒಂದು ಸಲ ಸುಭೇದಾರನ ಪರವಾಗಿ ದಿಲಾರಾಮನಿಗೆ ಕಾಬೂಲಿನ ದರಬಾರಿನಲ್ಲಿ ಹಾಜರಾಗಬೇಕಾದ ಸಂದರ್ಭ ಒದಗಿತು. ಆಗ ಆತನ ಹಣೆಯ ಮೇಲೆ ಶ್ರೀಗಂಧದ ಚಿನ್ಹೆಯಿತ್ತು. ಅದನ್ನು ಕಂಡ ತೈಮೂರಶಹ ಕಡು ಕೋಪದಿಂದ ಕೇಳಿದ.

"ನಿನ್ನ ಹಣೆಯ ಮೇಲಿರುವ ಈ ಚಿನ್ಹೆ ಏನು?"

"'ಹುಜೂರ್, ದೇವನೊಬ್ಬನೇ ಎಂಬುದರ ಸಂಕೇತ."

"ನಿನ್ನ ಕಪೋಲಗಳ ಮೇಲೆ ಅಂಟಿಸಿಕೊಂಡ ಚಿನ್ಹೆಯೇನು?'

"ಅನ್ನದಾತಾ, ಮಹಮ್ಮದೀಯ ಧರ್ಮದಲ್ಲಿ ಯಾವುದೇ ವಿಷಯವನ್ನು ನಿರ್ಧರಿಸಬೇಕಾದರೂ ಎರಡು ಸಾಕ್ಷಿಗಳಂತೂ ಬೇಕೇ ಬೇಕು. ಆದ್ದರಿಂದ ದೇವನೊಬ್ಬನೇ ಎಂದು ಸಾರಲು ಬೇಕಾದ ಸಾಕ್ಷಿ ರೂಪದ ಚಿನ್ಹೆಗಳಿವು."

"ನಿನ್ನ ಕೊರಳಿಗೂ ಆ ಚಿನ್ಹೆಯಿದೆಯಲ್ಲ, ಅದೇನು?"

"ಹುಜೂರ್, ನನ್ನ ಮಾತಿನಲ್ಲಿ ಸತ್ಯಾಂಶ ವಿಲ್ಲ ಎಂದು ತಮಗನಿಸಿದಲ್ಲಿ ತಾವು ನನ್ನ ಕತ್ತನ್ನೇ ಹಾರಿಸಬಹುದು. ಅದಕ್ಕಾಗಿಯೇ ಈ ಚಿನ್ಹೆ."

ಆತನ ಮಾತುಗಳಿಂದ ಸಂತುಷ್ಟನಾದ ತೈಮೂರ ಶಹ ದಿಲಾರಾಮು ಪಂಡಿತನ ತಲೆಯ ಮೇಲೆ ಮುತ್ತು ರತ್ನಗಳ ಮಳೆಗರಿಸಿ ಸತ್ಕರಿಸಿದನಂತೆ."

ಹೀಗೆ ಕಾಶ್ಮೀರದ ಬ್ರಾಹ್ಮಣರನ್ನು ಬಾಯ್ತುಂಬಾ ಹೊಗಳಿದ ಶೇಖ ಅಬ್ದುಲ್ಲಾ ಆ ಸಮಾಜದ ಕೆಲವು ಲೋಪದೋಷಗಳನ್ನು ಎತ್ತಿ ತೋರಿಸುವುದಕ್ಕೂ ಹಿಂಜರಿದಿಲ್ಲ. ●




## ನೈಸರ್ಗಿಕ ಬೇಸಾಯದ ಹರಿಕಾರ

# ಮಸನೊಬು ಫುಕುವೋಕಾ

ತಂತ್ರಜ್ಞತೆ ಮಾನವನಿಗೆ ವರವೆಂದು ನಂಬಿದ್ದೇವೆ. ಇದೇ ತಾಂತ್ರಿಕತೆಯೇ ಮಾನವನಿಗೆ ಮಾರಕವಾಗಿ ಅವನ ಧೃತಿಗೆಡಿಸುತ್ತದೆ ಎಂಬುವುದನ್ನು ಈಗ ನಂಬಲೇಬೇಕಾಗಿದೆ. ಇಡೀ ಜಗತ್ತನ್ನೇ ವ್ಯಾಪಿಸಿದೆ ಈ ತಂತ್ರಜ್ಞಾನದ ಜ್ವರ. 21ನೇ ಶತಮಾನಕ್ಕೆ ಕಾಲಿಡುತ್ತಿದ್ದೇವೆ ಎಂಬ ಉತ್ಸುಕತೆಯಲ್ಲಿ ಇಡೀ ಮನುಕುಲ 'ತಾಂತ್ರಿಕತೆಯೇ ಜೀವನ' ಎಂದು ಸಾಧಿಸಲು ಹೊರಟಿದೆ. ಇದೇ ಗುಂಗಿನಲ್ಲಿರುವ ನಾವು ಪ್ರಕೃತಿಯ ಮೂಲ ತತ್ವವನ್ನೇ ಮರೆತು ಪ್ರಕೃತಿಯೊಡನೆ ಸಮರವನ್ನೇ ನಡೆಸಲು ಹೊರಟಿದ್ದೇವೆ. ಇದು ಪಟ್ಟಣ ಪ್ರದೇಶಗಳಿಗೇ ಸೀಮಿತವಾದ ಮಾತಲ್ಲ, ಭಾರತದ ಬೆನ್ನೆಲುಬು ಎನಿಸಿಕೊಂಡಿರುವ ರೈತನಿಗೂ ಸಂಬಂಧಿಸಿದೆ. ಪ್ರಕೃತಿಯನ್ನು ನಮ್ಮ ಅಧೀನದಲ್ಲಿಟ್ಟುಕೊಳ್ಳಬಹುದೆಂಬ ಧೋರಣೆ ನಮ್ಮದಾಗಿದೆ. ನಿಸರ್ಗದ ರಹಸ್ಯವನ್ನರಿತೂ ಅದಕ್ಕೆ ವ್ಯತಿರಿಕ್ತವಾಗಿ ಹೋಗುವುದು ಸಲ್ಲದೆಂಬ ಮಸನೊಬು ಫುಕುವೋಕಾನ ಮಾತಿನಲ್ಲಿ ಎಷ್ಟು ಜನರಿಗೆ ವಿಶ್ವಾಸವಿದೆ?.

ಮಸನೊಬು ಫುಕುವೋಕಾ ಜಪಾನಿನ ಕೃಷಿ ವಿಜ್ಞಾನಿ. ತಂತ್ರಜ್ಞಾನದಲ್ಲಿ ಅಂತದೃಷ್ಟಿಯ ಅಭಾವವಿದೆ ಎಂಬುದನ್ನು ಅರಿತವ. ಪ್ರಕೃತಿಯನ್ನು ವಿಕೃತಗೊಳಿಸದೇ ಬೆಳೆ ಬೆಳೆಯುವುದನ್ನು ತಿಳಿದವ. ನೈಸರ್ಗಿಕ ಬೇಸಾಯದ ಕರ್ತೃವಾದಿ. ಇತ್ತೀಚೆಗೆ ಇದಕ್ಕಾಗಿ ಈ ಪ್ರಕೃತಿ

ಪ್ರೇಮಿಗೆ ಪ್ರತಿಷ್ಠಿತ ಮ್ಯಾಗಾಸೆಸ್ ಪ್ರಶಸ್ತಿಯೂ ಪ್ರಾಪ್ತವಾಗಿದೆ.

ಇವನ ಬೇಸಾಯ ಸರಳ. ಭೂಮಿ ಉಳುವ ಹಾಗಿಲ್ಲ, ಬಿತ್ತನೆಯಿಲ್ಲ, ರಸಗೊಬ್ಬರಗಳ ಬಳಕೆಯಿಲ್ಲ, ಕೀಟ ನಾಶಕಗಳಿಲ್ಲ, ಕಳೆ ಕೀಳುವುದಿಲ್ಲ. ತಂತ್ರಜ್ಞತೆಯ ಉಪಯೋಗವೇ ಇಲ್ಲವಾದರೂ ಜಪಾನಿನ ಇತರ ರೈತರ ಬೆಳೆಗಿಂತ ಅಧಿಕ ಸಾರವತ್ತಾದ ಪೌಷ್ಟಿಕ ಫಸಲನ್ನು ಹೆಚ್ಚು ಪ್ರಮಾಣದಲ್ಲಿ ಪಡೆಯುತ್ತಿದ್ದಾನೆ. ಇದನ್ನು ಕೇಳಿದೊಡನೆ ನಮ್ಮ ರೈತರಿಗೆ ಆಶ್ಚರ್ಯವಾಗುವುದರಲ್ಲಿ ಸಂದೇಹವಿಲ್ಲ.

ಫುಕುವೋಕಾನಿಗೆ ನಿಸರ್ಗದ ಮರ್ಮ ಅರಿವಾದುದು ಹೀಗೆ. ಹುಲ್ಲುಗಾವಲೊಂದರ ಆಸುಪಾಸಿನಲ್ಲಿ ಹೆಜ್ಜೆಹಾಕುತ್ತಿದ್ದಾಗ ಕಣ್ಣಿಗೆ ಒಂದು ದೃಶ್ಯ ಬಿದ್ದಿತು. ಹಲವಾರು ವರ್ಷಗಳಿಂದ ಉಳುಮೆ ಕಾಣದ ಹುಲ್ಲು ಮತ್ತು ಕಳೆ ತುಂಬಿದ್ದ ಭೂಮಿಯ ಮಧ್ಯೆ ಆರೋಗ್ಯಕರ ಭತ್ತದ ಸಸಿಗಳು ತಲೆಯೆತ್ತಿ ನಿಂತಿದ್ದವು. ಇದನ್ನು ಕಂಡ ಅವನಿಗೆ ಭತ್ತದ ಬೆಳೆಗೆ ನೀರಿನ ಪ್ರವಾಹದ ಅಗತ್ಯವಾಗಲೀ, ಉಳುವ ಅವಶ್ಯಕತೆ ಯಾಗಲಿ ಇಲ್ಲವೆಂದು ಮನವರಿಕೆಯಾಯಿತು.

ಸೂಕ್ಷ್ಮ ಜೀವಶಾಸ್ತ್ರದಲ್ಲಿ ತರಬೇತಿ ಪಡೆದು ಸಸ್ಯರೋಗಗಳ ವಿಚಾರವಾಗಿ ಪರಿಣಿತನಾದ ಫುಕುವೋಕಾ ಕೇವಲ 25 ವರ್ಷ ವಯಸ್ಸಿನ ಯುವಕನಾಗಿದ್ದಾಗಲೇ ಈಗಿರುವ ಪ್ರಚಲಿತ ಆಧುನಿಕ ಬೇಸಾಯ ಪದ್ಧತಿಯ ಮೂಲ ತತ್ತ್ವಗಳನ್ನು ಪ್ರಶ್ನಿಸಲು ಪ್ರಾರಂಭಿಸಿದ. ಯಾಂತ್ರಿಕ ಜೀವನವನ್ನು ತ್ಯಜಿಸಿ ತನ್ನ ಹಳ್ಳಿಗೆ ಹಿಂತಿರುಗಿ ನೈಸರ್ಗಿಕ ಬೇಸಾಯ ಪದ್ಧತಿಯನ್ನು ಬೆಳೆಸಿದ.

### ನಾಲ್ಕರ ನಡೆ

ನಾಲ್ಕು ಮೂಲಾಂಶಗಳ ಮೇಲೆ ಈ ನೈಸರ್ಗಿಕ ಕೃಷಿ ಅವಲಂಬಿಸಿದೆ.

ಮೊದಲನೆಯದಾಗಿ ಉಳುಮೆ ಇಲ್ಲ. ಅಂದರೆ ಮಣ್ಣನ್ನು ತಿರುಗಿಸಿ ಹದಗೊಳಿಸುವ ಅವಶ್ಯಕತೆ ಇಲ್ಲ. ಹಲವಾರು ದಶಕಗಳಿಂದ ರೈತರು ಉಳುವುದು ಅತ್ಯಗತ್ಯವೆಂದು ಭಾವಿಸಿದ್ದಾರೆ. ಆದರೆ ನೈಸರ್ಗಿಕ ಬೇಸಾಯದ ಮೂಲ ತತ್ತ್ವ ಉಳುಮೆಯೇ ಇಲ್ಲದಿರುವುದು. ಭೂಮಿ ಸಹಜವಾಗಿಯೇ ಗಿಡಗಳ ಬೇರುಗಳನ್ನು



ತನ್ನತ್ತ ಎಳೆದುಕೊಳ್ಳುತ್ತದೆ. ಇದಲ್ಲದೆ ಸೂಕ್ಷ್ಮಜೀವಿಗಳ, ಮಣ್ಣು ಹುಳುಗಳ ಸಹಕಾರವೂ ಇದಕ್ಕೆ ದೊರೆಯುತ್ತದೆ.

ಎರಡನೆಯದಾಗಿ, ರಾಸಾಯನಿಕ ಗೊಬ್ಬರಗಳನ್ನು ಬಳಸಕೂಡದು. ಬಹುತೇಕ ಜನ ಪ್ರಕೃತಿಯ ಕಾರ್ಯಕ್ಕೆ ತೊಡಕು ಉಂಟು ಮಾಡಲು ಪ್ರಯತ್ನಿಸುತ್ತಾರೆ. ಅಜಾಗರೂಕ ಬೇಸಾಯ ಪದ್ಧತಿಗಳಿಂದ ಅಗತ್ಯವಾದ ಸತ್ವಗುಣವನ್ನು ಮಣ್ಣು ಕಳೆದುಕೊಳ್ಳುತ್ತಾ ಹೋದಂತೆ ಭೂಮಿ ಸವಕಲಾಗುತ್ತಾ ಬರುತ್ತದೆ. ಅದನ್ನು ಅವಷ್ಟಕ್ಕೆ ಬಿಟ್ಟರೆ ಮಣ್ಣು ತನ್ನ ಸಾರವನ್ನು ಕಳೆದುಕೊಳ್ಳದೆ ಹೆಚ್ಚು ಉತ್ಪನ್ನ ಪಡೆಯಲು ಸಾಧ್ಯವಾಗುತ್ತದೆ.

ಮೂರನೆಯದಾಗಿ, ಕಳೆಕೀಳುವುದು ಅನಗತ್ಯ. ಮಣ್ಣಿನ ಸತ್ವ ಹೆಚ್ಚಿಸಲು ಹಾಗೂ ಜೈವಿಕ ಸಮುದಾಯದ ಸಮತೋಲನ ಸಾಧಿಸಲು ಕಳೆಗಳು ಸಹಾಯಕವಾಗುತ್ತವೆ. ಮೂಲತಃ ಕಳೆಗಳನ್ನು ನಿಯಂತ್ರಿಸಬೇಕೇ ವಿನಾ ನಾಶಪಡಿಸಬಾರದು.

ಕಡೆಯದಾಗಿ, ಕೀಟನಾಶಕಗಳನ್ನು ಅವಲಂಬಿಸುವ ಪರಿಯಿಲ್ಲ. ಉಳುಮೆ ಹಾಗೂ ರಸಗೊಬ್ಬರಗಳ ಬಳಕೆಯಂತಹ ಅಸಹಜ ಪದ್ಧತಿಗಳಿಂದ ಅಶಕ್ತ ಗಿಡಗಳ ಬೆಳವಣಿಗೆಯಾಯಿತು. ಇದರಿಂದ ರೋಗ ಹರಡುವಿಕೆ ಹಾಗೂ ಕ್ರಿಮಿಗಳ ಕಾಟ ಬೇಸಾಯದ ಸಹಜ ತೊಂದರೆಯಾಯಿತು. ಪ್ರಕೃತಿ ತನ್ನ ಸಾಮರಸ್ಯ ಗುಣವನ್ನು ಬಿಡದು. ಅಪಾಯಕಾರಿ ಕ್ರಿಮಿಗಳು ಹಾಗೂ ರೋಗಗಳು ಇದ್ದೇ ಇರುತ್ತವೆ. ಆದರೆ ವಿಷಪೂರಿತ ರಾಸಾಯನಿಕಗಳನ್ನು ಉಪಯೋಗಿಸುವಷ್ಟರ ಮಟ್ಟಿಗೆ ಪ್ರಕೃತಿ ತನ್ನ ಅಸ್ತಿತ್ವ ಕಳೆದುಕೊಂಡಿಲ್ಲ. ಕ್ರಿಮಿ ನಿಯಂತ್ರಣದ ಬಹುತೇಕ ವಿಧಾನಗಳು ಕ್ರಿಮಿಗಳಲ್ಲಿರುವ ಬಾಂಧವ್ಯವನ್ನು ಗಮನಿಸದು. ರೋಗ ಹಾಗೂ ಕ್ರಿಮಿಗಳನ್ನು ನಿಯಂತ್ರಿಸಲು ಇರುವ ಸುಲಭ ಸೂಕ್ಷ್ಮ ಮಾರ್ಗವೆಂದರೆ ಆರೋಗ್ಯಕರ ವಾತಾವರಣದಲ್ಲಿ ಆರೋಗ್ಯಕರ ಬೆಳೆಯನ್ನು ಬೆಳೆಯುವುದು.

ಪಾಶ್ಚಾತ್ಯ ಬೇಸಾಯಕ್ಕೆ ಹೋಲಿಸಿದರೆ ಈ ನೈಸರ್ಗಿಕ ಬೇಸಾಯ ಕೇವಲ ಉತ್ಪನ್ನಗಳ ತ್ಯಾಜ್ಯ ವಸ್ತುಗಳಾದ ಹುಲ್ಲು-ಕಡ್ಡಿ, ಎಲೆಗಳನ್ನು ಭೂಮಿಗೆ ಮರಳಿಸಿ ಕೊಡುವುದು. ಮಿಕ್ಕೆಲ್ಲವೂ ಪ್ರಕೃತಿಯ ಸಾಮರಸ್ಯ. ಭೂಮಿಯ ವಿವಿಧ ಗಿಡ ಗಳ, ಪ್ರಾಣಿಗಳ, ಕ್ರಿಮಿ ಹಾಗೂ ಸೂಕ್ಷ್ಮ ಜೀವಿಗಳ ಸಹಜ ಬಾಂಧವ್ಯದಿಂದ ಕೆಲಸ ಜರುಗುತ್ತದೆ. ಇನ್ನು ಬೇಕಾದ್ದು ಮೋಡಗಳಿಂದ ಸುರಿವ ಮಳೆ. ಕೃತಕಗಳ ಪ್ರಯೋಜನವೇ ಇಲ್ಲವಾದ್ದರಿಂದ ವೆಚ್ಚದ ಬಗ್ಗೆ ಚಿಂತಿಸುವ ಹಾಗಿಲ್ಲ. ಉಳುವ, ಕಳೆಕೀಳುವ ಹಾಗು ನಾಟಿ ಮಾಡುವ ಗೋಜು ತಪ್ಪಿರುವ ಕಾರಣ ಸಮಯ, ಶಕ್ತಿ ಹಾಗು ಬೆಲೆಯನ್ನು ಉಳಿಸಲು ನೆರವು ಮಾಡುತ್ತದೆ.

### ಪ್ರಚಲಿತ ಪದ್ಧತಿ

ನಮ್ಮ ಪದ್ಧತಿಯಂತೆ ಟ್ರಾಕ್ಟರ್, ಹಲ್ಲರ್, ಸ್ಪ್ರಿಂಕ್ಲರ್‌ಗಳಂತಹ ಸಾಧನಗಳ ಉಪಯೋಗ ದಿಂದ ಬೇಸಾಯ ಸಾಗುತ್ತದೆ. ಇವುಗಳ ಚಾಲ ನೆಗಾಗಿ ವಿದ್ಯುತ್ತು, ಡೀಸಲ್‌ಗಳ ಬಳಕೆ ಬೇರೆ. ಯಂತ್ರಗಳಿಂದ ಹದ ಮಾಡಲ್ಪಡುವ ಭೂಮಿಗೆ ರಸಗೊಬ್ಬರಗಳ ಬೆರಕೆ, ನಂತರ ಬಿತ್ತನೆ. ಸಸಿಗಳು ಒಂದಿಷ್ಟುದ್ದ ಬೆಳೆಯುತ್ತಲೇ ನಾಟಿ ಮಾಡುವ ಅಗತ್ಯ. ಫಸಲಿಗೆ ಮಾರಕ ವೆಂದೆನ್ನುವ ಕಳೆಗಳನ್ನು ಕಿತ್ತು ದೂರವೆಸೆಯ ಬೇಕು. ಇವನ್ನು ಕ್ರಿಮಿಕೀಟಗಳಿಂದ ರಕ್ಷಿಸಲು ಕೀಟನಾಶಕಗಳು ಸಿದ್ಧವಾಗಿರುತ್ತವೆ. ಹೀಗೆ ಸಾಗುತ್ತಿದೆ ನಮ್ಮ ಕೃಷಿ ಉದ್ದಿಮೆ. ಇಷ್ಟೆಲ್ಲಾ ನಮ್ಮ ಬಡ ರೈತರಿಗೆ ಸಾಧ್ಯವಾಗುತ್ತಿದೆಯೇ? ಖಂಡಿತವಾಗಿಯೂ ಇಲ್ಲ. ಭಾರತಲ್ಲಿನ ಶೇಕಡಾ 40ರಷ್ಟು ಭೂಮಿ ಬಂಡವಾಳಶಾಹಿ ಗಳ, ದೊಡ್ಡ ದೊಡ್ಡ ಜಮೀನ್ದಾರರ ವಶದ ಲ್ಲಿದೆ. ಪ್ರತಿಯೊಬ್ಬರೂ ಎಂಟು ಹೆಕ್ಟೇರ್ ಗಳಿಗೂ ಹೆಚ್ಚಿನ ಭೂಮಿಯನ್ನು ಪಡೆದ ಜಮೀನ್ದಾರರಾಗಿ ಮೆರೆಯುತ್ತಿದ್ದಾರೆ. ಈ ಹಣವಂತರಿಗೆ ಯಾವುದಕ್ಕೂ ಕಡಿಮೆ ಇಲ್ಲ. ಹೆಚ್ಚು ಇಳುವರಿಯನ್ನೂ ಪಡೆಯುತ್ತಿದ್ದಾರೆ. ಆದರೆ ಶೇಕಡಾ 53 ರಷ್ಟು ಕೃಷಿಭೂಮಿಯನ್ನು ಕೈಯಲ್ಲಿರಿಸಿ ಕೊಂಡಿರುವ ಸಣ್ಣ ಹಾಗು ಮಧ್ಯಮ ವರ್ಗದ ರೈತರು ಧನಿಕರ ಯಾಂತ್ರಿಕ ಬೇಸಾಯವನ್ನು ಅನುಸರಿಸಲು ಹೋಗಿ ತಮ್ಮ ಕೈಸುಟ್ಟುಕೊಂಡಿದ್ದಾರೆ. ನೀರಾವರಿ ಸೌಲಭ್ಯಗಳಿಲ್ಲದೆ, ಯಾಂತ್ರಿಕ ಸಾಧನಗಳನ್ನು ಕೊಳ್ಳುವ ಶಕ್ತಿಯಿಲ್ಲದೆ ಸೊರಗಿದ್ದಾರೆ. ಕೀಟ ನಾಶಕಗಳ, ಗೊಬ್ಬರ, ಕಳೆನಾಶಕಗಳನ್ನು ಬಳಸಿ ಕೇವಲ ಒಂದೆರಡು ಸಲ ಫಸಲನ್ನು ತೆಗೆದು ಸಾಲ ತೀರಿಸಲಾಗದೆ ಕೈಕಟ್ಟಿ ಕುಳಿತಿರುವವರಾಗಿದ್ದಾರೆ.

### ಫುಕುವೋಕಾ ವಿಧಾನ

ಕೃಷಿ ಭೂಮಿ ಹಾಗು ಕೃಷಿಕನಿಗೆ ಹಿಂಸೆ ಕೊಡದ ಫುಕುವೋಕಾನ ನೈಸರ್ಗಿಕ ಬೇಸಾಯ ಪದ್ಧತಿ ಹೀಗೆ ನಡೆಯುತ್ತದೆ.

ಮಾಗಿಯಲ್ಲಿ ಭತ್ತ, ಗೋಧಿ, ಬಾರ್ಲಿ, ಕ್ಲೋವರ್ ಹಾಗೂ ಇನ್ನಿತರ ಚಳಿಗಾಲ ಬೆಳೆ ಗಳ ಬೀಜಗಳನ್ನು ಒಟ್ಟುಗೂಡಿಸಿ ಭೂಮಿಯ ಮೇಲೆ ಎರಚಿ ಅದರ ಮೇಲೆ ಭತ್ತದ ಹುಲ್ಲನ್ನು ಮಂದಗಾಗಿ ಹರಡುವುದು. ವಸಂತಕಾಲದ ವರೆಗೆ ಭತ್ತ ಸುಪ್ತವಾಗಿದ್ದು, ಬಾರ್ಲಿ, ಕ್ಲೋವರ್ ಹಾಗೂ ಇನ್ನಿತರ ತೋಟದ ಬೆಳೆ ಗಳು ಚಿಗುರುತ್ತವೆ. ಈ ಬೆಳೆಗಳನ್ನು ಮೇ ತಿಂಗ ಳಲ್ಲಿ ಕುಯ್ಲು ಮಾಡಲಾಗುತ್ತದೆ. ಕುಯ್ಲಿನ ನಂತರ ಅದನ್ನು ಅಲ್ಲೇ ಒಂದು ವಾರ ಅಥವಾ ಹತ್ತು ದಿನಗಳವರೆಗೆ ಒಣಗಿಸಿ, ತೆನೆ ಬಡಿದು, ಜಳ್ಳು ತೂರಿಹಾಕಿ ಮೂಟೆಗಳಲ್ಲಿ ತುಂಬಿಸ ಲಾಗುತ್ತದೆ. ಹುಲ್ಲು ಹೊಟ್ಟನ್ನೆಲ್ಲಾ ಜಮೀನಿಗೆ ಮರಳಿಸಿದಂತಾಗುತ್ತದೆ. ಮುಂಗಾರಿನಲ್ಲಿ ನೀರನ್ನು ಕೆಲವು ಕಾಲ ಜಮೀನಿನಲ್ಲೇ ಇರಿಸ ಲಾಗುತ್ತದೆ. ಇದರಿಂದ ಕ್ಲೋವರ್ ಹಾಗು ಇತರ ಕಳೆಗಳು ದುರ್ಬಲವಾಗಿ ಭತ್ತ ಚಿಗು ರಲು ಅವಕಾಶವಾಗುತ್ತದೆ. ನೀರು ಒಣಗಿದ ಮೇಲೆ ಕ್ಲೋವರ್ ಮತ್ತೆ ಚಿಗುರಿ ಭತ್ತದ ಸಸಿ ಗಳ ಸುತ್ತಲೂ ಹರಡಿಕೊಳ್ಳುತ್ತವೆ. ಈಗ ಕೃಷಿಕ ನಿಗಿರುವ ಒಂದೇ ಒಂದು ಕೆಲಸವೆಂದರೆ ಭತ್ತದ ಹೊಲದಲ್ಲಿ ಬದುಗಳನ್ನು ಸರಿಗೊಳಿಸಿ ನೀರು ಹರಿಯುವುದಕ್ಕೆ ದಾರಿ ಮಾಡುವುದು. ಅಕ್ಟೋ ಬರ್‌ನಲ್ಲಿ ಭತ್ತ ಕುಯ್ಲಾಗುತ್ತದೆ. ನೀರಿನ ಪ್ರವಾಹ ಹರಿಸುವ ಅವಶ್ಯಕತೆಯಿಲ್ಲದಿದ್ದರೂ ಒಂದು ತೆನೆಯಲ್ಲಿ 250 ರಿಂದ 300 ಕಾಳುಗಳಿ ರುತ್ತವೆ. ಭತ್ತದ ಸಸಿಗಳ ಕಾಂಡ ಬಲವಾಗಿದ್ದು ಆದರ ಬೇರು ಬಹಳ ಆಳವಾಗಿ ಇಳಿದಿರುತ್ತವೆ.

### ಮಣ್ಣಿನ ಗುಣಮಟ್ಟ

ನೀರಾವರಿಯ ಬೇಡಿಕೆಯಿಲ್ಲದಿರುವ ನೈಸ

ರ್ಗಿಕ ಬೇಸಾಯದಿಂದ ಮಣ್ಣಿನ ಗುಣಮಟ್ಟ, ಒಂದು ಕುಯ್ಲಿಂದ ಇನ್ನೊಂದು ಕುಯ್ಲಿನ ವೇಳೆಗೆ ಉತ್ತಮವಾಗುತ್ತಾ ಬರುತ್ತದೆ. ಫುಕುವೋಕಾ ತನ್ನ ಜಮೀನನ್ನು 25 ವರ್ಷಗಳಿಂದ ಉಳುಮೆ ಮಾಡಿಲ್ಲ. ಆದ ಕಾರಣ ಅವನ ಜಮೀನಿನ ಮಣ್ಣಿನ ಫಲಶಕ್ತಿ, ಸ್ವರೂಪ ಹಾಗೂ ನೀರನ್ನು ಉಳಿಸಿಕೊಳ್ಳುವ ಸಾಮರ್ಥ್ಯ ಹೆಚ್ಚಿದೆ. ಪಾಳು ಬಿದ್ದ ಭೂಮಿ ಯಲ್ಲೂ ಈ ರೀತಿಯ ಬೇಸಾಯ ನಡೆಸಿ ಭೂಮಿಯ ಸತ್ವವನ್ನು ಹೆಚ್ಚಿಸುವಂತೆ ಮಾಡು ಬಹುದು. ಅದೇ ಆಧುನಿಕ ಬೇಸಾಯ ಕ್ರಮ ದಲ್ಲಿ ಮಣ್ಣಿನ ಗುಣಮಟ್ಟ ಇದ್ದ ಹಾಗೇ ಇದ್ದು ಅಥವಾ ತನ್ನ ಸಾರವತ್ತತೆಯನ್ನು ಇನ್ನಷ್ಟು ಕಳೆದುಕೊಂಡು ಕೃಷಿಕ ತಾನು ಉಪಯೋಗಿ ಸುವ ಗೊಬ್ಬರದ ಪ್ರಮಾಣದಲ್ಲಿ ಫಲವನ್ನು ಪಡೆಯುತ್ತಾನೆ.

### ಆಹಾರ ಮತ್ತು ಬೇಸಾಯ

ಇತ್ತೀಚೆಗೆ ಮಾನವ ಆಹಾರದ ರುಚಿಯನ್ನೇ ಮರೆತು ಬಿಟ್ಟಿದ್ದಾನೆ. ಕಲಬೆರಕೆ, ಸತ್ವಹೀನ ಆಹಾರವನ್ನುಂಡು ಅದಕ್ಕೆ ಒಗ್ಗಿಹೋಗಿದ್ದಾನೆ. ಸಪ್ಪೆ ಆಹಾರದಿಂದ ಸಪ್ಪೆ ಜೀವನವನ್ನು ನಡೆಸು ತ್ತಿದ್ದಾನೆ. ಆಹಾರ, ಬೇಸಾಯಗಳು ಒಂದು ನಾಣ್ಯದ ಎರಡು ಮುಖಗಳಂತೆ. ನೈಸರ್ಗಿಕ ಬೇಸಾಯವನ್ನು ಅನುಸರಿಸದಿದ್ದಲ್ಲಿ ನಮಗೆ ನೈಸರ್ಗಿಕ ಆಹಾರ ದೊರೆಯುವುದು ಅಸಾಧ್ಯ. "ಎಲ್ಲಿಯವರೆಗೆ ಮಾನವ ನಿಸರ್ಗದಲ್ಲಿ ತಾನು ಒಬ್ಬನೆಂದು ಗುರುತಿಸುವುದಿಲ್ಲವೋ ಅಲ್ಲಿಯ ವರೆಗೆ ನೈಸರ್ಗಿಕ ಬೇಸಾಯ ಅಥವಾ ನೈಸರ್ಗಿಕ ಆಹಾರದ ಪ್ರಶ್ನೆಯೇ ಬರುವುದಿಲ್ಲ. ಅವನು ಪೌಷ್ಠಿಕ ಆಹಾರವನ್ನು ಸ್ವೀಕರಿಸಿ, ಸರಳಜೀವನ ವನ್ನು ನಡೆಸಿ ನೆಮ್ಮದಿಯಿಂದ ಎರಡು ಕ್ಷಣ ನಿದ್ರಿ ಸಿದರೆ ಅವನು ಎಷ್ಟೋ ಸಾಧಿಸಿದಂತಾಗು ತ್ತದೆ. ನಾವು ನಮ್ಮ ಆಹಾರ ವನ್ನು ಬೆಳೆಸುವ ವಿಧಾನವನ್ನು ಬದಲಾಯಿಸಿದರೆ ನಮ್ಮ ಆಹಾರ ವನ್ನು ಬದಲಿಸುತ್ತೇವೆ, ನಮ್ಮ ಸಮಾಜವನ್ನು ಬದಲಿಸುತ್ತೇವೆ. ಅದರೊಡನೆ ನಮ್ಮ ಮೌಲ್ಯ ಗಳನ್ನೂ ಬದಲಿಸಬಹುದು" ಎನ್ನುತ್ತಾನೆ ಫುಕುವೋಕಾ.

ಮಾನವ ನೈಸರ್ಗಿಕ ಆಹಾರವನ್ನು ತ್ಯಜಿಸಿ ಶುದ್ಧೀಕರಿಸಿದ ಆಹಾರವನ್ನು ಬಳಸಲು ಪ್ರಾರಂಭಿಸಿದಾಗ ಸಮಾಜ ಸ್ವವಿನಾಶದ ಕಡೆಗೆ ಹೆಜ್ಜೆ ಹಾಕುತ್ತಿದೆಯೆಂದೇ ಹೇಳಬಹುದು. ಕಾರಣ ಅಂತಹ ಆಹಾರ ಸಂಸ್ಕೃತಿಯ ಉತ್ಕೃಷ್ಟ ವಲ್ಲ. ಆಹಾರದಿಂದ ಜೀವನ, ಜೀವನ ನಿಸರ್ಗ ದಿಂದ ದೂರ ಸರಿಯಬಾರದು. ಇದೇ ಫುಕು ವೋಕಾನ ದೃಷ್ಟಿ.

### ಫುಕುವೋಕಾ ಜೀವನದರ್ಶನ

ತನ್ನ ಸಿದ್ಧಾಂತಗಳನ್ನು ಪ್ರತ್ಯಕ್ಷವಾಗಿ ಪ್ರಮಾ ಣಿಸಿರುವ ಫುಕುವೋಕಾ ಕೃಷಿಕನೇ ಅಲ್ಲದೆ ಒಬ್ಬ ತತ್ವಜ್ಞಾನಿ, ಭಾವಜೀವಿ ಹಾಗೂ ವಿಜ್ಞಾನಿ. ತನ್ನ ತತ್ವಗಳನ್ನು ಯಾವ ಒಂದು ನಿರ್ದಿಷ್ಟ ಧರ್ಮದ ಜೊತೆಯಲ್ಲಿ ಗುರುತಿಸಿಕೊಳ್ಳದಿ ದ್ದರೂ ಅವನ ಮಾತುಗಳು, ಅವನು ಹೇಳಿ ಕೊಡುವ ಶಿಕ್ಷಣ—ಆತ ಹೆಚ್ಚಾಗಿ ಬೌದ್ಧ ಮಹಾಯಾನದಿಂದ ಪ್ರಭಾವಿತನಾಗಿದ್ದಾರೆ ಎಂಬುದನ್ನು ದೃಢಪಡಿಸುತ್ತವೆ. 25 ವರ್ಷದ ಯುವಕನಾಗಿದ್ದಾಗಲೇ ಬಣ್ಣದ ಬದುಕಿನಿಂದ ಬೇಸತ್ತು ಈ ಯಾಂತ್ರಿಕ ಜೀವನ ಶೂನ್ಯ ವಾದುದು ಎಂದರಿತು, ಪ್ರಕೃತಿಯೊಡನೆ ಬಾಳು ವುದಕ್ಕಾಗಿ ತನ್ನ ಹಳ್ಳಿಗೆ ಹಿಂತಿರುಗಿದವ ಈತ. ಜೀವನ ಹಾಗು ನಿಸರ್ಗದ ರಹಸ್ಯವನ್ನು ತೋರಿ ಸಲು ಫುಕುವೋಕಾ ನಡೆಸಿದ ಸಾಧನೆ ಅದ್ಭುತ. ಪ್ರಕೃತಿಯ ಜತೆಯಲ್ಲಿ ಒಡನಾಡುವ ಈ ಮೇಧಾವಿ ಆಹಾರ ವಿಧಿ, ಆರೋಗ್ಯ ಲಕ್ಷಣ ಗಳು, ಜೀವನ ಮೌಲ್ಯಗಳ ಕುರಿತು ಚರ್ಚಿಸು ತ್ತಾನೆ. ಫುಕುವೋಕಾನಿಗೆ ಪದ್ಯಗಳನ್ನು ಬರೆ ಯುವ ಆಸಕ್ತಿಯೂ ಉಂಟು. "ಯಾಂತ್ರಿಕ ಬೇಸಾಯದಲ್ಲಿ ಪದ್ಯ ಬರೆಯುವುದಕ್ಕೆ ಸಮಯ ವಾದರೂ ಹೇಗೆ ಸಿಕ್ಕೀತು" ಎನ್ನುತ್ತಾನೆ ಫುಕು ವೋಕಾ. ರೈತ ಪ್ರಕೃತಿಯೊಡನೆ ಮಿಡಿಯ ಬೇಕು. ಅವನ ಜೀವನ ಚಕ್ರ ಪ್ರಾಪಂಚಿಕತೆ ಯಿಂದ ದೂರವಿರುವುದು ಒಳಿತು ಎಂಬುದು ಫುಕುವೋಕಾನ ಆಶಯ. ಹಾಗಾಗದಿದ್ದಲ್ಲಿ ಭೂಮಿ ಕಾರ್ಖಾನೆಗಳಾಗಿ ರೂಪಾಂತರವಾಗು ವುದರಲ್ಲಿ ಸಂಶಯವಿಲ್ಲ.

### ಕಾರ್ಯದರ್ಶನ

"ನಾನು ಏನೂ ಮಾಡದ ಬೇಸಾಯ ಎಂದೊ ಡನೆ ಹಾಸಿಗೆಯಿಂದ ಇಳಿಯದೆಯೇ ತಾವು ಫಲ ವನ್ನುಣ್ಣಬಲ್ಲರೆಂಬ ಕಾಲ್ಪನಿಕ ಅಸಾಧ್ಯ ಆದರ್ಶವನ್ನಿಟ್ಟುಕೊಂಡು ಹಲವಾರು ಮಂದಿ

ಬರುತ್ತಾರೆ. ನನ್ನ ತತ್ವ ಕೆಲಸಕ್ಕೆ ವಿರುದ್ಧವಾಗಿ ಅಲ್ಲ. ಆದರೆ ಅದು ಅನಗತ್ಯ ಕೆಲಸದ ವಿರುದ್ಧ ವಾದುದು" ಎನ್ನುವ ಫುಕುವೋಕಾ ಈ ಮುದಿ ವಯಸ್ಸಿನಲ್ಲೂ ಮುಂಜಾವಿನಿಂದ ಸಂಜೆಯ ವರೆಗೂ ಚಟುವಟಿಕೆಯಿಂದ ದುಡಿಯುತ್ತಾನೆ. ಹೆಚ್ಚಾಗಿ ಯಾವುದಾದರೊಂದು ವಿಚಾರವನ್ನು ತನ್ನ ವಿದ್ಯಾರ್ಥಿಗಳಿಗೆ ತಿಳಿಸಿಕೊಡುತ್ತಿರುತ್ತಾನೆ. ಒಮ್ಮೊಮ್ಮೆ ತನ್ನ ವಿದ್ಯಾರ್ಥಿಗಳನ್ನೆಲ್ಲಾ ಕರೆದು ಕಾರ್ಯ ಹಾಗೂ ಕಾರ್ಯಶ್ರದ್ಧೆ, ಆ ಕಾರ್ಯ ವನ್ನು ಸಾಧಿಸಲು ಇರುವ ಸುಲಭ ಮಾರ್ಗಗಳ ಬಗ್ಗೆ ಚರ್ಚಿಸುತ್ತಾನೆ. ಸಾಮಾನ್ಯ ಜಪಾನೀ ರೈತನಂತೆ ಇವನ ಉಡುಪು ಕೆಲಸಕ್ಕೆ ಮೀಸ ಲಾದುದು. ಕಾರ್ಯನಿರತ ಫುಕುವೋಕಾನ ಹಿಂದೆ ಒಂದು ವಿದ್ಯಾರ್ಥಿ ಸಮೂಹವೇ ಸದಾ ಇರುತ್ತದೆ. ಹಲವಾರು ವರ್ಷಗಳಿಂದ ಅನೇಕ ಮಂದಿ ಬಂದು ಈ ಸಾಧಕನ ಕಾರ್ಯವನ್ನು ದರ್ಶಿಸಲು ಬಂದಿದ್ದಾರೆ. ಅಲ್ಲೇ ಇದ್ದು ಕೆಲಸ ಕಲಿತು ಹಿಂತಿರುಗಿದ್ದಾರೆ. ಫುಕುವೋಕಾ ಯಾವ ಆಧುನಿಕ ಸೌಲಭ್ಯಗಳಿಲ್ಲದೆ ತನ್ನ ಜೀವನ ಸಾಗಿ ಸುತ್ತಿದ್ದಾನೆ. ಜಪಾನಿನ ಅನೇಕರೀಗ ನೈಸರ್ಗಿಕ ಬೇಸಾಯವನ್ನು ಅನುಸರಿಸುತ್ತಿದ್ದಾರೆ. "ನನ್ನ ದಾರಿ ಸಹ- ಕೃಷಿಕರಿಗೆ ಮಾರ್ಗದರ್ಶನವಾಗ ಬಹುದೆಂಬ ಧೃಡ ನಂಬಿಕೆ ನನಗಿದೆ" ಎನ್ನುವ ಫುಕು ವೋಕಾನ ಮಾತನ್ನು ಕಾರ್ಯರೂಪಕ್ಕೆ ತಂದು ನಿಸರ್ಗದ ಮಕ್ಕಳು ನಾವು ಎಂಬುದನ್ನು ಈ ವೈಜ್ಞಾನಿಕ ಯುಗದಲ್ಲಿ ಸ್ಪಷ್ಟ ಪಡಿಸ ಬೇಕಾಗಿದೆ.

### ಸಂಸ್ಕೃತಿ– ಪ್ರಕೃತಿ

"ಕೈಗಾರಿಕಾ ಬೇಸಾಯದ ಉದ್ದೇಶದಂತೆ ಅತ್ಯಧಿಕ ಉತ್ಪಾದನೆಗಾಗಿ ಅಥವಾ ಕ್ಷಮತೆ ಯನ್ನು ಹೆಚ್ಚಿಸುವುದರ ಸಲುವಾಗಿ ದುಡಿಯು ವುದರ ಬದಲು ಮಾನವನ ಒಳಿತಿಗಾಗಿ ದುಡಿ ದಲ್ಲಿ ಕೆಲಸ ಉತ್ತಮವಾಗುತ್ತಾ ಬರುತ್ತದೆ. ಬೇಸಾಯದ ಮೂಲ ಗುರಿ ಬೆಳೆಯನ್ನು ಬೆಳೆಸು ವುದಿಲ್ಲ. ಆದರೆ ಅದು ಮಾನವನ ಸಂಸ್ಕಾರ ವನ್ನು ಬೆಳಸಿ ಪರಿಪೂರ್ಣನನ್ನಾಗಿ ಮಾಡು ವುದು. ಮಾನವ ಪ್ರಯತ್ನ ಮಾತ್ರದಿಂದ ಸಂಸ್ಕೃತಿಯನ್ನು ಸೃಷ್ಟಿಸಿ, ಪೋಷಿಸಿ, ಬೆಳಸ ಲಾಗುವುದೆಂದು ಭಾವಿಸಲಾಗಿದೆ. ಆದರೆ ಸಂಸ್ಕೃತಿಯನ್ನು ಮಾನವ ಹಾಗು ಪ್ರಕೃತಿಯ ಜೋಡಣೆಯಿಂದ ಸೃಷ್ಟಿಸಲಾಗಿದೆ. ಸಮಾಜ ಹಾಗು ನಿಸರ್ಗದ ಜೋಡಣೆಯ ರಹಸ್ಯ ತಿಳಿ ದೊಡನೆ ಸಂಸ್ಕೃತಿ ತನ್ನದೇ ಆದ ರೂಪವನ್ನು ತಾಳುತ್ತದೆ" ಎಂದು ಫುಕುವೋಕಾ ಹೇಳು ತ್ತಾನೆ. ಆತನ ಅಭಿಪ್ರಾಯದಲ್ಲಿ ಮಾನವನ ಸ್ವಾಭಿಮಾನ ಹಾಗೂ ಸುಖದ ಬಯಕೆಯಿಂದ ಹುಟ್ಟಿರುವ ಮೌಲ್ಯಗಳನ್ನು ನಿಜವಾದ ಸಂಸ್ಕೃತಿ ಎನ್ನಲಾಗದು. ನಿಜವಾದ ಸಂಸ್ಕೃತಿ ಪ್ರಕೃತಿ ಯಲ್ಲಿ ಹುಟ್ಟಿದೆ. ಅದು ಸರಳವಾದುದು, ನಮ್ರ ವಾದುದು ಹಾಗೂ ಪವಿತ್ರವಾದುದು. ಈ ನಿಜ ಸಂಸ್ಕೃತಿಯೇ ಕೊರತೆಯಾಗಿ ಉಳಿದರೆ ಮಾನ ವೀಯತೆ ಇಲ್ಲವಾಗುತ್ತದೆ.

ಫುಕುವೋಕಾನ ಸ್ಥಳಕ್ಕೆ ಬರುವ ಆಶಾರಹಿತ ಯುವಕರಿಗೆ ಈ ಮುದುಕ ಏನನ್ನೂ ಕೊಡಲಾರ ನೆಂದು ಭಾವಿಸಿದರೆ ತಪ್ಪಾದೀತು. ಅವನು ಹುಲ್ಲನ್ನು ಕೈಗೆತ್ತಿಕೊಂಡು ಹೇಳುತ್ತಾನೆ, "ಈ ಒಂದು ಹುಲ್ಲು ಕ್ರಾಂತಿಯ ನಾಂದಿಯಾಗ ಬಲ್ಲದು. ಒಂದು ಕೈಯಲ್ಲಿ ಮಾನವನ ವಿನಾಶ ವಾದರೂ ಒಂದು ಹುಲ್ಲಿನಿಂದ ಆಶೆಯ ಗುರಿ ಮೂಡಬಹುದು." ಅದರ ಭಾರ ಎಷ್ಟೆಂದು ಯಾರೂ ಊಹಿಸಿಲ್ಲವೆಂದು ಹೇಳುತ್ತಾ ಫುಕು ವೋಕಾ ತಾನು 25 ವರ್ಷದ ಯುವಕನಿದ್ದಾಗ ತಾನು ಕಂಡ ಕಳೆಯಲ್ಲಿನ ಬೆಳೆಯ ದೃಶ್ಯವನ್ನು ಪುನರ್ ಸೃಷ್ಟಿಸುತ್ತಾನೆ.

ನಿಸರ್ಗ ಬದಲಾಗುವುದಿಲ್ಲ. ಪ್ರತಿಯಾಗಿ ಕಾಲದಿಂದ ಕಾಲಕ್ಕೆ ನಿಸರ್ಗವನ್ನೂ ನೋಡುವ ದೃಷ್ಟಿ ಬದಲಾಗುತ್ತದೆ. ನೈಸರ್ಗಿಕ ಬೇಸಾಯದ ತತ್ವ ಬೇಸಾಯದ ಮೂಲವಸ್ತುವಾಗಿ ಎಂದೆಂದೂ ಇರುತ್ತದೆ. ಈ ಮೂಲಾರ್ಥವನ್ನು ಅರಿತರೆ ಸಾಕು.

ಉಕ್ಕಿ ಹರಿದು ಸದಾ ಬದಲಾಗುವ ನದಿಯ ನೀರಿನಂತೆ ಕಾಲ. ಈ ಕಾಲಪ್ರವಾಹದಲ್ಲಿ ನಮ್ಮ ಕಾರ್ಯದ ಪ್ರಖರ ಸೂರ್ಯ ಮಾತ್ರ ಥಳ ಥಳಿಸಬಲ್ಲ. ಫುಕುವೋಕಾ ಹಾಕಿಕೊಟ್ಟ ಪಥ ದಲ್ಲಿ ನಡೆಯುವುದೇ ಆತನಿಗೆ ಆತನ ಕಾರ್ಯ ಪ್ರಖರತೆಗೆ ಕೊಡುವ ಗೌರವವಾದೀತು. ●

('ಪೆನ್‌ಫ್ರೆಂಡ್')

# ಆತ್ಮಜ್ಞಾನ ಸಂಪಾದನೆ

**ಕೆ.ಟಿ. ಗಟ್ಟಿ**

ಆತ್ಮಜ್ಞಾನಕ್ಕೆ ಮಿಗಿಲಾದ ಜ್ಞಾನವಿಲ್ಲ. ಆದರೆ ಅದನ್ನು ಸಂಪಾದಿಸುವ ಬಗೆ ಹೇಗೆ? ಕಾಡಿನ ನಡುವೆ ಕುಳಿತು ತಪಸ್ಸು ಮಾಡಿದರೆ ಆತ್ಮಜ್ಞಾನವು ಲಭಿಸುವುದೆ? ಸರಿಯಾದ ಸಂಸ್ಕಾರ ಮತ್ತು ವಿದ್ಯೆಯ ಹಿನ್ನೆಲೆಯಿದ್ದವನಿಗೆ ಲಭಿಸಲೂಬಹುದು. ಆದರೆ ತಪಸ್ಸಿನ ಸ್ವರೂಪವು ಏನು? ಒಂದು ದೇವರ ಹೆಸರನ್ನೋ, ಒಂದು ಮಂತ್ರವನ್ನೋ, ಶ್ಲೋಕವನ್ನೋ ಉರುಹಾಕುತ್ತಾ ಕುಳಿತರೆ ಆತ್ಮಜ್ಞಾನ, ದಿವ್ಯಜ್ಞಾನ ಬರುವುದೆ? 'ದೇವರೇ, ನನ್ನನ್ನು ಹೊಳೆ ದಾಟಿಸು' ಎಂದು ಪ್ರಾರ್ಥಿಸುತ್ತ ಈಜು ತಿಳಿಯದವನು ಹೊಳೆಗಿಳಿದರೆ ಆಚೆ ದಡ ಸೇರಿಯಾನೆ? ಬರೀ ಆಚಮನದಿಂದ ಆತ್ಮೋನ್ನತಿಯಾಗುವ ಹಾಗಿದ್ದರೆ, ಈ ಭೂಮಿಯ ಮೇಲೆ ದುಃಖ, ಅಶಾಂತಿಯೆಂಬುದು ಇರುತ್ತಿರಲಿಲ್ಲ.

ಆತ್ಮಜ್ಞಾನವನ್ನು ಸಂಪಾದಿಸುವ ಪರಿಕರಗಳನ್ನು ಮೊದಲಾಗಿ ಕರಗತ ಮಾಡಿಕೊಂಡ ಮೇಲೆ ಮಾತ್ರವೇ ಆತ್ಮಜ್ಞಾನ ಸಂಪಾದನೆಯ ತಪಸ್ಸಿಗೆ ಕೂರಬೇಕು. ಬುದ್ಧನು ಕೂಡಾ ಹದಿನಾಲ್ಕು ವರ್ಷ ಅಶ್ವತ್ಥವೃಕ್ಷದಡಿಯಲ್ಲಿ ನಿರಂತರ ಜಪ ಮಾಡಿರಲಾರ. ಅವನು ಧ್ಯಾನ ಮಾಡಲು ಮರದಡಿಯಲ್ಲಿ ಕುಳಿತುಕೊಳ್ಳುತ್ತಿದ್ದಿರಬಹುದು. ಆದರೆ ಅವನು ಅಷ್ಟು ವರ್ಷವೂ ಅದೊಂದೇ ಕೆಲಸವನ್ನು ಮಾಡಿರಲಾರ. ಅವನು ಋಷಿ ಮುನಿಗಳೊಡನೆ ಬೆರೆತು ಸಾವಿರಾರು ಸಂಗತಿಗಳನ್ನು ತಿಳಿದುಕೊಂಡ. ತನ್ನ ಸಂದೇಹಗಳನ್ನು ಪರಿಹರಿಸಿಕೊಂಡ. ಅದೆಲ್ಲ ಆದ ಮೇಲೆ ಕೊನೆಗೆ ಅವನು ಏನು ಹೇಳಿದ? ಆ ಋಷಿ ಹಾಗೆ ಹೇಳಿದ. ಈ ಪಂಡಿತ ಹೀಗೆ ಹೇಳಿದ ಅನ್ನಲಿಲ್ಲ. ತಾನೇನನ್ನು ಕಂಡುಕೊಂಡೆ. ತಾನೇನನ್ನು ಅರಿತುಕೊಂಡೆ ಎಂದು ಹೇಳಿದ. ಅವನು ಕಾಡಿಗೆ ಹೋದಾಗ ಸಾಕಷ್ಟು ಕಲಿತವನೂ, ವಿದ್ಯಾವಂತನೂ ಆಗಿದ್ದ. ಲೋಕದ ಬಗ್ಗೆ, ಮನುಷ್ಯನ ಬಗ್ಗೆ, ಹುಟ್ಟು ಸಾವುಗಳ ಬಗ್ಗೆ ತಿಳಿದವನೂ ಆಗಿದ್ದ. ಲೋಕದ ಬಗ್ಗೆ ಏನೂ ತಿಳಿದಿರದ, ಅವಿದ್ಯಾವಂತನಾದ, ಅಜ್ಞಾನಿ, ಮೂಢ ಏನು ಯೋಚನೆಗಳನ್ನು, ಏನು ತಪಸ್ಸನ್ನು ತಾನೇ ಮಾಡಬಲ್ಲ?

ಸಂಶೋಧನೆಯ ಮೂಲಕ ಸತ್ಯವನ್ನು ಕಂಡುಹಿಡಿಯಲು ಯತ್ನಿಸುವುದು ಪಾಶ್ಚಾತ್ಯ ವಿಧಾನ. ಸಂಶೋಧಕ ದೃಷ್ಟಿಯನ್ನು ಒಳಗಡೆಗೆ ತಿರುಗಿಸಿ, ಅತ್ಯಂತ ತೀಕ್ಷ್ಣವಾದ ಚಿಂತನೆಯ ಮೂಲಕ ಸತ್ಯವನ್ನು ಕಂಡುಕೊಳ್ಳಲು ಯತ್ನಿಸುವುದು ಭಾರತೀಯ ವಿಧಾನ. ಆದರೆ ಯಾವ ವಿಧಾನವೂ ತನ್ನಲ್ಲೇ ಪರಿಪೂರ್ಣವಲ್ಲ. ವಸ್ತುಗಳನ್ನು ಪರಿಶೀಲಿಸುತ್ತಾ ಪರಮಾಣುವನ್ನು ಕಂಡುಹಿಡಿದು ಅದನ್ನು ಕೂಡಾ ವಿಭಜಿಸುವ ಹಂತದವರೆಗೆ ತಲುಪಿದ ಪಾಶ್ಚಾತ್ಯ ವೈಜ್ಞಾನಿಕ ವಿಧಾನದಲ್ಲಿ ಮನುಷ್ಯ ಹೊರಗಿನವನಾಗಿ, ಬಹುತೇಕ ಗೌಣ ವಸ್ತುವಾಗಿ ಉಳಿದ. ಏನನ್ನು ಕಂಡುಹಿಡಿದರೂ ಅದು ಆತ್ಮೋನ್ನತಿಗಾಗಿರಬೇಕು ಎಂಬುದನ್ನೆ ಈ ವಿಜ್ಞಾನವು ಮರೆತುದರಿಂದಲೇ ಜಗತ್ತು ಇಂದು ಉಸಿರುಗಟ್ಟಿಸುವ ದುರಂತದ ಸನಿಹದಲ್ಲಿದೆ. ಬರೀ ಚಿಂತನೆಯಿಂದಲೇ ಎಲ್ಲವನ್ನು ಕಂಡುಕೊಳ್ಳಬಹುದು ಎಂದು ಯೋಚಿಸುತ್ತಾ, ತಮ್ಮ ಬುದ್ಧಿಗೆ ತೋಚಿದ್ದೆಲ್ಲ ಸತ್ಯವೆಂದು ಭ್ರಮಿಸುತ್ತಾ, ಶ್ಲೋಕವನ್ನು ರಚಿಸುತ್ತಾ ಹೋದವರು ಬದುಕಿನಿಂದ ದೂರವಾದ ದರ್ಶನಶಾಸ್ತ್ರದ ಧೂಳಿನಲ್ಲಿ ಮುಳುಗಿ ಹೋದರು.

ಸ್ವಾಮಿ ವಿವೇಕಾನಂದರು ಒಂದು ಕಡೆ ಹೀಗೆ ಹೇಳಿದ್ದಾರೆ, ಒಂದು ಸಮಾಜವು ಒಂದು ಕಾಲದಲ್ಲಿ ತನ್ನ ಸಾಮಾಜಿಕ ಸುವ್ಯವಸ್ಥೆ ಮತ್ತು ಪ್ರಗತಿಗಾಗಿ ಕೆಲವು ಕಟ್ಟಳೆಗಳನ್ನು ನಿರ್ಮಿಸುತ್ತದೆ. ಆದರೆ ಅವೇ ಕಟ್ಟಳೆಗಳು ಇನ್ನೊಂದು ಕಾಲದಲ್ಲಿ ಕಂದಾಚಾರಗಳಾಗುತ್ತವೆ.

ಹೀಗಾದಾಗ ಏನು ಮಾಡಬೇಕು? ಪುನಃ ನಮ್ಮ ವ್ಯವಸ್ಥೆಯನ್ನು ತಿದ್ದಬೇಕು, ಪರಿಷ್ಕರಿಸಬೇಕು, ಇದಕ್ಕೆ ಸಂಶೋಧನೆಯು ಬೇಕು, ಆತ್ಮ ಶೋಧನೆಯು ಬೇಕು, ವಿಜ್ಞಾನ ಮಾತ್ರ ಸಾಲದು. ಆತ್ಮಜ್ಞಾನವೂ ಬೇಕು.

## ವಾಚಕ ಚಳವಳಿಯಲ್ಲೊಂದು ನೂತನ ಪ್ರಯೋಗ

# ಗ್ರಂಥಾಲಿ

● ವಸಂತ ಕಲಕೋಟಿ

ಗ್ರಂಥ ಪ್ರಕಟಣೆಯ ಕೆಲಸ ತುಂಬ ಕಷ್ಟದ್ದು. ಪ್ರಕಟನೆಯ ವೆಚ್ಚವೂ ವಿಪರೀತ. ಪ್ರಕಟಿತ ಗ್ರಂಥಗಳನ್ನು ಕೊಂಡು ಓದುವ ವಾಚಕರ ಸಂಖ್ಯೆಯೂ ತೀರ ಕಿರಿದು. ವಾಚಕರ ಅಭಿರುಚಿಗೆ ತಕ್ಕ ಗ್ರಂಥಗಳು ಬರುತ್ತಿಲ್ಲವೆಂದು ಓದುಗರು ದೂರಿದರೆ, ಎಂಥ ಒಳ್ಳೆಯ ಪುಸ್ತಕಗಳನ್ನು ಪ್ರಕಟಿಸಿದರೂ ಕೊಂಡು ಓದುವವರಿಲ್ಲವೆಂದು ಪ್ರಕಾಶಕರ ಕೊರಗು. ಲೇಖಕನಿಗೆ ಯೋಗ್ಯ ಪ್ರತಿಫಲವಿಲ್ಲ. ಎಷ್ಟೋ ಸಲ ಕೈಯಿಂದ ಹಣ ಹಾಕಿ ಕೈ ಸುಟ್ಟುಕೊಂಡ ಲೇಖಕರೂ ಇದ್ದಾರೆ. ಕನ್ನಡ ಪ್ರಕಾಶನ ಜಗತ್ತಿನಲ್ಲಿ ಸಾಮಾನ್ಯವಾಗಿ ಕಂಡುಬರುವ ನೋಟವಿದು. ಇದು ನಿರಾಶಾಜನಕವಾದರೂ ಕನ್ನಡ ಪ್ರಕಾಶನ ಪ್ರಪಂಚದ ವಾಸ್ತವ ಚಿತ್ರ. ಜ್ಞಾನಪೀಠ ಪ್ರಶಸ್ತಿ, ಸಾಹಿತ್ಯ ಅಕಾಡಮಿ ಪ್ರಶಸ್ತಿ, ಮುಂತಾದವು ಬಂದಾಗ ಅಂಥ ಕೃತಿಗಳ ಬಗ್ಗೆ ಓದುಗರಲ್ಲಿ ಕೆಲ ಕಾಲ ಕುತೂಹಲ ವುಂಟಾಗಿ ಅವುಗಳ ಮಾರಾಟ ತುಸು ಚುರುಕುಗೊಳ್ಳಬಹುದಷ್ಟೆ. ಆದರೆ ಜಿ. ನಾರಾಯಣರವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಮನೆ ಮನೆಗೆ ಕನ್ನಡ ಪುಸ್ತಕ ಗಳನ್ನು ಒಯ್ದು ಪ್ರಚಾರ ಮಾಡುವ ಒಂದು ಆಂದೋಲನ ಕೆಲ ಕಾಲ ನಡೆಯಿತು. ಆದರೆ ಅದರಲ್ಲೂ ಎಂದಿನಂತೆ ಕನ್ನಡಿಗರ ಆರಂಭ ಶೂರತ್ವ ವ್ಯಕ್ತವಾಗಿ ಅದು ಈಗ ಅವರ ನೆನಪಿನಿಂದ ಕೂಡ ಮರೆಯಾಗಿ ಹೋಗಿರಬೇಕು

ಈ ಅವಸ್ಥೆ ಕನ್ನಡಕ್ಕೆ ವಿಶಿಷ್ಟವಾದುದೇನಲ್ಲ. ಹಿಂದಿ, ಬಂಗಾಲಿ, ಮಲಯಾಳಿಗಳಂಥ ಕೆಲವೇ ಭಾಷೆಗಳನ್ನು ಬಿಟ್ಟರೆ ಉಳಿದೆಡೆ ಹೆಚ್ಚು ಕಡಿಮೆ ಇಂಥದೇ ಪರಿಸ್ಥಿತಿ. ಆದರೆ ಕಳೆದ ಹನ್ನೆರಡು ಹದಿಮೂರು ವರ್ಷಗಳಿಂದ ಮಹಾರಾಷ್ಟ್ರದಲ್ಲಿ ಈ ಕ್ಷೇತ್ರದಲ್ಲಿ ಒಂದು ಅನುಕರಣೀಯ ಪ್ರಯೋಗ ನಡೆದಿದೆ. ಲೇಖಕ, ಪ್ರಕಾಶಕ, ವಾಚಕ ಈ ಮೂವರಲ್ಲೂ ಒಂದು ಅರ್ಥಪೂರ್ಣ ಸಂಪರ್ಕ, ಸಂಬಂಧ ಕಲ್ಪಿಸುವ ಪ್ರಯತ್ನ ಮರಾಠಿಯಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿದೆ. ಇದೆಲ್ಲಕ್ಕೆ ಕಾರಣ ಅಲ್ಲಿ ಹುಟ್ಟಿದ ವಾಚಕರ ಚಳವಳಿ. 1975ರಲ್ಲಿ ಮರಾಠಿ ಪುಸ್ತಕ ಪ್ರೇಮಿಗಳ 'ಗ್ರಂಥಾಲಿ' ಆಂದೋಲನ ಪ್ರಾರಂಭವಾಯಿತು. ಮನುಷ್ಯನ ಸಂಸ್ಕೃತಿಯಲ್ಲೂ, ಜ್ಞಾನದಲ್ಲೂ ಗ್ರಂಥಗಳ ಪ್ರಭಾವ ಅಪಾರವೆಂಬುದನ್ನು ಗುರುತಿಸಿ ಜನಗಳಲ್ಲಿ ಗ್ರಂಥವಾಚನದ, ವಿಶೇಷತಃ ಒಳ್ಳೆಯ ಗ್ರಂಥಗಳನ್ನು ಓದುವ ಅಭಿರುಚಿಯನ್ನು ಬೆಳೆಸುವುದು 'ಗ್ರಂಥಾಲಿ'ಯ ಮುಖ್ಯ ಉದ್ದೇಶಗಳಲ್ಲಿ ಒಂದು. ಅದಕ್ಕಾಗಿ ಅದು ದೃಕ್-ಶ್ರವಣ ಮಾಧ್ಯಮವನ್ನು ಸಾಧನವಾಗಿ ಬಳಸುತ್ತದೆ. ತಾನು ಹುಟ್ಟಿದ ವರ್ಷವೇ ಅಂದರೆ 1975ರಲ್ಲಿಯೇ 'ಗ್ರಂಥಾಲಿ' 50 ವಿರಳ ಗ್ರಂಥಗಳನ್ನು ಪ್ರಕಟಿಸಿತು. ವಿವಿಧ ವಿಷಯಗಳ ಕುರಿತಾದ ಈ ಗ್ರಂಥಗಳಲ್ಲಿ ಅನೇಕವು ಅದುವರೆಗೆ ನಿರ್ಲಕ್ಷಿಸಲ್ಪಟ್ಟಿದ್ದವು ಎಂಬುದನ್ನು ಗಮನಿಸ

ಬೇಕು. ಮರಾಠಿಯ ಖ್ಯಾತನಾಮ ಸಾಹಿತಿಗಳು, ಶಾಸ್ತ್ರಜ್ಞರು, ಕಲಾವಿದರು, ನಾಟಕಕಾರರು, ತಂತ್ರಜ್ಞರು, ರಾಜಕಾರಣಿಗಳು ಹೀಗೆ ಸಮಾಜದ ವಿವಿಧ ರಂಗಗಳ ಸೃಜನಶೀಲರನ್ನು ಸೇರಿಸಿಕೊಂಡು ಓದುಗರೊಂದಿಗೆ ಅವರ ಹಾಗೂ ಪ್ರಕಾಶಕರ ನೇರ ಸಂಪರ್ಕ ಕಲ್ಪಿಸುವಲ್ಲಿ 'ಗ್ರಂಥಾಲಿ' ಯಶಸ್ವಿಯಾಗಿದೆ.

ವಿಜಯ ತೆಂಡೂಲ್ಕರ, ದಿನಕರ ಗಾಂಗಲ, ಅರುಣ ಸಾಧು, ಡಾ. ಆರ್.ಜಿ. ಲಾಗು, ರಾಮಚಂದ್ರ ವರ್ಝೆ, ಅರುಣ ಮುಜುಮದಾರ, ಅಶೋಕ ದಾತಾರ, ಜಯಂತ ಖೇರ, ಶ್ರೀಕಾಂತ ಲಾಗು, ಕುಮಾರ ಕೇತಕರ, ಶೇಖರ ಸಾಠೆ, ಸಂಜೀವ ಖಾಂಡೇಕರ, ಉಷಾ ಮೆಹತಾ, ವಾಸಂತಿ ಮುಜುಮದಾರ, ಪ್ರೊ. ಪಿ.ಎನ್. ಪರಾಂಜಪೆ, ಸತೀಶ ಜಕಾತದಾರ, ಅನಿಲ ಬಾವೇಲ, ಸುರೇಶ ಪಿಂಗಲಾಸಪುರಕರ, ರವೀಂದ್ರ ಲಾಗು, ಮೀಲಿಂದ ಕೋಕಜೆ, ಕೆ.ಡಿ. ನಾಯ್ಕ, ದಿಲ್ಲಿಯ ಅಶೋಕ ಜೈನ ಮುಂತಾದ ಪ್ರತಿಭಾವಂತರು 'ಗ್ರಂಥಾಲಿ'ಯ ಸಕ್ರಿಯ ಸದಸ್ಯರು ಹಾಗೂ ಅದರ ವಿವಿಧ ಚಟುವಟಿಕೆಗಳಲ್ಲಿ ಭಾಗಿಗಳು.

ಪ್ರತಿ ವರ್ಷವೂ ಹಲವು ಒಳ್ಳೆಯ ಗ್ರಂಥಗಳನ್ನು ಪ್ರಕಟಿಸುವ 'ಗ್ರಂಥಾಲಿ' ತನ್ನ ಸದಸ್ಯರಿಗೆ ವರ್ಗಣಿಯ ಹಣದಲ್ಲಿಯೇ ಅವುಗಳನ್ನು ನೀಡುತ್ತಿದೆ. ಬೇರೆ ಪ್ರಕಾಶಕರು ಪ್ರಕಟಿಸಿದ ಗ್ರಂಥಗಳನ್ನು ತನ್ನ ಸದಸ್ಯರಿಗೆ ಕಡಿಮೆ ಬೆಲೆಗೆ ಕೊಡಮಾಡುತ್ತದೆ. ಪ್ರತಿ ವರ್ಷವೂ ಲೇಖಕರು, ಪ್ರಕಾಶಕರು ಹಾಗೂ ಓದುಗರು ಒಂದೆಡೆ ಕಲೆತು ವಿಚಾರ ವಿನಿಮಯ ಮಾಡಲು ಅನುವಾಗುವಂತೆ ಆಗಾಗ ವಿಚಾರ ಗೋಷ್ಠಿ, ವಿಚಾರಸಂಕಿರಣ, ಪುಸ್ತಕ ಪ್ರದರ್ಶನ, ಕಥಾಕಥನ, ಭಾಷಣ, ಮುಂತಾದ ಕಾರ್ಯಕ್ರಮಗಳನ್ನು 'ಗ್ರಂಥಾಲಿ' ಏರ್ಪಡಿಸುತ್ತದೆ. ಶರದ ಪವಾರ, ಎ.ಆರ್. ಅಂತುಲೆಯವರಂತಹ ರಾಜಕಾರಣಿಗಳು, ಡಾ. ಜಯಂತ ನಾರಳೀಕರರಂತಹ ವಿಜ್ಞಾನಿ, ವಿಶ್ವಾಸ ಬೇಡೇಕರ, ವಿ.ವಾ. ಶಿರವಾಡಕರ, ತ.ಪ. ಕಾಳೆಯವರಂತಹ ಸಾಹಿತಿಗಳು, ಡಾ. ದತ್ತಾ ಸಾಮಂತರಂಥ ಕಾರ್ಮಿಕ ಧುರೀಣ, ರಾಮದಾಸ ಭಟ್ಕಳ




ಅವರಂತಹ ಪ್ರಕಾಶಕ ಇಂಥವರೆಲ್ಲರನ್ನೂ ಒಂದೇ ವೇದಿಕೆಯ ಮೇಲ ಕರೆತಂದು ಅವರೆಲ್ಲ ತಮ್ಮ ಅನುಭವ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಳ್ಳುವಂತೆ ಮಾಡುವುದು; ಓದುಗರು ತಮ್ಮ ಆಸಕ್ತಿ, ಅಭಿರುಚಿಗಳ ಕಲ್ಪನೆಯನ್ನು ಲೇಖಕರಿಗೂ ಪ್ರಕಾಶಕರಿಗೂ ಮಾಡಿಕೊಡುವುದು ಮುಂತಾದ್ದೆಲ್ಲ ಇಂಥ ಯೋಜನೆಯ ಸಾಧನೆಗಳಾಗಿರುತ್ತವೆ. 'ಗ್ರಂಥಾಲಿ'ಯ ಆಶ್ರಯದಲ್ಲಿ ಮಹಿಳಾ ಪ್ರಕಾಶಕರ ಸಮ್ಮೇಲನ ಕೂಡ ಜರುಗಿದೆ. ಇಂತು ಮಹಾರಾಷ್ಟ್ರದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಲ್ಲಿ 'ಗ್ರಂಥಾಲಿ' ಅನೇಕ ಕ್ರಾಂತಿಕಾರಕ

ಮಾರ್ಪಾಡುಗಳಿಗೆ ಕಾರಣವಾಗಿದೆ. 'ಗ್ರಂಥಾಲಿ'ಯ ಒಂದು ಹೆಗ್ಗಳಿಕೆಯೆಂದರೆ ಇಲ್ಲಿ ಕಲ್ಪಿತವಾದ ಮುಕ್ತ ವಾತಾವರಣ, ಇಲ್ಲಿ ಭಾಗವಹಿಸುವವರಿಗೆಲ್ಲ ಸಂಪೂರ್ಣ ವಿಚಾರ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯವಿದೆಯೆಂಬುದನ್ನು ಯಾರೂ ಎತ್ತಿ ಹೇಳಬೇಕಾದ, ಹೇಳಿಕೊಳ್ಳಬೇಕಾದ ಪ್ರಮೇಯವೇ ಇಲ್ಲ. ಯಾವುದೇ ವಿಚಾರ ಪ್ರಣಾಳಿಕೆಯ ಸೃಜನಶೀಲರಿಗೆ, ಸಾಹಿತ್ಯಪ್ರೇಮಿಗಳಿಗೆ ಇದರ ಬಾಗಿಲುಗಳು ಸದಾ ತೆರೆದುಕೊಂಡೇ ಇರುತ್ತವೆ.

'ಗ್ರಂಥಾಲಿ' ಪ್ರಕಟಿಸುವ ಹಾಗೂ ಪುರಸ್ಕರಿಸುವ ಗ್ರಂಥಗಳ ವಿಷಯವೈವಿಧ್ಯದ ಹರಹು ಮತ್ತು ವೈಶಿಷ್ಟ್ಯ ಕೂಡ ಗಮನಾರ್ಹವೇ ಆಗಿದೆ. 'ಉಪರಾ ಮತ್ತು ಬಲುವಾ' ಇಬ್ಬರು ದಲಿತ ಯುವಕರ ಆತ್ಮಕಥನ. ಇದು ಮರಾಠಿಯಲ್ಲಿ ಮಾತ್ರವಲ್ಲ, ಇತರ ಭಾರತೀಯ ಭಾಷೆಗಳಲ್ಲೂ ಮನ್ನಣೆ ಪಡೆದಿದೆ. ಇದು ಅಂತಾರಾಷ್ಟ್ರೀಯ ಮಟ್ಟದಲ್ಲೂ ಗಮನ ಸೆಳೆದಿದೆ. 'ಕ್ಲೋರೋಫಾರ್ಮ್', 'ವೈದ್ಯಕೀ ಸತ್ತಾ' ಔಷಧಿ ಶಾಸ್ತ್ರದ ಅಮೂಲ್ಯ ಗ್ರಂಥಗಳು, ಹಿಂದಿ ಚಲನಚಿತ್ರ ರಂಗಕ್ಕೆ ಅರ್ಥವತ್ತಾದ ಕಾಣಿಕೆ ನೀಡಿ ಇನ್ನೂ ಬೆಳೆಯಬೇಕೆನ್ನುವಾಗಲೇ ಅಗಲಿದ ಗುರುದತ್ತರ ವ್ಯಕ್ತಿತ್ವ, ಕಲೆ, ಸಾಧನೆಗಳನ್ನು ವಿಶ್ಲೇಷಿಸುವ ಒಂದು ಮಹತ್ವದ ಗ್ರಂಥವೂ ಹೊರಬಂದಿದೆ. ಸ್ತ್ರೀ ವಿಮುಕ್ತಿಯ ಕುರಿತಾದ 'ಸ್ತ್ರೀ-ಪುರುಷ'ವೆಂಬ ಗ್ರಂಥದಂತೆ ಪ್ರಾಣಿದಯೆಯ ಬಗೆಗೂ ಒಂದು ಅಪೂರ್ವ ಪುಸ್ತಕ ಹೊರಬಂದಿದೆ. 'ಗ್ರಂಥಾಲಿ' ಪ್ರಕಟಿಸಿದ ಹಲವಾರು ಗ್ರಂಥಗಳಿಗೆ ರಾಜ್ಯ ಮಟ್ಟದ, ರಾಷ್ಟ್ರ ಮಟ್ಟದ ಪ್ರಶಸ್ತಿಗಳೂ ಬಂದಿವೆ. ದೀನಾನಾಥ ಮನೋಹರ ಅವರ ಕೃತಿ 'ರೋಬೋಟ್' ಮಹಾರಾಷ್ಟ್ರ ರಾಜ್ಯ ಪ್ರಶಸ್ತಿ ಗಳಿಸಿದರೆ, ದಲಿತ ಸಾಹಿತಿ ದಯಾ ಪವಾರರಿಗೆ ಅವರ 'ಬಲುಟಾ'ಕ್ಕಾಗಿ ಫೋರ್ಡ್ ಫೌಂಡೇಶನ್ನಿನ ಫೆಲೋಶಿಪ್ ದೊರಕಿದೆ. ಸಂಜೀವ ಖಾಂಡೇಕರರು ಸಂಪಾದಿಸಿದ 'ಸಂಕಲ್ಪ'ಕ್ಕೆ ಮಹಾರಾಷ್ಟ್ರ ಸಾಹಿತ್ಯ ಪರಿಷತ್ ಪ್ರಶಸ್ತಿ ಬಂದಿದೆ. ಲಕ್ಷ್ಮಣ ಮಾನೆಯವರ 'ಉಪರಾ'ಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಫೋರ್ಡ್ ಫೌಂಡೇಶನ್ನಿನ ಫೆಲೋಶಿಪ್ ಸಿಕ್ಕಿವೆ. ರಾಜೇಂದ್ರ ಬನಹಟ್ಟಿಯವರ 'ಅಬೇರಚೇ ಆತ್ಮಚರಿತ್ರ'ಕ್ಕೆ ರಾಜ್ಯ ಸರಕಾರದ ಪ್ರಶಸ್ತಿ ಬಂದಿದೆ. ಅರುಣ ಬೋಪಕರ ರಚಿಸಿದ ಮೂರಂಕಿನ ಶೋಕಾಂತ ನಾಟಕ 'ಗುರುದತ್ತ'ಕ್ಕೆ ರಾಷ್ಟ್ರ ಪ್ರಶಸ್ತಿ ದೊರಕಿದೆ. ಛಾಯಾ ದಾತಾರವರ 'ಸ್ತ್ರೀ-ಪುರುಷ'ಕ್ಕೆ ಶಶವತಿ ಪ್ರಶಸ್ತಿ, ಜಗದೀಶ ಗೋಡಬೋಲೆಯವರ 'ಮೋಹಿಮ ಇಂದ್ರಾವತೀಚೆ'ಗೆ ಕಾಣೇಕರ ಪ್ರಶಸ್ತಿ ಹಾಗೂ ನಾರಾಯಣ ಸುರ್ವೆಯವರ 'ಸನದ' ಎಂಬ ಗ್ರಂಥಕ್ಕೆ ಕರಾಡ ಪುರಸ್ಕಾರ ದೊರೆತಿವೆ. ಆನಂದ ನಾಡಕರ್ಣಿಯವರ 'ವೈದ್ಯ ಕೀಸತ್ತಾ' ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಪ್ರಶಸ್ತಿಯನ್ನು ಪಡೆದರೆ ಕುಮಾರ ಕೇತಕರರ 'ಜ್ವಾಲಾಮುಖೀಚೆ ತೋಂಡಾವರ' ರಾಜ್ಯ ಸರಕಾರದ ಪುರಸ್ಕಾರ ಗಳಿಸಿದೆ. ಈ ಒಂದು ಸಂಸ್ಥೆಯ ಇಷ್ಟೊಂದು ಪ್ರಕಟನೆಗಳಿಗೆ ಪ್ರಶಸ್ತಿ- ಪುರಸ್ಕಾರಗಳು ದೊರೆತಿರುವುದು ಪ್ರಕಟನೆಗಾಗಿ ಗ್ರಂಥಗಳನ್ನು ಆಯ್ಕೆ ಮಾಡುವವರ ಅಭಿರುಚಿಯ ಮಟ್ಟದ ಎತ್ತರಕ್ಕೆ ಸಾಕ್ಷಿಯಾಗಿದೆ.

'ಗ್ರಂಥಾಲಿ' ಆಗೀಗ ನವನವೀನ ಪ್ರಯೋಗಗಳನ್ನೂ ಮಾಡುತ್ತಲೇ ಬಂದಿದೆ. 1982ರಲ್ಲಿ ಓದುಗರಲ್ಲಿಗೆಯೇ ಗ್ರಂಥಗಳನ್ನು ಕೊಂಡೊಯ್ಯುವ 'ಗ್ರಂಥಯಾತ್ರಾ' ಪ್ರಯೋಗ ಅಪೂರ್ವ ಯಶಸ್ಸು ಗಳಿಸಿತು. ಸುಮಾರು ಇನ್ನೂರಕ್ಕೂ ಮಿಕ್ಕ ಸಾಹಿತಿಗಳು, ಪ್ರಕಾಶಕರು, ವಿಜ್ಞಾನಿಗಳು, ಸಮಾಜಸೇವಕರು, ರಾಜಕೀಯ ಧುರೀಣರು, ಅರ್ಥಶಾಸ್ತ್ರಜ್ಞರು, ಮುಂತಾದವರೆಲ್ಲ ಸೇರಿ 18 ದಿನಗಳವರೆಗೆ ಮಹಾರಾಷ್ಟ್ರದ 39 ಕೇಂದ್ರಗಳನ್ನು ಸುತ್ತಾಡಿ ಗ್ರಂಥ ಸಂವಾದ, ಗೋಷ್ಠಿ, ವಿಚಾರಸಂಕಿರಣ, ಪುಸ್ತಕ ಪ್ರದರ್ಶನ ಮೊದಲಾದವುಗಳ ಮೂಲಕ ಓದುಗರಲ್ಲಿ ಅಭಿರುಚಿ, ಆಸಕ್ತಿಗಳನ್ನು ಕೆರಳಿಸುವ ಯತ್ನ ಅಪೂರ್ವ ಯಶಸ್ಸು ಗಳಿಸಿತಲ್ಲದೆ ಹೊಸ ಹೊಸ ಓದುಗರನ್ನೂ ಆಕರ್ಷಿಸಿತು. ಗ್ರಾಮೀಣ ಭಾಗದಲ್ಲಿ 'ಗ್ರಂಥಯಾತ್ರಾ' ಪಡೆದ ಪ್ರೋತ್ಸಾಹ ಅಸಾಮಾನ್ಯವಾದದ್ದು. ಕುಮಾರ ಗಂಧರ್ವರಂತಹ ಸಂಗೀತಗಾರ ಮತ್ತು ಡಾ. ಜಯಂತ ನಾರಳೀಕರರಂಥ ವಿಜ್ಞಾನಿ ಸಾಮಾನ್ಯ ಜನರೊಂದಿಗ ಬೆರೆತು ವಿಚಾರ ವಿನಿಮಯ ಮಾಡುವಂಥ ಜನಸಂಪರ್ಕ

ಕಾರ್ಯಕ್ರಮಗಳನ್ನೂ ಯೋಜಿಸಿ ಸಫಲವಾಗಿದೆ. 'ಗ್ರಂಥಾಲಿ' ಪ್ರತಿ ವರ್ಷ ಡಿಸೆಂಬರ್ 25 ರಂದು ವಾಚಕರ ದಿನವನ್ನು 'ಗ್ರಂಥಾಲಿ' ಆಚರಿಸುತ್ತದ.

'ಗ್ರಂಥಾಲಿ'ಯು ಸಾಮಾನ್ಯ ಸದಸ್ಯರಿಂದ ವರ್ಷದ ವರ್ಗಣೆಯೆಂದು ರೂ. 50ನ್ನು ಪಡೆದು ಅವರಿಗೆ ಅಷ್ಟು ಬೆಲೆಯ ಪ್ರಕಟಣೆಗಳನ್ನು ರಿಯಾಯ್ತಿ ದರದಲ್ಲಿ ಕೊಡುತ್ತದಲ್ಲದೆ, ಈ ಸದಸ್ಯರು ಅದು ಸಂಘಟಿಸುವ ಎಲ್ಲ ಕಾರ್ಯಕ್ರಮಗಳಲ್ಲೂ ಭಾಗವಹಿಸಬಹುದಾಗಿದೆ. ರೂ. 155 ನೀಡಿ ಆಜೀವ ಸದಸ್ಯರೂ ಆಗಬಹುದಲ್ಲದೆ ಎಲ್ಲ ಕಾರ್ಯಕ್ರಮಗಳಿಗೂ ಪೋಷಕರಾಗಬಹುದು. ದಾನಿಗಳು ಪುಸ್ತಕ ಪ್ರಕಟನೆಯ ಯೋಜನೆಗೆ ಪೋಷಕರಾಗಿ ಸಹಕರಿಸಬಹುದಾಗಿದೆ, ಮರಾಠಿಯಲ್ಲಿ ಹೆಚ್ಚೆಚ್ಚಾಗಿ ವಿಜ್ಞಾನ ಸಾಹಿತ್ಯವನ್ನು ಹೊರತರಲೋಸುಗ 'ಗ್ರಂಥಾಲಿ' ವಿಜ್ಞಾನ ಗ್ರಂಥಗಳನ್ನು ಪ್ರಕಟಿಸುವುದೊಂದಿಗೆ 'ವಿಜ್ಞಾನ ಗ್ರಂಥಾಲಿ' ಯೆಂಬ ಪತ್ರಿಕೆಯನ್ನೂ ಪ್ರಕಟಿಸುತ್ತದೆ. 'ಗ್ರಂಥಮಾಲಾ' ಎಂಬುದು ಮಹಾರಾಷ್ಟ್ರದಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಪರಿಚಯಿಸುವ ಏಕಮೇವ ನಿಯತಕಾಲಿಕೆಯಾಗಿದೆ. ಗ್ರಂಥ ಪ್ರಕಾಶನ ಹಾಗೂ ವಿಚಾರ ಮಂಥನಗಳಿಗೆ ವಾಹಕವಾಗಿ 'ರುಚಿ' ಎಂಬ ಮಾಸಪತ್ರಿಕೆ 'ಗ್ರಂಥಾಲಿ'ಯ ಇನ್ನೊಂದು ಮಹತ್ವದ ಪ್ರಕಟನೆ. ವಿಚಾರ ವಿಮರ್ಶೆಗೆ ಇದರಲ್ಲಿ ಪ್ರಾಧಾನ್ಯ. ಭಾರತದ ಪಶ್ಚಿಮ ಕರಾವಳಿಗೆ ಸಮಾಂತರವಾಗಿ ಮಹಾರಾಷ್ಟ್ರ, ಕರ್ನಾಟಕ, ಕೇರಳಗಳಲ್ಲಿ ಹಬ್ಬಿರುವ ಪಶ್ಚಿಮ ಘಟ್ಟಗಳ ರಕ್ಷಣೆಗಾಗಿ 'ಸಹ್ಯಾದ್ರಿ ಬಚಾವೋ' ದಂತಹ ಆಂದೋಲನದ ಸಮಗ್ರ ವಿಚಾರ ಪ್ರಕಟಣೆಯ ಕಾರ್ಯದ ಹೊಣೆಯನ್ನು 'ರುಚಿ' ಹೊತ್ತುಕೊಂಡಿದೆ. 'ಸ್ತ್ರೀವಿಮುಕ್ತಿ' ವಿಚಾರ ಗೋಷ್ಠಿಯ ಸಮಗ್ರ ದರ್ಶನವನ್ನೂ ಇದು ಮಾಡಿಸಿದೆ.

'ಗ್ರಂಥಾಲಿ' ಮಕ್ಕಳನ್ನು ಮರೆತಿಲ್ಲ. 'ಬಾಲ ಝುಂಜಡ' ಎಂಬ ವಿಶೇಷ ಪುಸ್ತಕ ಪ್ರದರ್ಶನವನ್ನು ಮಕ್ಕಳಿಗಾಗಿಯೆಂದೇ ಆಗಾಗ ಏರ್ಪಡಿಸಿ ವಿವಿಧ ವಿಷಯಗಳಲ್ಲಿ ಮಕ್ಕಳಲ್ಲಿ ಕುತೂಹಲ, ಆಸಕ್ತಿ ಬೆಳೆಯುವಂತೆ ಯತ್ನಿಸುತ್ತಿದೆ. ಕಳೆದ ವರ್ಷ ಮುಂಬಯಿಯ ಶಿವಾಜಿ ಪಾರ್ಕಿನಲ್ಲಿ ನಾಲ್ಕು ದಿನಗಳ ಕಾಲ ಪುಸ್ತಕ ಪ್ರದರ್ಶನವನ್ನೇರ್ಪಡಿಸಿ ಸಹಾಸ್ರಾವಧಿ ಮಕ್ಕಳನ್ನು ರಂಜಿಸಿತು. ಮರಾಠಿ ಪುಸ್ತಕಗಳ ಜೊತೆಗೆ ಇಂಗ್ಲೀಷ್, ಹಿಂದಿ, ಗುಜರಾತಿ ಹಾಗೂ ಕೆಲ ಕನ್ನಡ ಪುಸ್ತಕಗಳನ್ನೂ ಇಲ್ಲಿ ಪ್ರದರ್ಶಿಸಲಾಗಿತ್ತು. ಭಾರತದ ಎಲ್ಲ ಭಾಷೆಗಳಲ್ಲಿಯ ಮಕ್ಕಳ ಪುಸ್ತಕ ಪ್ರದರ್ಶನಗಳನ್ನು ರಾಷ್ಟ್ರದ ಎಲ್ಲ ಭಾಷಾಕೇಂದ್ರಗಳಲ್ಲೂ ಏರ್ಪಡಿಸುವ ಯೋಜನೆಯೊಂದನ್ನು 'ಗ್ರಂಥಾಲಿ' ಹಾಕಿಕೊಂಡಿದೆ. ನ್ಯಾಶನಲ್ ಬುಕ್ ಟ್ರಸ್ಟ್ ಈ ಯೋಜನೆಯಲ್ಲಿ 'ಗ್ರಂಥಾಲಿ'ಗೆ ತುಂಬ ಸಹಾಯ ನೀಡುತ್ತದೆ. ಇಂದಿನ ಮಕ್ಕಳೇ ನಾಳಿನ ನಾಗರಿಕರು ಎಂಬುದನ್ನು ಗುರುತಿಸಿದ 'ಗ್ರಂಥಾಲಿ' ವಿವಿಧೆಡೆಗಳಲ್ಲಿ ಮಕ್ಕಳ ಸಾಹಿತ್ಯ ಹಾಗೂ ಚಿತ್ರಕಲಾ ಸ್ಪರ್ಧೆಗಳನ್ನು ಆಗೀಗ ಸಂಘಟಿಸುತ್ತಿರುತ್ತದೆ. ಮಹಾರಾಷ್ಟ್ರದ ಹಲವಾರು ಕೇಂದ್ರಗಳಲ್ಲದೆ ಮಹಾರಾಷ್ಟ್ರದ ಹೊರಗೆ ಕೂಡ ಮರಾಠಿ ಭಾಷಿಕರ ಸಂಖ್ಯೆ ಸಾಕಷ್ಟಿರುವ ಗುಜರಾತದ ಬಡೋದಾ (ವಡೋದರಾ), ಕರ್ನಾಟಕದ ನಿಪ್ಪಾಣಿ ಮತ್ತು ಬೆಳಗಾವಿ, ಮಧ್ಯಪ್ರದೇಶದ ಇಂದೂರು, ಮತ್ತು ಹೊಸದಿಲ್ಲಿಗಳಲ್ಲಿ 'ಗ್ರಂಥಾಲಿ'ಯ ಶಾಖೆಗಳಿವೆ. ಮುಂಬಯಿ ಮಹಾನಗರದ




"ಭಾನುವಾರಾ ರಜಾ. ನಮ್ಮೆಜಮಾನ್ರು ಮನೆಗೆಲ್ಲ ನೋಡ್ಕೋತಾರೆ. ನಾನು ಇದ ನ್ನೋಡೋಣ ಅಂತ ಬಂದೆ.."

ಅನೇಕ ಉಪನಗರಗಳಲ್ಲಿಯೂ ಇದರ ಕೇಂದ್ರಗಳಿವೆ.

ಸರಕಾರದ ಧನಸಹಾಯವಿಲ್ಲದೆ ಸ್ವಯಂ ಸ್ಫೂರ್ತಿಯಿಂದ ಆಸಕ್ತಿಯುಳ್ಳವರು ಮುಂದೆ ಬಂದ ಕಾರ್ಯಕರ್ತರಿಂದಲೇ ನಡೆಯುತ್ತಿರುವುದೇ 'ಗ್ರಂಥಾಲಿ'ಯ ವೈಶಿಷ್ಟ್ಯ. ಜ್ಞಾನ ಪ್ರಸಾರದ ಸರಕಾರೀಕರಣದಿಂದ ದೂರ ಉಳಿಯುವುದು ಈ ಆಂದೋಲನದ ಪ್ರವರ್ತಕರ ಧ್ಯೇಯಗಳಲ್ಲಿ ಮಹತ್ವದ್ದು. ಇದರಿಂದಾಗಿಯೇ ಮರಾಠಿ ಸಾಹಿತ್ಯ, ಸಂಸ್ಕೃತಿ ಪ್ರಚಾರ ಪರಿಣಾಮಕಾರಿಯಾಗಿ ನಡೆಯಲು ಸಾಧ್ಯವೆಂದು ಅವರು ದೃಢವಾಗಿ ನಂಬಿದ್ದಾರೆ. ಭಾರತದ ಬೇರೆ ಯಾವುದೇ ಭಾಷೆಯಲ್ಲಿ ಈ ಬಗೆಯ ಪ್ರಯತ್ನಗಳು ಆಗಿಲ್ಲವೇನೊ. 'ಗ್ರಂಥಾಲಿ'ಯ ಆಶ್ರಯದಲ್ಲಿ ಸುಮಾರು 500 ಸ್ವಯಂ ಸೇವಕರು, 200 ಲೇಖಕ-ಪ್ರಕಾಶಕ-ತಜ್ಞರು ಎರಡು ಲಕ್ಷಕ್ಕೂ ಹೆಚ್ಚು ಗ್ರಂಥಗಳನ್ನು ಸಂಗ್ರಹಿಸಿ ಮಹಾರಾಷ್ಟ್ರದಲ್ಲೂ ಭಾರತದ ಇತರಕಡೆ ವಿತರಿಸುವ ಹೆಗ್ಗುರಿಯನ್ನು ಇರಿಸಿಕೊಂಡಿದೆ. 'ಗ್ರಂಥಾಲಿ'ಯ ಸದ್ಯದ ಅಧ್ಯಕ್ಷರು ವಿಜಯ ತೆಂಡೂಲ್ಕರರಾದರೆ, ದಿನಕರ ಗಾಂಗಲ ಕಾರ್ಯದರ್ಶಿ ಮತ್ತು ರಾಮಚಂದ್ರ ವರ್ಧೆ ಕೋಶಾಧ್ಯಕ್ಷರು.

'ಗ್ರಂಥಭೇಂಟ'ದಂತಹ ಆಕರ್ಷಕ ಯೋಜನೆಯನ್ನೂ 'ಗ್ರಂಥಾಲಿ' ಅನುಷ್ಠಾನಕ್ಕೆ ತಂದಿದೆ. ಈ ಯೋಜನೆಯನ್ವಯ ಹತ್ತು ಸಾವಿರ ಬೆಲೆಯ ಪುಸ್ತಕ ಹಾಗೂ ಬಹುಮಾನದ ವಸ್ತುಗಳನ್ನು ಕೇವಲ ಆರು ಸಾವಿರಕ್ಕೆ ಕೊಡಮಾಡಲಾಗುತ್ತದೆ. ಒಂದು ಕಾಲೇಜು ಅಥವಾ ಪ್ರೌಢಶಾಲೆಯ 25 ವಿದ್ಯಾರ್ಥಿಗಳನ್ನು ಆಯ್ಕೆಮಾಡಿ ಪ್ರತಿಯೊಬ್ಬರಿಗೂ ಆರು ನೂರು ರೂಪಾಯಿ ಬೆಲೆಯ ಪುಸ್ತಕ ಹಾಗೂ ಬಹುಮಾನ ವಸ್ತುಗಳನ್ನು ನೀಡಿ ಅವರಿಂದ ಮಾರಾಟ ಮಾಡಿಸುತ್ತದೆ.

ಒಳ್ಳೆಯ ವಿಚಾರ ನಿದರ್ಶನ ಎಲ್ಲಿಂದ ಬಂದರೂ ಅದನ್ನು ಸ್ವಾಗತಿಸಬೇಕು, ಸ್ವೀಕರಿಸಬೇಕು. ಕನ್ನಡದ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳವರು ನಮ್ಮ ನೆರೆ ರಾಜ್ಯದಲ್ಲೇ ಕ್ರಿಯಾಶೀಲವಾಗಿರುವ 'ಗ್ರಂಥಾಲಿ'ಯಂತಹ ಯೋಜನೆಗಳಿಂದ ಕಲಿಯಬೇಕಾದದ್ದು ಬೇಕಾದಷ್ಟಿದೆ. ●

ಎಸ್. ರವಿಕುಮಾರ್

# ರಹಸ್ಯ

ಮರಗಿಡಗಳು ಭೂದೇವಿ ತನ್ನ ಗರ್ಭದಲ್ಲಿ ಅಡಗಿಸಿದ್ದ ರಹಸ್ಯಗಳನ್ನು ಹೊರಹಾಕುತ್ತವೆ. ಕಳೆದ ಅನೇಕ ವರ್ಷಗಳಲ್ಲಿ ಕೆನಡಾ ದೇಶದ ಬ್ರಿಟಿಷ್ ಕೋಲಂಬಿಯಾ ಪರ್ವತಗಳ ಮೇಲೆ ವಿಮಾನ ಹಾಗೂ ಹೆಲಿಕಾಪ್ಟರ್‌ಗಳಲ್ಲಿ ವಿಜ್ಞಾನಿಗಳು ಅನೇಕ ಹಾರಾಟಗಳನ್ನು ನಡೆಸಿದರು.

ಹೆಲಿಕಾಪ್ಟರ್ ಸುಮಾರು ಆರು ಸಾವಿರ ಅಡಿ ಎತ್ತರದಲ್ಲಿ ಹಾರಾಡುತ್ತಿದ್ದಾಗ ಗುಡ್ಡದ ಮೇಲಿರುವ ಗಿಡಗಂಟೆಗಳನ್ನು, ನಾನಾ ಬಗೆಯ ಸಸ್ಯಗಳನ್ನು ವೀಕ್ಷಿಸುತ್ತಿದ್ದ ವಿಜ್ಞಾನಿಯೊಬ್ಬ ಇದ್ದಕ್ಕಿದ್ದಂತೆಯೇ ಉತ್ತೇಜಿತನಾಗಿ "ಇಲ್ಲಿ ಬಂಗಾರ ದೊರೆಯುತ್ತದೆ" ಎಂದು ಉದ್ಗರಿಸಿದ. ಹಾಗೆಯೇ ಮುಖ್ಯ ಪ್ರಯೋಗಾಲಯಕ್ಕೆ ಸಂದೇಶವನ್ನೂ ಕಳಿಸಿದ.

ಆ ಸ್ಥಳದಲ್ಲಿ ಬಂಗಾರ ದೊರೆಯುವ ಸಾಧ್ಯತೆ ವಿಜ್ಞಾನಿಗೆ ಹೇಗೆ ಕಂಡುಬಂತು? ಅದಕ್ಕೆ ಕಾರಣ ಅಲ್ಲಿಯ ಸಸ್ಯಗಳು. ಒಂದು ಪ್ರದೇಶದಲ್ಲಿ ಬೆಳೆಯುವ ಸಸ್ಯಗಳ ಪ್ರಕಾರಗಳ ಆಧಾರದ ಮೇಲಿಂದ ಅಲ್ಲಿ ದೊರೆಯುವ ಖನಿಜ ಸಂಪತ್ತನ್ನು ನಿರ್ಧರಿಸಲಾಗುತ್ತದೆ. ಇತ್ತೀಚೆಗೆ ಭೂಸಸ್ಯಶಾಸ್ತ್ರ (Geo-Botany) ಎಂಬ ಹೊಸ ವೈಜ್ಞಾನಿಕ ವಿಭಾಗ ಭರದಿಂದ ಬೆಳೆಯುತ್ತಿದೆ.

# ಹೊರ ಹಾಕುವ ಸಸ್ಯಗಳು

ಕೆನಡಾದ ವಿಜ್ಞಾನಿಗಳು ಬ್ರಿಟಿಶ್ ಕೋಲಂಬಿಯಾ ಪರ್ವತದ ಕೆಲವೊಂದು ಭಾಗವನ್ನು ಪ್ರಯೋಗಕ್ಕಾಗಿ ಆಯ್ದುಕೊಂಡರು. ಅಲ್ಲಿ ಬೆಳೆಯುವ ನಾನಾ ಬಗೆಯ ಸಸ್ಯಗಳನ್ನು ಬೇರುಸಹಿತ ಕಿತ್ತು, ಪೆಟ್ಟಿಗೆಗಳಲ್ಲಿ ತುಂಬಿಕೊಂಡು ಪಯೋಗ ಶಾಲೆಗೆ ತಂದರು. ಆ ಸಸ್ಯಗಳನ್ನು ಕತ್ತರಿಸಿ, ಬೇರುಗಳನ್ನು ಒಂದು ಪೆಟ್ಟಿಗೆಯಲ್ಲಿ, ಕೊಂಬೆಗಳನ್ನು ಇನ್ನೊಂದು ಪೆಟ್ಟಿಗೆಯಲ್ಲಿ ತುಂಬಿ ಒಣಗಿಸಿದರು.

ಅನಂತರ ಬೇರು, ಕಾಂಡ ಮತ್ತು ಎಲೆಗಳನ್ನು ಬೇರೆ ಬೇರೆಯಾಗಿಯೇ ಸುಟ್ಟು, ಬೂದಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದರು. ಆಗ ಕಾಂಡ ಮತ್ತು ಕೊಂಬೆಗಳಿಂದ ದೊರೆತ ಬೂದಿಯಲ್ಲಿ ಬಂಗಾರದ ಅಂಶವು ಗಣನೀಯ ಪ್ರಮಾಣದಲ್ಲಿರಲಿಲ್ಲ. ಬೇರಿನಿಂದ ದೊರೆತ ಬೂದಿಯಲ್ಲಿ ಬಂಗಾರದ ಅಂಶವು ಹೆಚ್ಚಿನ ಪ್ರಮಾಣದಲ್ಲಿತ್ತು.

ಗಿಡಗಳ ಬೇರುಗಳು ಭೂಮಿಯಲ್ಲಿ ಆಳವಾಗಿ ಇಳಿದುಹೋಗುವುದರಿಂದ ಆ ಭಾಗದಲ್ಲಿ ಭೂಮಿಯನ್ನು ಹೆಚ್ಚೆಚ್ಚು ಆಳವಾಗಿ ಅಗೆಯುತ್ತಾ ಹೋದಂತೆ, ಹೆಚ್ಚಾಗಿ ಬಂಗಾರದ ಅದಿರು ದೊರೆಯುತ್ತದೆಂದು ನಿರ್ಧರಿಸಲಾಯಿತು. ಇದರಿಂದ ವ್ಯರ್ಥವಾಗಿ ಭೂಮಿಯನ್ನು ಅಗೆಯುವುದನ್ನು ತಪ್ಪಿಸಲಾಯಿತು.

ಸಸ್ಯಗಳನ್ನು ಪ್ರಯೋಗಕ್ಕೆ [illegible] ಭೂಪ್ರದೇಶದಲ್ಲಿ ಯಾವ ಯಾವ ಖನಿಜವು, ಎಷ್ಟೆಷ್ಟು ಪ್ರಮಾಣದಲ್ಲಿ ದೊರೆಯುತ್ತದೆಂದು ಕಂಡುಹಿಡಿಯಬಹುದಾಗಿದೆ.

ಯುರೇನಿಯಂ ಅದಿರು ಹೆಚ್ಚಿನ ಪ್ರಮಾಣದಲ್ಲಿ ದೊರೆಯುವ ಪ್ರದೇಶದಲ್ಲಿ ಗಂಧಕ (sulphur) ಸಹ ಹೆಚ್ಚಿನ ಪ್ರಮಾಣದಲ್ಲಿ ಸಿಕ್ಕುತ್ತದೆ. ಸಸ್ಯ ಸಾಮ್ರಾಜ್ಯದಲ್ಲಿ ಕೇವಲ ನಾಲ್ಕು ಬಗೆಯ ಸಸ್ಯಗಳು ಮಾತ್ರ ಗಂಧಕವನ್ನು ಹೀರಿಕೊಂಡು ಬೆಳೆಯುತ್ತವೆ. ಒಂದು ನಿರ್ದಿಷ್ಟ ಸ್ಥಳದಲ್ಲಿ ಕೇವಲ ಈ ನಾಲ್ಕು ಬಗೆಯ ಮರಗಳ ಬೆಳವಣಿಗೆ ಮಾತ್ರ ಹೆಚ್ಚಾಗಿದ್ದರೆ, ಆ ಭಾಗದಲ್ಲಿ ಯುರೇನಿಯಂನ ಅದಿರು ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತದೆ.

ಒಂದು ವೇಳೆ ಆ ಪ್ರದೇಶದ ಕಲ್ಲು ಮಣ್ಣುಗಳನ್ನು ಪರೀಕ್ಷಿಸಿ, ಯುರೇನಿಯಂ ಅದಿರಿನ ಅಸ್ತಿತ್ವವನ್ನು ತಿಳಿಯಬೇಕಾದರೆ, ಪ್ರಯೋಗಗಳಿಗೆಂದು ಭೂಮಿ ಅಗೆಯುವುದಕ್ಕಾಗಿ ತುಂಬಾ ಹಣ ವೆಚ್ಚ ಮಾಡಬೇಕಾಗುತ್ತದೆ. ಭೂ ಸಸ್ಯಶಾಸ್ತ್ರ ಈ ವೆಚ್ಚವನ್ನು ಉಳಿತಾಯ ಮಾಡುತ್ತದೆ.

ಅರಿಜೋನಾದ ಸ್ಯಾನ್ ಮ್ಯಾನುಯೆಲ್ ಎಂಬಲ್ಲಿ ಎರಡು ವಿಧವಾದ ಓಕ್ ಮರಗಳು ಸುಮಾರು ಇಪ್ಪತ್ತು ಅಡಿ ಎತ್ತರದವರೆಗೆ ಬೆಳೆದಿದ್ದನ್ನು ವಿಜ್ಞಾನಿಗಳು ಕಂಡರು. ಸಸ್ಯಶಾಸ್ತ್ರದ ಪ್ರಕಾರ ತಾಮ್ರದ ಅಂಶ ದೊರೆತಲ್ಲಿ ಮಾತ್ರ ಓಕ್ ಮರಗಳು ಇಷ್ಟು ಎತ್ತರಕ್ಕೆ ಬೆಳೆಯಬಲ್ಲವು. ಆದ್ದರಿಂದ ಸ್ಯಾನ್‌ಮ್ಯಾನುಯೆಲ್ ಪ್ರದೇಶದಲ್ಲಿ ತಾಮ್ರ ದೊರೆಯುತ್ತದೆ ಎಂದು ತೀರ್ಮಾನಿಸಿದರು. ಈಗ ಅರಿಜೋನಾದಲ್ಲಿ ಸ್ಯಾನ್‌ಮ್ಯಾನುಯೆಲ್ ಗಣಿಯು ಅತ್ಯಂತ ಸಮೃದ್ಧ ತಾಮ್ರದ ಗಣಿಯೆಂದು ಹೆಸರು ಪಡೆದಿದೆ.

ಈ ರೀತಿ ಅನೇಕ ವಿಧದ ಖನಿಜಗಳ ಪತ್ತೆಗೆ ಸಸ್ಯಗಳು ಬಹು ಉಪಯುಕ್ತವಾಗಿವೆ. ಕಡಿಮೆ ಖರ್ಚಿನಲ್ಲಿ ಹೆಚ್ಚಿನದನ್ನು ತೋರಿಸಿಕೊಡುವ ಸಸ್ಯಗಳಿಗೆ ಮಾನವ ಕೊಡಲಿ ಹಾಕುವುದಕ್ಕೆ ಮೊದಲು ಯೋಚಿಸಬೇಕಾಗಿದೆ. ನಾವು ಸಸ್ಯಗಳಿಗೆ ಯಾವಾಗಲೂ ಕೃತಜ್ಞರಾಗಿರಬೇಕು, ಕೊಲೆಗಡುಕರಾಗಬಾರದು.

# ಪದಾರ್ಥ ಚಿಂತಾಮಣಿ

ಪಾವೆಂ.

## — 122 —

## ಸಾಯುವ ಆಟ-ಬೋರ್ ಭೈರಿಗೆ

ಕೆಲ ಭಾಷೆಗಳಲ್ಲಿ ಕೆಲ. ದೇಶಗಳಲ್ಲಿ ಕೆಲ ಶಬ್ದಗಳು ಚಿತ್ರವಿಚಿತ್ರವಾದ ಅರ್ಥಛ್ಛಾಯೆಗಳನ್ನು ಸಂಪಾದಿಸಿಕೊಳ್ಳುತ್ತವೆ. ಕನ್ನಡ 'ಸಾಯ್' ಧಾತುವನ್ನೇ ತೆಗೆದುಕೊಳ್ಳುವಾ. ಕೇಶಿರಾಜನು ಈ ಧಾತುವನ್ನು ಮರಣಾರ್ಥಕವೆಂದು ಹೇಳುತ್ತಾನೆ. ದಕ್ಷಿಣದ್ರಾವಿಡ ತಮಿಳು, ಮಲೆಯಾಳಿಗಳಲ್ಲಿಯೂ, ತೆಲುಗಿನಲ್ಲಿ, ತುಳುವಿನಲ್ಲಿಯೂ ಇದಕ್ಕೆ ಸಂವಾದಿ ಧಾತುಗಳಿವೆ. ಅರ್ಥವೂ ಅದೇ. "ಆತ ಸತ್ತ", "ಸಾಯಬೇಕೆನಿಸುತ್ತೆ", "ತಾನು ಸಾಯಬೇಕು", "ಸ್ವರ್ಗ ಪಡೆಯಬೇಕು" ಇವೆಲ್ಲ ನೇರವಾಗಿ ಮರಣವನ್ನೇ ಸೂಚಿಸುತ್ತವೆ.

ಆಮೇಲೆ "ಸಾಯಲಿ, ನನಗೇನು?" ಎನ್ನುವಾಗ ಈ ಧಾತು ಸಾಯುವುದನ್ನು ಹಾಳಾಗುವದಕ್ಕೆ ಸರಿಹೊಂದಿಸುತ್ತದೆ. ಹೇಳಿದ್ದನ್ನು ಕೇಳದೆ ಹುಚ್ಚಾಬಟ್ಟೆಯಾಗಿ ವರ್ತಿಸುವವರಿಗೆ ಅನ್ವಯಿಸುವಾಗ ಲಕ್ಷಣಾವೃತ್ತಿಯಿಂದ ಅರ್ಥಾಂತರವಾಯಿತು. ಇಂಗ್ಲೀಷಿನಲ್ಲಿ Let him die! ಎಂದು ವಿರಕ್ತಿಯಿಂದ ಉದ್ಗರಿಸುವುದೂ ಇದೇ ಅರ್ಥದಲ್ಲಿ. ಹಿಂದಿಯಲ್ಲಿಯೂ ಸಮಾನ ಪ್ರಯೋಗ ಸಿಗುತ್ತದೆ. "ಮರನೇದೋ, ಮುಝೇ ಕ್ಯಾ?" ಇದ ರಿಂದಾಚೆಗೆ ವಿಚಿತ್ರಗಳನ್ನು ನೋಡಬಹುದು. "ಇವನು ಹೀಗೆ ನಡಕೊಂಡರೆ ನಾನು ಏನು ಸಾಯಬೇಕು ಹೇಳಿ?" ಅಥವಾ "ಏನು ಸಾಯಲಿ?"- ಇಲ್ಲಿ 'ಸಾಯ್' ಎನ್ನುವ ಅಕರ್ಮಕ ಧಾತು ಒಂದು ತರಹದ ಅರ್ಥ ಸಕರ್ಮಕತ್ವವನ್ನು ಸಂಪಾದಿಸುವುದಿಲ್ಲವೆ? ಇಲ್ಲಿ 'ಸಾಯ್' ಧಾತು 'ಮಾಡು' ಎಂಬರ್ಥಕ್ಕೆ ತಿರುಗುತ್ತದೆ. ಸಂಗಡಲೇ ಒಂದು ತರದ ವಿರಕ್ತಿಯನ್ನು, ಬೇಜಾರನ್ನು ದ್ಯೋತಿಸುವ ಈ ಪ್ರಯೋಗಕ್ಕೆ ತುಳುವಿನಲ್ಲಿ ("ದಾನೆ ಸಯ್ಯುನಿ?" "ದಾನೆ ಸಯ್ಯೊಡು?") ಸಮಾನ ಪ್ರಯೋಗ ಸಿಕ್ಕಿದರೂ ಹಿಂದಿಯಲ್ಲಿ ಅದು ಕಾಣಿಸುವುದಿಲ್ಲವೆಂದು ನನ್ನ ಹಿಂದೀ ಮಿತ್ರರು ಹೇಳುತ್ತಾರೆ. ಇಂಗ್ಲೀಷಿನಲ್ಲಿ ಅಂತೂ ಇಲ್ಲವೇ ಇಲ್ಲ. ಅಕರ್ಮಕದಲ್ಲೇ "ಇಷ್ಟು ಹೊತ್ತು ಎಲ್ಲಿ ಸತ್ತಿದ್ದಿ?" ಎನ್ನುವಾಗ ಸಾಯುವುದು 'ಇರು' ಎಂಬುದಕ್ಕೋ 'ಹೋಗು' ಎಂಬದಕ್ಕೋ ಸಮವಾಗುತ್ತದೆ. ಇದು ಕೋಪ ಮತ್ತು ಅಸಹನೆಯ ಬಲದಿಂದ ಆದ ಅರ್ಥವಿಪರ್ಯಯ.

"ಹೋಳಿಗೇ ಅಂದರೆ ಸಾಯುತ್ತಾನೆ", "ಹೆಂಡತೀ ಅಂದರೆ ಸಾಯುತ್ತಾನೆ" ಅಥವಾ "ಜೀವ ಬಿಡುತ್ತಾನೆ" ಎಂಬಲ್ಲಿ ಸಾಯುವುದು ಅತಿಯಾದ ಆಸಕ್ತಿ ಪ್ರೀತಿ ಎಂಬ ಭಾವವನ್ನು ದ್ಯೋತಿಸಿ ಈ ಹಿಂದಿನ ಉದಾಹರಣೆಗಳ ವಿರುದ್ಧಾರ್ಥದಲ್ಲಿ ಅವತರಿಸುತ್ತದೆ. ಇದಕ್ಕಾದರೆ ಬೇರೆ ಭಾಷೆಗಳಲ್ಲಿ ಸಮಾನಾಂತರ ವಾಗ್ಧೋರಣೆಗಳು ಸಿಗುತ್ತವೆ. "ಔರತ್ ಪರ್ ಮರತಾ ಹೈ" He dies on her - ಅವಳೆಂದರೆ ಜೀವ ಬಿಡುತ್ತಾನೆ, ಎಂಬುದನ್ನು ಉದಾಹರಿಸಬಹುದು. ಇಲ್ಲಿ "ಸಾಯು"ವುದು ಯಾವುದಾದರೊಂದು ಪ್ರಿಯ ಅಥವಾ ಗೌರವಾರ್ಹ ವಸ್ತುವನ್ನು ಪಡೆಯುವುದಕ್ಕೆ ಅಥವಾ ಕಾಪಾಡುವುದಕ್ಕಾಗಿ ಸಾಯಲು ಸಿದ್ಧವಾಗಿರುವುದಲ್ಲ, ಹಾಗೆ ಮಾಡುವುದಕ್ಕೆ "ಜೀವ ಕೊಡು"ವುದೆನ್ನುತ್ತೇವೆ.

ಎಲ್ಲಕ್ಕಿಂತ ಸೋಜಿಗದ ಸಾವು ಕರುಣೆಯಿಂದ ಹುಟ್ಟುವಂಥಾದ್ದು. "ಅವನನ್ನು ಹಿಡಿದು ಚಚ್ಚಿ-ಹಾಕಬಹುದಿತ್ತು. ಸಾಯಲಿ ಅಂತ ಬಿಟ್ಟೆ", ಅಥವಾ "ಪಾಪ, ಸಾಯಲಿ ಬಿಟ್ಟು ಬಿಡಿ!" ಎಂದು ಹೇಳುವಾಗ ತಿರಸ್ಕಾರ

ಮಿಶ್ರಿತ ಕರುಣೆ ಪ್ರೇರಣೆ ಕೊಡುತ್ತದೆ. ಆಲೋಚನೆ ಮಾಡಿದರೆ ಕಚಕುಳಿ ಇಡುವಂಥ ಅರ್ಥ, ವೈಪರೀತ್ಯ ವಿದು. "ಸಾಯಲಿ" ಅಂತ ನಿಮಗೆ ಅನಿಸುವುದಾದರೆ ಬಿಟ್ಟು ಬಿಡುವುದೇಕೆ? ಕೊಂದೇ ಹಾಕಬಹುದಲ್ಲ? ನಾನ್ಯಾಕೆ ಕೊಲ್ಲುವ ಕಷ್ಟ ತೆಗೆದುಕೊಳ್ಳಲಿ, ಅವನೇ ತನ್ನಷ್ಟಕ್ಕೆ ಸಾಯಲಿ ಅಂತಲೊ?

ಮತ್ತೆ ಬಂಗಾಲಿಯಲ್ಲಿ "ಮರಿ ಮರಿ" ಅಂದರೆ "ಅಯ್ಯೋ ಪಾಪ" ಅಂತ (ಮರಾ=ಸಾಯಿ).

ಸಾಯುವುದನ್ನು ನಾವು ಕಾಮಕ್ಕೆ, ಕ್ರೋಧಕ್ಕೆ, ಲೋಭಕ್ಕೆ, ಮೋಹಕ್ಕೆ ಅಲ್ಲದೆ ಕರುಣೆಗೆ ತಳಕು ಹಾಕಿದ್ದೇವೆ. ಬೇರೆ ಭಾಷೆಗಳಲ್ಲಿ– ವಿಶೇಷವಾಗಿ ಪಾಶ್ಚಾತ್ಯ ಭಾಷೆಗಳಲ್ಲಿ ಇಂಥ ವಿಸ್ತೃತ ಅರ್ಥವೈಖರಿ ಸಾಯುವುದಕ್ಕೆ ಕಾಣಿಸುವುದಿಲ್ಲ. ಇದು ನಮ್ಮ ಮನೋವೃತ್ತಿಯ ಬಗ್ಗೆ, ನಮ್ಮ ತತ್ತ್ವದೃಷ್ಟಿಯ ಬಗ್ಗೆ ಏನನ್ನಾದರೂ ಹೇಳುತ್ತದೆಯೆ? ಕೆಲ ಪಾಶ್ಚಾತ್ಯರು ಹೇಳುವಂತೆ (ಉದಾ: ಅರ್ಥರ್ ಕೆಸ್ಲರ್) ಭಾರತದ ತತ್ತ್ವಜ್ಞಾನಕ್ಕೆಲ್ಲ ಮರಣವೇ ಪ್ರೇರಣೆಯೆಂದು ಇದರ ತಾತ್ಪರ್ಯವೆ? ನಾವು ಸದಾ ಮರಣಚಿಂತಕರೆ?



ಸಾಯುವುದಕ್ಕಿರುವಷ್ಟಲ್ಲದಿದ್ದರೂ ಕೊಲ್ಲುವುದಕ್ಕೂ ಒಂದಿಷ್ಟು ಅರ್ಥಶಾಖೆಗಳಿವೆ. ಕೊಲ್ಲುವುದೆಂದರೆ ಪ್ರಾಣ ತೆಗೆಯುವುದು, ಸಾಯಿಸುವುದು ಎಂಬುದು ಸರ್ವವಿದಿತ ಅರ್ಥ. ಈಗಿನ ಕಾಲದಲ್ಲಿ ಅದು ಏಕಮಾತ್ರ ಅರ್ಥವಾಗಿ ಉಳಿದಿದೆ. ಆದರೆ ಕೇಶಿರಾಜನು "ಕೊಲ್ ಹಿಂಸಾಯಾಂ"- ಕೊಲ್ ಧಾತುವಿಗೆ ಹಿಂಸೆಯೆಂದರ್ಥ ಎನ್ನುತ್ತಾನೆ. ಹಿಂಸೆಯಲ್ಲಿ ಕೊಲೆ ಸೇರಬಹುದಾದರೂ ಸಾಯುವಷ್ಟು ಹೊಡೆಯದಿರುವುದೂ ಹಿಂಸೆ ತಾನೆ? ಹೀಗೆ ಹೊಡೆಯುವುದೂ ಕೊಲ್ಲುವುದರಲ್ಲಿ ಬರುತ್ತದೆ. ಈ ಅರ್ಥ ಹರಿದಾಸರ ಕಾಲದವರೆಗೂ ಇತ್ತು. "ಕೋಲುಕೊಂಡು ಕೊಲ್ಲ ಹೋದರೆ ಓಡಿ ಹೋದನಮ್ಮ" ಎಂದು ಒಬ್ಬ ಗೋಪಿ ಯಶೋದೆಗೆ ಕೃಷ್ಣನ ಮೇಲೆ ದೂರು ಹೇಳುತ್ತಾಳೆ. ಪುರಂದರದಾಸರ ಪ್ರಕಾರ ಇಲ್ಲಿ ಕೊಲ್ಲುವುದೆಂದರೆ ಹೊಡೆಯುವುದೆಂದಷ್ಟೇ ಅರ್ಥ. ಹಾಗೆಯೇ ಬಡಿದಾಟಕ್ಕೆ 'ಕೊಂದಾಟ' ಎಂಬ ಪದದ ಬಳಕೆ ಸೋಮೇಶ್ವರ ಶತಕದಲ್ಲಿ ಕಾಣುತ್ತದೆ. "ಕೊಲ್" ಧಾತುವಿಗೆ ಮೂಲ ಅರ್ಥ ಹೊಡೆಯೆಂಬುದಷ್ಟೆಯೋ ಎಂಬ ಅನುಮಾನ ಕೂಡ ನನಗೆ ಬರುತ್ತದೆ. "ಕೋಲ್" ಶಬ್ದ ನೋಡಿರಿ. ಅದು ಕೊಲ್ಲುವುದಕ್ಕೆ ಬಳಸುವ ಉಪಕರಣವೆಂದಲ್ಲವೆ ನಿಷ್ಪತ್ತಿ?

ಈ ವಿಷಯದಲ್ಲಿ ಭಾರತೀಯ ಹಾಗೂ ಇತರ ಭಾಷೆಗಳಲ್ಲಿ ಸಾಮ್ಯ ಕಾಣುತ್ತದೆ. ಹಿಂದಿಯಲ್ಲಿ "ಮಾರ್‌ನಾ" ಎಂದರೆ ಕೊಲ್ಲುವುದೂ ಹೌದು, ಹೊಡೆಯುವುದೂ ಹೌದು. "ಮಾರ್" ಧಾತುವಿಗೆ ಸಂಸ್ಕೃತದ "ಮೃ" ಧಾತು ಮೂಲವಾಗಿದ್ದರೂ ಸಂಸ್ಕೃತದಲ್ಲಿ ಪ್ರಧಾನವಾಗಿರುವುದು ಸಾಯಿಸು ಎಂಬರ್ಥ ಮಾತ್ರ. ಹಿಂದಿಯಲ್ಲಾದರೋ ಸಾಯಿಸು ಎಂಬರ್ಥ ಸ್ಪಷ್ಟವಾಗಬೇಕಾದರೆ "ಮಾರ್ ಡಾಲ್‌ನಾ" (ಕೊಂದು ಹಾಕುವುದು) ಎಂದು ಹೇಳಬೇಕಾಗುತ್ತದೆ. ಇಂಗ್ಲೀಷಿನಲ್ಲಿ ಕೂಡ Kill ಶಬ್ದ ಬಹಳ ನೋಯಿಸು ಎಂಬರ್ಥದಲ್ಲಿ ಬಳಕೆಯಾಗುವುದುಂಟು.

ಒಂದು ಸೋಜಿಗವೆಂದರೆ ಇಂಗ್ಲೀಷಿನಲ್ಲಿನ killing time (ವ್ಯರ್ಥ ಕಾಲಹರಣ ಮಾಡುವುದು) ಎಂಬ ನುಡಿಕಟ್ಟಿಗೆ ಕನ್ನಡದಲ್ಲಿ ಸಮಾನ ನುಡಿಕಟ್ಟು ಇರುವುದು. ನಮ್ಮ ಕುಮಾರವ್ಯಾಸ "ಕಾಲವ ಕೊಲವುದೆ?" ಎಂದು ಕೇಳುತ್ತಾನೆ.



ನೀರಸವಾಗಿ ಉದ್ದಕ್ಕೆ ಮಾತಾಡುವದಕ್ಕೆ ನಾವೀಗ "ಬೋರು ಹೊಡೆಯುವುದು" ಎಂದು ಹೇಳುತ್ತೇವಲ್ಲ. ಅದು ಇಂಗ್ಲೀಷಿನ Bore ಶಬ್ದದ ಸ್ವೀಕರಣವೆಂಬುದು ಖಂಡಿತ. ಆದರೆ ಅದರ ಮೂಲಾರ್ಥದ ಬಗ್ಗೆ ನಾವು ತಪ್ಪು ತಿಳಿದುಕೊಂಡಿದ್ದೇವೆ. ಯಾಕೆಂದರೆ ಈ Bore ಅನ್ನು ಕನ್ನಡೀಕರಿಸಿ "ಕೊರೆಯುವುದು" ಎಂದೂ, ಹಾಗೆ ಮಾತಾಡುವವರನ್ನು "ಭೈರಿಗೆ"ಯೆಂದೂ ಕರೆಯುತ್ತೇವೆ. ಆದರೆ ಇಂಗ್ಲೀಷಿನ ಈ Bore ಪದಕ್ಕೂ ಕೊರೆಯುವುದು ಎಂಬರ್ಥದ Bore ಪದಕ್ಕೂ ಏನೂ ಸಂಬಂಧವಿಲ್ಲವೆಂದೂ ಆಕ್ಸ್‌ಫರ್ಡ್ ಡಿಕ್ಷನರಿಯಿಂದ ತಿಳಿಯುತ್ತದೆ. ತೂತು ಹೊಡೆಯುವುದು ಎಂಬರ್ಥದ Bore ಎಲ್ಲಿಂದ ಬಂತೆಂದು ಆ ಕೋಶದ ಕರ್ತರಿಗೆ ಖಚಿತವಾಗಿ ಗೊತ್ತಿದೆ. ಆದರೆ ನೀರಸವಾಗಿ ಮಾತಾಡಿ ಬೇಜಾರು ಬರಿಸುವವರಿಗೂ ಅವರ ಮಾತಿಗೂ ಅನ್ವಯಿಸುವ Bore ಎಂಬ ಶಬ್ದ ಎಲ್ಲಿಂದ ಬಂತೆಂದು ಅವರಿಗೂ ಗೊತ್ತಿಲ್ಲ. ಇದು ತೀರ ಈಚೆಗಿನ (18ನೇ ಶತಮಾನದ) ಶಬ್ದವೆಂದೂ, ಅದರ ಪ್ರಾರಂಭದ ಪ್ರಯೋಗಗಳಿಂದ ಅದು ಫ್ರೆಂಚ್ ಮೂಲದ್ದಿರುವಂತೆ ತೋರುತ್ತದೆಂದೂ ಅವರು ಹೇಳುತ್ತಾರೆ. ನಮ್ಮ ಅಜ್ಞಾನದಲ್ಲಿ ನಾವು Boring ಅನ್ನು ಕೊರೆಯುವುದು ಎನ್ನುತ್ತಿದ್ದೇವೆ. ಈಗಿನ ಯಾಂತ್ರಿಕ ಯುಗದ ಭೈರಿಗೆಗಳು ಮಾಡುವ ಶಬ್ದ ಈ ಅರ್ಥಕ್ಕೆ ಸರಿಹೊಂದುವುದಾದರೂ ಹಿಂದಿನ ಕಾಲದ ಭೈರಿಗೆಗಳು ಅಷ್ಟು ಕರ್ಕಶವಾಗಿದ್ದಿಲ್ಲ. ಆದರೆ ಅಜ್ಞಾನದಿಂದ ಹುಟ್ಟಿದ ಈ ಪರ್ಯಾಯ ಪದಗಳು ಕನ್ನಡದಲ್ಲಿ ಗಟ್ಟಿಯಾಗಿ ಉಳಿದುಹೋಗುವುದು ಖಂಡಿತ. ಹಾದರದ ಮಕ್ಕಳಿಗೂ ಪಾತಿವ್ರತ್ಯದ ಮಕ್ಕಳಿಗೂ ಆಯುರ್ದಾಯದಲ್ಲಿ ವ್ಯತ್ಯಾಸವಿಲ್ಲ; ಹಾಗೆಯೇ ತಪ್ಪು ಶಬ್ದಗಳಿಗೂ ಶುದ್ಧ ಶಬ್ದಗಳಿಗೂ ಒಂದೇ ಬಳ್ಳದಲ್ಲಿ ಆಯುಷ್ಯ ಅಳೆದು ಬರುತ್ತದೆ.

# ಇದು ಹೆಜೀವ ಇದು ಜೀವನ

ಕಳೆದ ಬೇಸಿಗೆಯಲ್ಲಿ ದಕ್ಷಿಣದ ರಾಮೇಶ್ವರಕ್ಕೆ ಸಂಸಾರ ಸಮೇತನಾಗಿ ಟ್ರಿಪ್ ಹೊರಟಿದ್ದೆ. ರಾಮೇಶ್ವರ ತಲುಪಿದಾಗ ಮಟ..ಮಟ.. ಮಧ್ಯಾನ್ಹ 12 ಗಂಟೆಯ ಸಮಯ. ಬಿಸಿಲಿನ ಬೇಗುದಿಗೆ ಬೆಂದು ಹಣ್ಣುಗಾಯಿ! ನೀರು ಗಾಯಿ! ಆಗಿದ್ದೆ. ನಮ್ಮ ಪ್ರವಾಸದ ಬಸ್ಸು ನೇರ ವಾಗಿ ಸಾಗರದಂಚಿನ ಒಂದು ರಸ್ತೆಯಲ್ಲಿ ನಿಂತಿತು. ಎಂತಲೇ ಸಾಗರದ ವೀಕ್ಷಣೆಗೆಂದು ಎಲ್ಲರೂ ಹೊರಟೆವು. ಸಾಗರದ ಮುಂದೆ ಬಂದು ನಿಂತ ನನಗೆ ರಾಮೇಶ್ವರದ ಬಿಸಿಲಿನ ತಾಪಕ್ಕೆ ತಾಳಲಾರದೆ ನೀರಿಗಿಳಿಯುವಂತೆ ಪ್ರೇರೇಪಿಸಿತು. ಸರಿ....ಲುಂಗಿಯೊಂದನ್ನು ಉಟ್ಟ ನಾನು ಸಾಗರದಲೆಯಲ್ಲಿ ಖುಷಿಯಾಗಿ ನಲಿದಾಡಿದೆ. ನನ್ನ ಶ್ರೀಮತಿ, ಮಕ್ಕಳು ಹಾಗೂ ಇತರ ಪ್ರವಾಸಿಗರು ಅಕ್ಕ ಪಕ್ಕದ ಸ್ಥಳ ಗಳನ್ನು ನೋಡಿಬರಲು ಹೊರಟರು. ಒಂದು ಗಂಟೆಯ ಕಾಲ ನೀರಿನಲ್ಲಿ ಕಳೆದ ನಂತರ ಹೊರ ಬಂದೆ. ಒದ್ದೆಯಾಗಿದ್ದ ನನ್ನ ಲುಂಗಿ ಯನ್ನು ಹಿಂಡಿ ಅಲ್ಲೇ ಮರಳ ಮೇಲೆ ಒಣಗಲು ಹರಡಿದೆ. ಪಕ್ಕದಲ್ಲೇ ಚಡ್ಡಿ ಧಾರಿಯಾದ ನಾನು ಕಾಲು ಚಾಚಿ ಅಂಗಾತವಾಗಿ ಮಲಗಿದೆ. ಹಸಿವು ಹಾಗೂ ಬಿಸಿಲಿನ ತಾಪಕ್ಕೆ ಹಾಗೇ!...ಜೋಂಪು ಹತ್ತಿ, ಕಣ್ಣು ಮುಚ್ಚಿ ಅಲ್ಲೇ ಸ್ವಲ್ಪ ಸಮಯ ನಿದ್ರಿಸಿದೆ. ಸ್ವಲ್ಪ ಹೊತ್ತಾದ ನಂತರ ಎದ್ದು ನೋಡಿ ದಿಗ್ಭ್ರಾಂತನಾದೆ. ಲುಂಗಿಯ ಮೇಲೆ ಬಿದ್ದ 2 ರೂ. 1 ರೂ. 0.50 ಪೈಸೆ, 0.25 ಪೈಸೆ, 0.10. ಪೈಸೆ, 0.05 ಪೈಸೆ ಹಣವನ್ನೆಲ್ಲಾ ಶೇಖರಿಸಿ ಯಾರ ಕಣ್ಣಿಗಾದ್ರೂ ಬಿದ್ರೆ ನಾ ಕೆಟ್ಟೆ ಅಂತ ಅಲ್ಲಿಂದ ದಾಪುಗಾಲು ಹಾಕಿ ಓಡಿದೆ!!

ಜಿ.ವಿ. ಪ್ರಭು

ಟಿಕ್, ಟಿಕ್, ಟಿಕ್, ಮೊದಮೊದಲು ನಿಧಾನವಾಗಿ ಕೇಳಿದ ಶಬ್ದ ಬರುಬರುತ್ತಾ ಜೋರಾಗುತ್ತಿದೆ. ಆ ಶಬ್ದಕ್ಕನುಗುಣವಾಗಿ ನನ್ನೆದೆಯ ಬಡಿತವೂ ಜೋರಾಗುತ್ತಿದೆ. ಓಹ್! ಇದು ಖಂಡಿತಾ ಕನಸಲ್ಲ. ನಮ್ಮ ರೂಮಿನ ಚಿಲುಕದ ಸದ್ದೇ, ಸಂಶಯವೇ ಇಲ್ಲ.

ರೀ....ರೀ....ಏಳ್ರೀ, ಯಾರೋ ಬಾಗಿಲು ತಟ್ಟುತ್ತಿದ್ದಾರೆ. ಏಳ್ರೀ.. ಕಳ್ಳರೇ ಇರಬೇಕು. ಮಾತೇ ಆಡ್ತಾ ಇಲ್ಲ ಒಂದೇ ಸಮನೆ ಬಾಗಿಲು ತಟ್ಟುತ್ತಿದ್ದಾರೆ. ಏಳ್ರೀ, ಏಳ್ರೀ, ಒಂದೇ ಸಮನೆ ಕಿರುಚಿದೆ. (ಕುಂಭಕರ್ಣನ ನಿದ್ರೆಯಲ್ಲಿ ಮುಳು ಗಿದ್ದ ಗಂಡನ ಕಿವಿಯಲ್ಲಿ).

"ಏನೇ ನಿನ್ ಗಲಾಟೆ- ನೆಮ್ಮದಿಯಾಗಿ ನಿದ್ದೆ ಮಾಡೋಕೂ ಬಿಡಲ್ವಲ್ಲಾ" ಎನುತ್ತಾ ಎದ್ದು ಕುಳಿತ ನಮ್ಮವರ ಕಿವಿಗೂ ಅಪ್ಪಳಿಸಿತು. ಅದೇ ಸದ್ದು-ಬಾಗಿಲ ಚಿಲುಕ ತಟ್ಟುತ್ತಿರುವ ಸದ್ದು.

ಭಯದಿಂದ ನಡುಗುತ್ತಿರುವ ನನ್ನತ್ತ ಪ್ರಶ್ನಾರ್ಥಕವಾಗಿ ನೋಡಿದರು. ನನ್ನ ಪತಿ

ರಾಯರುಯಾರಾಗಿರಬಹುದು? ಈ ಹೊತ್ತಿನಲ್ಲಿ ಮಾತನಾಡದೇ ಬಾಗಿಲು ತಟ್ಟುತ್ತಿರುವ ವ್ಯಕ್ತಿ ಯಾರು? ನಮ್ಮಿರ್ವರ ಮೌನವನ್ನು ಮುರಿಯಲೋ ಎಂಬಂತೆ ಗೋಡೆಗಾನಿಸಿದ್ದ ಗಡಿಯಾರ "ಢಣ್, ಢಣ್, ಢಣ್, ಢಣ್" ಎಂದು ನಾಲ್ಕು ಬಾರಿ ಬಡಿಯಿತು. ಅದರ ಹಿಂದೆಯೇ ತೇಲಿ ಬಂತು ಟಕ್ ಟಕ್ ಬಾಗಿಲು ಬಡಿತ.

"ಮಾಘ ಬಂದಿದೆ ಕಣೇ ಮಾಘ ಮಾಸ ಬಂದಿದೆ" ಎಂದು ಕೂಗಿಕೊಂಡು ಧಡಕ್ಕನೆದ್ದು ನಮ್ಮವರು ಬಾಗಿಲು ತೆಗೆದಾಗ ನಾನು ಕಂಡದ್ದಾದರೂ ಏನು? ಮೌನವಾಗಿ ನಮ್ಮಿರ್ವರನ್ನೂ ದಾಟಿ ಬಚ್ಚಲು ಮನೆಯತ್ತ ನಡೆಯುತ್ತಿರುವ ನಮ್ಮತ್ತೆಯವರು.

ಅದು ಆದದ್ದು ಹೀಗೆ-ನಮ್ಮತ್ತೆಯವರು ಮಾಘ ಮಾಸದಲ್ಲಿ ಮೌನಗೌರೀ ವ್ರತವನ್ನಾಚರಿಸುವ ಪದ್ಧತಿಯನ್ನು ಇಟ್ಟುಕೊಂಡಿದ್ದರು. ಅದಕ್ಕಾಗಿ ಬೆಳಿಗ್ಗೆ ಬೇಗನೆದ್ದು ಸ್ನಾನ ಮಾಡಿ ವ್ರತ ಮುಗಿಸುವವರೆಗೂ ಯಾರೊಡನೆಯೂ ಮಾತನಾಡಬಾರದೆಂಬ ನಿಯಮವನ್ನು ಪಾಲಿಸುತ್ತಿದ್ದರು. ಅಂದು ಮಾಘಮಾಸದ ಆರಂಭದ ದಿನ. ನಾವಿದ್ದ ಆ ಚಿಕ್ಕ ಮನೆಯಲ್ಲಿ ನಮ್ಮ ಮಲಗುವ ಕೋಣೆಯ ಮೂಲಕವೇ ಬಚ್ಚಲು ಮನೆಗೆ ಪ್ರವೇಶವಿತ್ತು.

ಮೀನಾ ಸುಬ್ರಮಣ್ಯ

ಇದು ಸುಮಾರು 20 ವರ್ಷಗಳ ಹಿಂದೆ ನಡೆದ ಘಟನೆ. ಆಗ ನಾನು ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಓದುತ್ತಿದ್ದೆನು. ನಮಗೆ ಶ್ರೀಮತಿ ಜಯಲಕ್ಷಮ್ಮಣ್ಣಿಯವರು ಪ್ರಿನ್ಸಿಪಾಲರಾಗಿದ್ದರು. ಕಾಲೇಜಿನ ವಾರ್ಷಿಕೋತ್ಸವಕ್ಕೆ ಅಂದು ಮಹಾರಾಜಾ ಕಾಲೇಜಿನ ಸಸ್ಯಶಾಸ್ತ್ರದ ಪ್ರಾಧ್ಯಾಪಕರನ್ನು ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಿದ್ದೆವು.

ನಮ್ಮ ಕಾಲೇಜಿನಲ್ಲಿ ತೋಟದ ಕೆಲಸ ಮಾಡುತ್ತಿದ್ದ ಮಾಲಿ ಸತ್ತು ಹೋಗಿ ಅವರ ಜಾಗದಲ್ಲಿ ಇನ್ನೂ ಯಾರನ್ನೂ ನೇಮಿಸಿರಲಿಲ್ಲ. ಹೀಗಾಗಿ ಕಾಲೇಜಿನ ಆವರಣ ಮತ್ತು ಅಂಗಳದ ಚೆಲುಮೆಯ ಸುತ್ತಮುತ್ತಲೆಲ್ಲಾ ಹುಲ್ಲು ಮತ್ತು ಅಲಂಕಾರದ ಗಿಡಗಳೂ ಅಡ್ಡಾದಿಡ್ಡಿಯಾಗಿ ಬೆಳೆದಿದ್ದವು. ಕಾಂಪೋಂಡಿನ ಹತ್ತಿರ ಬೆಳೆದಿದ್ದ ಬೇಲಿ ಗಿಡಗಳನ್ನೂ ಮಟ್ಟ ಮಾಡಿ ಕತ್ತರಿಸಿರಲಿಲ್ಲ.

ಸಸ್ಯಶಾಸ್ತ್ರದ ಪ್ರಾಧ್ಯಾಪಕರಿಗೆ ತಮ್ಮ ಭಾಷಣಕ್ಕೆ ಇದೇ ವಿಷಯ ಸಾಕಾಯಿತು. ಅವರು ತಮ್ಮ ಭಾಷಣದಲ್ಲಿ "ಇಷ್ಟೊಂದು ಸುಂದರವಾಗಿ ಇರುವ ಹುಡುಗಿಯರ ಕಾಲೇಜಿನ ಉದ್ಯಾನವನ್ನು ಇನ್ನೂ ಸುಂದರವಾಗಿ ಇಡಬಹುದಲ್ಲಾ. ಆಗ ದಾರಿಯಲ್ಲಿ ಓಡಾಡುವವರಿಗೆ ನಿಮ್ಮ ಕಾಲೇಜು ಇನ್ನೂ ಚೆಲುವಾಗಿ" ಕಾಣುತ್ತದೆ. ಅದಕ್ಕೆ ನಿಮ್ಮ ಪ್ರಿನ್ಸಿಪಾಲರು ಹೆಚ್ಚಿನ ಗಮನ ಕೊಟ್ಟಿಲ್ಲವೆಂದು ಕಾಣುತ್ತದೆ" ಎಂದು ಬಿಟ್ಟರು.

ಮಾತಿನ ಮೊನಚು ಪ್ರಿನ್ಸಿಪಾಲರಿಗೆ ಅರ್ಥವಾಯಿತು. ಗಮನಕೊಟ್ಟಿಲ್ಲ ಎಂಬ ವಿಷಯ ಬೇಸರವನ್ನೂ ತರಿಸಿತ್ತು.

ಸಾಧಾರಣವಾಗಿ ಹುಡುಗಿಯರ ಕಾಲೇಜಿನ ಮುಂದೆ ಹುಡುಗರ ದೊಡ್ಡಗುಂಪೇ ಇರುತ್ತದೆ. ಇದು ಮಾಮೂಲು. ನಿಯಂತ್ರಿಸುವುದೇ ಕಷ್ಟ.

ಈಗ ನಮ್ಮ ಪ್ರಿನ್ಸಿಪಾಲರ ಭಾಷಣದ ಸರದಿ. ಮುಖ್ಯ ಅತಿಥಿಗಳ ಕೆಣಕು ಅವರ ಮನಸ್ಸಿನಲ್ಲಿತ್ತು. ಮಾತನಾಡುತ್ತಾ, "ನಮ್ಮ ಕಾಲೇಜು ಹುಡುಗಿಯರ ಕಾಲೇಜು ಆಗಿರುವುದರಿಂದ ಕಾಲೇಜಿನ ಕಡೆ ನೋಡುತ್ತಾ ವಾಹನಗಳಲ್ಲಿ ಹೋಗುವವರು, ಹಾಗೆಯೇ ನಡೆದು ಹೋಗುವವರ ವೇಗ ಅತಿ ನಿಧಾನವಾಗಿರುತ್ತದೆ, ಇನ್ನು ಈ ಕಾಲೇಜಿನ ಮುಂದಿನ ಆವರಣವನ್ನು ಇನ್ನೂ ಹೂಗಿಡಗಳಿಂದ ಸುಂದರಗೊಳಿಸಿಬಿಟ್ಟರೆ ದಾರಿಯ ವಾಹನಗಳ ಚಲನೆ, ನಡೆಯುವವರ ನಡಿಗೆ ನಿಂತೇ ಹೋಗುತ್ತದೆಂಬ ಭಯ ನನಗಿದೆ. ನಮ್ಮ ಕಾಲೇಜಿನ ಮುಂದೆ ಓಡಾಡುವ ಸ್ವಂತ ಅನುಭವವನ್ನು ಮಾನ್ಯ ಮುಖ್ಯ ಅತಿಥಿಗಳು ಈಗ ತಿಳಿಸಿದ್ದಾರೆ ಎಂದರು. ಮುಖ್ಯ ಅತಿಥಿಗಳು ಸಹ ಹುಡುಗಿಯರ ಕಾಲೇಜಿನ ಕಡೆಗೇ ನೋಡುತ್ತಾ ಓಡಾಡುತ್ತಾರೆ ಎಂಬುದನ್ನು ಪರೋಕ್ಷವಾಗಿ ಪ್ರಿನ್ಸಿಪಾಲರು ಹೇಳಿದ್ದರು. ಅತಿಥಿಗಳ ಮುಖ ಪೆಚ್ಚಾಗಿತ್ತು.

ಶಾರದಾ ಶಾಮಣ್ಣ

# ಮೃತ್ಯು ಸುರಂಗ

● "ಸವ್ಯಸಾಚಿ"

ಮಾರ್ಚ್ 2, 1944. ಅರ್ಧರಾತ್ರಿ ಕಳೆದಿತ್ತು. ಅಂದರೆ ಮಾರ್ಚ್ 30ರ ಅಶುಭ ಆರಂಭವೆಂದರೂ ಸರಿಯೆ. ಸುಮಾರು 650 ಜನ ಪ್ರವಾಸಿಗರನ್ನು ಬಲಿ ತೆಗೆದುಕೊಂಡ ದುರ್ದಿನವದು.

ಬಾಲವಾನೋ ಇಟಲಿಯ ಬಲು ಸಾಧಾರಣವಾದೊಂದು ಸ್ಟೇಷನ್. ಇಲ್ಲಿಂದ ಗಾಡಿಗಳಿಗೆ ಇನ್ನೊಂದು ಇಂಜಿನ್ ಜೋಡಿಸಲಾಗುತ್ತದೆಂಬುದೊಂದೇ ಈ ನಿಲ್ದಾಣದ ವೈಶಿಷ್ಟ್ಯ. ಇಲ್ಲಿಂದ ಬೆಟ್ಟದ ಹಾದಿಯಲ್ಲಿ ರೇಲ್ವೆಮಾರ್ಗ ಸಾಗಿದ್ದುದರಿಂದ ಇದು ಅನಿವಾರ್ಯ. ಆ ದಿನವೇ ರೇಲ್ವೆ ಅಪಘಾತದ ಇತಿಹಾಸದಲ್ಲಿ ಹೊಸದೊಂದು ಹೆಸರು ಸೇರಿಕೊಳ್ಳುವುದೆಂದು ಅದಾರು ಊಹಿಸಿದ್ದರು?

ಆ ವೇಳೆ ಬಾಲವಾನೋ ನಿಲ್ದಾಣದಲ್ಲಿ 8017 ನಂಬರಿನ ಗೂಡ್ಸ್ ಗಾಡಿ ನಿಂತಿತ್ತು.

ಇಷ್ಟಾದರೂ ಅಪಘಾತ ಸಂಭವಿಸಿ ಗಾಡಿಯಲ್ಲಿದ್ದ 650 ಜನರಲ್ಲಿ 8-10 ಮಂದಿ ಮಾತ್ರ ಜೀವಂತ ಉಳಿದರು. ಉಳಿದೆಲ್ಲರನ್ನೂ ಮೃತ್ಯು ಅದೆಷ್ಟು ಮೌನವಾಗಿ ನುಂಗಿತೆಂದರೆ ಅವರಿಗೆ ಕೂಗಲೂ ಅವಕಾಶ ಸಿಗಲಿಲ್ಲ.

'8017' ಗೂಡ್ಸ್‌ಗಾಡಿ. ಆದರೂ ಈ ಅಪಘಾತದಲ್ಲಿ 650 ಜನರ ಸಾವೆ? ಪ್ರಯಾಣಿಕರ ಗಾಡಿಯಲ್ಲದ ಅದನ್ನು ಇಷ್ಟೊಂದು ಜನ ಅದೆಂತು ಏರಿದರು? ಇದೂ ಒಂದು ರೀತಿಯಿಂದ ಅಪಘಾತವೆಂದೇ ಹೇಳಬೇಕು. ಆ ವೇಳೆ ಪ್ರಪಂಚ ಎರಡನೇ ಮಹಾಯುದ್ಧದ ಜ್ವಾಲೆಗೆ ಸಿಲುಕಿತ್ತು. ಪ್ರಯಾಣಿಕರ ಗಾಡಿಗಳಲ್ಲಿ ಪ್ರವಾಸ ಮಾಡುವ ಅವಕಾಶ ಸುಲಭವಾಗಿ ಸಿಗುತ್ತಿರಲಿಲ್ಲ. ಅಕಸ್ಮಾತ್ ಅಂದು

ಅದನ್ನು ಮುಂದಕ್ಕೊಯ್ಯಲು ಇನ್ನೊಂದು ಇಂಜಿನ್ ಜೋಡಿಸುವ ಸಿದ್ಧತೆ ನಡೆದಿತ್ತು. ಇದು ಆ ಗಾಡಿಯಲ್ಲಿರುವ 650 ಜನರನ್ನು ಮೃತ್ಯು ಮುಖಕ್ಕೆ ತಳ್ಳುವ ಪೂರ್ವ ಸಿದ್ಧತೆಯೆಂದು ಯಾರೂ ಊಹಿಸಿರಲಿಲ್ಲ.

ಈ ಭೀಕರ ಅಪಘಾತ ತುಂಬ ವಿಚಿತ್ರವಾದುದು. ಇಷ್ಟೊಂದು ದೊಡ್ಡ ದುರ್ಘಟನೆಗೆ ಕಾರಣವು ಅದಕ್ಕಿಂತ ವಿಚಿತ್ರ. ರೈಲಿನ ಫಿಶ್‌ಪ್ಲೇಟ್‌ಗಳು ತಂತಮ್ಮ ಜಾಗದಲ್ಲಿದ್ದವು. ಬೇರೊಂದು ಗಾಡಿಗೆ ಡಿಕ್ಕಿ ಹೊಡೆದಿರಲಿಲ್ಲ. ಇಂಜಿನ್ ಕೂಡ ಕಂಬಿ ಬಿಟ್ಟು ಸರಿದಿರಲಿಲ್ಲ. ಡ್ರೈವರ್ ಶರಾಬು ಕುಡಿದಿರಲಿಲ್ಲ. ಆತ ಬಲು ಎಚ್ಚರಿಕೆ ವಹಿಸಿದ್ದ. ಇಂಜಿನ್ನಿನ ಬಾಯ್ಲರ್ ಸಿಡಿದಿರಲಿಲ್ಲ. ಯಾವುದೇ ಡಬ್ಬಿಯಲ್ಲಿ ಉರಿ ಪತ್ತಿಕೊಂಡು ಈ ಅಪಘಾತ ಉಂಟಾಗಲಿಲ್ಲ.

ಕೃಪೆ: 'ಗುಲ್‌ದಸ್ತಾ'

'8017' ಗೂಡ್ಸ್ ಗಾಡಿ ಜನಕ್ಕೆ ಸಿಕ್ಕಿತು. ಅದರಲ್ಲಿ ಕುಳಿತುಕೊಳ್ಳುವ ಏರ್ಪಾಡೇನೂ ಇರಲಿಲ್ಲ. ಆದರೂ ಜನ ಪ್ರವಾಸ ಮಾಡಬೇಕಿತ್ತು. ಜಾಗ ಸಿಕ್ಕಲ್ಲಿ ಕುಳಿತರು. ಅದರಲ್ಲಿ ಕೆಲ ತೆರೆದ ಡಬ್ಬಗಳೂ ಇದ್ದವು. ಜನ ಅದರೊಳಗೆ ಕಿಕ್ಕಿರಿದು ತುಂಬಿದರು. ಹಲವರು ಬೇರೆಲ್ಲೂ ಜಾಗ ಸಿಗದೆ ಡಬ್ಬಿಗಳ ಮೇಲ್ಭಾಗದಲ್ಲಿ ಕುಳಿತರು. ಮೇಲೆ ತೆರೆದ ಆಕಾಶ, ಮಳೆ ಬಂದರೆ....!

ಬಾಲವಾನೋದಿಂದ ಎಂಟು ಕಿಲೋಮೀಟರ್ ದೂರ ಬೇಲಾಪುರೋ ಸ್ಟೇಷನ್ ಇತ್ತು. ರಾತ್ರಿ 12-50 ಕ್ಕೆ ಸರಿಯಾಗಿ 8017ರ ಇಂಜಿನ್‌ಗಳು ಸಿಳ್ಳುಹಾಕಿ ಹೊಗೆ ಕಾರುತ್ತ ಹೊರಟವು. ಬಾಲವಾನೋದ ಸ್ಟೇಷನ್ ಮಾಸ್ತರ್ ಬೇಲಾಪುರೋಕ್ಕೆ ಸುದ್ದಿ ನೀಡಿದ: "ನಮ್ಮಲ್ಲಿಂದ 8017 ಹೊರಟು ಬಿಟ್ಟಿದೆ."

ಎಂಟು ಕಿಲೋಮೀಟರ್ ಅಂತರವನ್ನು

ಕ್ರಮಿಸಿ ಗೂಡ್ಸ್ ಗಾಡಿ ನಿಯಮ ಪ್ರಕಾರ 20 ನಿಮಿಷಗಳ ಬಳಿಕ ಅಂದರೆ 1-10ಕ್ಕೆ 8017 ಬೇಲಾಪುರೋ ತಲುಪಬೇಕಿತ್ತು. ಆದರೆ ಗಂಟೆ 1-20 ಆದರೂ ಅದರ ಪತ್ತೆ ಇಲ್ಲ! ಮೆಲ್ಲ ಮೆಲ್ಲನೆ ಇನ್ನೂ ಒಂದಿಷ್ಟು ವೇಳೆ ಕಳೆಯಿತು. ಒಂದು ತಾಸು ಹೆಚ್ಚಾದರೂ 8017 ಬೇಲಾಪುರೋ ತಲುಪಿರಲಿಲ್ಲ. ಬಾಲವಾನೋ ಸ್ಟೇಷನ್ ಮಾಸ್ತರನಿಗೆ ಈ ಸುದ್ದಿ ತಿಳಿಯಲೇ ಇಲ್ಲ. ಗಾಡಿ ಹೊರಟ ಸುದ್ದಿ ತಿಳಿಸಿ ಆತ ನಿದ್ರಿಸಲು ಹೊರಟು ಹೋಗಿದ್ದ.

ಆದರೆ 8017 ಎಲ್ಲಿ ಹೋಯಿತು?

ಬಾಲವಾನೋದಿಂದ ಅದು ನಿಶ್ಚಿತ ವೇಳೆಗೆ ಹೊರಟಿತ್ತು. ಪ್ರವಾಸಿಗರ ಸಂದೇಹ ನಿಜವಾಯಿತು... ತುಸು ಹೊತ್ತಿನಲ್ಲೇ ಮಳೆ ಸುರಿಯತೊಡಗಿತು...ಕೆಲವರು ರೇನ್‌ಕೋಟ್ ಧರಿಸಿದರು. ಏನೂ ಇಲ್ಲದವರು ಮಳೆಯಲ್ಲಿ ತೊಯ್ದರು.

ಪರ್ವತೀಯ ಪ್ರದೇಶವಾದ್ದರಿಂದ ಸ್ವಲ್ಪ ದೂರದಲ್ಲಿ ನೂರಾರು ಪುಟ್ಟ ಪುಟ್ಟ ಜಲಪಾತಗಳು ಹರಿಯುತ್ತಿದ್ದವು. ಕೆಲವೆಡೆ ಅವುಗಳ ನೀರು ರೈಲು ಕಂಬಿಗಳ ಮೇಲೂ ಹರಿಯುತ್ತಿತ್ತು. ಡ್ರೈವರ್ ಗಾಡಿಯ ವೇಗ ತಗ್ಗಿಸಿದ. ಇಟಲಿಯ ಈ ಪ್ರದೇಶದ ಪ್ರಾಕೃತಿಕ ಸೌಂದರ್ಯ ತುಂಬಾ ಆಕರ್ಷಕವಾದುದು. ಈ ಮನಮೋಹಕ ಭೂಮಿಯ ಮೇಲೆ ಕಾಲನ ತಾಂಡವನೃತ್ಯ ನಡೆದೀತೆಂದೂ ಯಾರೂ ಊಹಿಸುವಂತಿರಲಿಲ್ಲ.




8017 ಗೂಡ್ಸ್ ಗಾಡಿ ಹಾವಿನಂತೆ ಬಳುಕುತ್ತ ಸಣ್ಣ ಸಣ್ಣ ಸುರಂಗಗಳ ಹಾದಿಯಾಗಿ ಮುಂದೆ ಸಾಗುತ್ತಿತ್ತು. ಕೆಲವು ಸುರಂಗಗಳು ಅದೆಷ್ಟು ಹತ್ತಿರದಲ್ಲಿದ್ದವೆಂದರೆ ಗಾಡಿ ಒಂದು ಸುರಂಗದಿಂದ ಹೊರ ಬರುತ್ತಲೇ ಇನ್ನೊಂದನ್ನು ಪ್ರವೇ

ಶಿಸುತ್ತಿತ್ತು.

ಗಾಡಿ ಬಾಲವಾನೋ ಸ್ಟೇಷನ್ ಬಿಟ್ಟು 10 ನಿಮಿಷ ಕಳೆದಿತ್ತು. ಅಂದರೆ ಸುಮಾರು ಅರ್ಧ ದಾರಿ ಸಾಗಿತ್ತು. 8017 ಸಹಜ ಗತಿಯಿಂದ ಒಂದು ಸುರಂಗವನ್ನು ಪ್ರವೇಶಿಸುತ್ತಿತ್ತು. ಈ ಸುರಂಗ ಸುಮಾರು ಎರಡು ಕಿಲೋ ಮೀಟರ್ ಉದ್ದನೆಯದು. ಪೂರ್ತಿ ಗಾಡಿ ಅದರೊಳಗೆ ನುಗ್ಗಿತು. ಸುತ್ತಲೂ ದಟ್ಟವಾದ ಕವಿದ ಕತ್ತಲು, ಗಾಳಿ ಬೀಸುತ್ತಿರಲಿಲ್ಲ. ಹೀಗಾಗಿ ಸುರಂಗದೊಳಗೆ ವಿಚಿತ್ರ ಸ್ಥಿತಿ ಉಂಟಾಗಿತ್ತು.

ಒಮ್ಮೆಲೇ ಬಲವಾದ ಆಘಾತದೊಂದಿಗೆ ಗಾಡಿ ನಿಂತಿತು. ಡ್ರೈವರ್ ಥಕ್ಕನೆ ಬ್ರೇಕ್ ಹಾಕಿದ್ದ. ಕ್ಷಣಕಾಲದ ಬಳಿಕ ಗಾಡಿ ಮತ್ತೊಮ್ಮೆ ಅಲುಗಾಡಿ ಹಿಂದಕ್ಕೆ ಸರಿಯತೊಡಗಿತು. ಕೆಲ ಡಬ್ಬಿಗಳು ಸುರಂಗದಿಂದ ಹೊರಬಿದ್ದಿದ್ದವಷ್ಟೆ, ಮತ್ತೆ ಗಾಡಿ ನಿಂತಿತು. ಆ ಬಳಿಕ ಅದು ಮುಂದೂ ಹೋಗದೆ ಹಿಂದೂ ಸರಿಯದೆ ಸ್ಥಿರ ವಾಯಿತು. ಅಪಘಾತ ನಡೆದುಹೋಗಿತ್ತು.

ಅದ್ಭುತವಾಗಿತ್ತು ಈ ಅಪಘಾತ. 650 ನಿರ್ಭಾಗ್ಯ ಪ್ರವಾಸಿಗರಲ್ಲಿ 8-10 ಜನ ಮಾತ್ರ ಪಾರಾದರು. ಅಂತಹವರಲ್ಲಿ ಫ್ರಾನ್ಸಿಸ್ ಕೂಡ ಒಬ್ಬ. ಅರಿವಿಗೆ ಬಂದಾಗ ಅವನೆಂದ, "ಗಾಡಿ ಸುರಂಗದಲ್ಲಿ ನಿಂತು ಹಿಂದೆ ಸರಿದಾಗ ಬಹುಶಃ ಮುಂದುವರಿಯುವ ಸಿಗ್ನಲ್ ಸಿಗಲಿಲ್ಲವೆಂದು ಅದು ಸಿಗ್ನಲ್‌ಗಿಂತ ಮುಂದೆ ಹೋಗಿದ್ದುದ ರಿಂದ ಅದನ್ನು ಹಿಂದೆ ತರಬೇಕಾಯಿತೆಂದೂ ನಾನು ಯೋಚಿಸಿದೆ. ನನ್ನ ಬಳಿಯೇ ನನ್ನ ಸೋದರ ಮಲಗಿದ್ದ. ಆಘಾತದಿಂದಾಗಿ ಅವನ ನಿದ್ದೆ ಹಾರಿ ಹೋಯಿತು." ಏನಾಯಿತೆಂದು ಕೆಳಗಿಳಿದು ನೋಡೆಂದು ನಾನವನಿಗೆ ಹೇಳಿದೆ. ಆದರೆ ಆತ ನಕ್ಕು ಮತ್ತೆ ನಿದ್ದೆ ಹೋದ, ನಾನು ಇಣಿಕಿ ನೋಡಲೆಳಸಿದೆ. ಆದರೆ ಕತ್ತಲೆಯಲ್ಲಿ ಏನೂ ಕಾಣಿಸಲಿಲ್ಲ. ನನ್ನ ಡಬ್ಬಿ ಇಂಜಿನಿನಿಂದ ಬಹಳ ಹಿಂದೆ ಇತ್ತು. ಕುತೂಹಲದಿಂದ ನಾನು ಕೆಳಗಿಳಿದೆ...ಮುಂದೇನಾಯಿತೋ ನಾನರಿಯೆ ...ನಾನು ಮತ್ತೆ ಕಣ್ತೆರೆದಾಗ ಆಸ್ಪತ್ರೆಯಲ್ಲಿದೆ.

ಇನ್ನೊಬ್ಬ ಪ್ರವಾಸಿ ಡೊಮೀನಿಕೊ ಮಿಯೆಲ್ ಅರಿವಿಗೆ ಬಂದಾಗ ತನ್ನ ಮೋರೆ ತುಂಬ ಉರಿ ಯುತ್ತಿರುವಂತೆ ಅವನಿಗೆ ಭಾಸವಾಯಿತು. ಆತ ಕನ್ನಡಿ ಕೊಡುವಂತೆ ಆಸ್ಪತ್ರೆಯ ನರ್ಸಿಗೆ ಹೇಳಿದ. ಮೊದಲೇನೋ ಆಕೆ ಸುಮ್ಮನಿದ್ದರೂ ಅವನ ಒತ್ತಾಯ ಹೆಚ್ಚಿದಾಗ ಕನ್ನಡಿ ಕೊಟ್ಟಳು. ಮುಖ ನೋಡುತ್ತಲೇ ಡೊಮೀನಿಕೊ ಎಚ್ಚರ ತಪ್ಪಿಬಿಟ್ಟ. ಅವನಿಗೆ ತನ್ನ ಸುಂದರ ಕರಿ ಗೂದಲು ತುಂಬ ಪ್ರಿಯವಾಗಿತ್ತು. ಆದರೆ ಈಗ ತಲೆಯಿಡೀ ಪೂರ್ತಿ ಬೆಳ್ಳಗಾಗಿತ್ತು.

ಡೊಮೀನಿಕೊ ಮಿಯೆಲ್‌ನಿಗೆ ಈ ಅಪ ಘಾತದ ಬಗ್ಗೆ ಏನೂ ತಿಳಿದಿರಲಿಲ್ಲ. "ನಾನು ಕೊನೆಯಿಂದ ಬಹುಶಃ ಐದನೇ ಡಬ್ಬಿಯಲ್ಲಿ ನಿದ್ದೆ ಹೋಗಿದ್ದೆ. ಉಸಿರಾಟಕ್ಕೆ ತೊಂದರೆಯಾ ದುದರಿಂದ ಎಚ್ಚೆತ್ತಾಗ ಗಾಡಿ ನಿಂತಿತ್ತು. ಕುತೂಹಲದಿಂದ ನಾನು ಕೆಳಗಿಳಿದೆ ಮತ್ತು ಹಿಂದೆ ಹಿಂದೆ ನಡೆದು ಬಂದೆ. ಒಮ್ಮೆಲೇ ಗಾಡಿ ಹೊರಟಿತೆಂದರೆ ನಾನು ಸುರಂಗದಲ್ಲೇ ಉಳಿಯಬೇಕಾದೀತೆಂಬ ಭಾವನೆಯಾಗಿ ಕೊನೆಯ ಡಬ್ಬಿಯನ್ನೇರಿದೆ. ಆದರೆ ನಾನು ಈ ಆಸ್ಪತ್ರೆಗೆ ಹೇಗೆ ಬಂದೆ?" ಎಂದನಾತ.

ಲುಯಿ ಕೊಸೊಲಿನೋಗೆ ತನ್ನ 12 ವರ್ಷದ ಮಗನ ನೆನಪು ಬರುತ್ತಿತ್ತು. ತಂದೆ, ಮಗ ಇಬ್ಬರೂ ಮಲಗಿದ್ದರು. ಆಘಾತ ಉಂಟಾ ದಾಗ ಕ್ಷಣಕಾಲ ತಂದೆಯ ನಿದ್ದೆ ಹಾರಿ ಹೋಯಿತು. ಆತ ತನ್ನ ಮಗನನ್ನು ಮುಟ್ಟಿ ನೋಡಿದ. ಹತ್ತಿರವೇ ಮಲಗಿರುವುದನ್ನು ತಿಳಿದು ಪ್ರೀತಿಯಿಂದ ಅವನನ್ನು ತಟ್ಟಿ ನಿಶ್ಚಿಂತೆ ಯಿಂದ ಮತ್ತೆ ನಿದ್ದೆಹೋದ. ಆದರೆ ತುಸು ಹೊತ್ತಿನಲ್ಲೇ ಉಸಿರು ಕಟ್ಟಿದಂತಾಗಿ ಆತ ಎದ್ದು ಕುಳಿತ. ತನ್ನ ಮಗನನ್ನು ಎಬ್ಬಿಸಲೆಂದು ಅಲ್ಲಾಡಿಸಿದ. ಆದರೆ ಆ ಹುಡುಗ ಸತ್ತು ಹೋಗಿದ್ದ! ಅವನ ಸಾವು ಲುಯಿಕೊ ಸೊಲಿನೋನನ್ನು ಅಪಾರ ದುಃಖಕ್ಕೀಡು ಮಾಡಿತು.

ಈ ಹೃದಯವಿದ್ರಾವಕ ದುರ್ಘಟನೆಗೀಡಾದ 650 ಬಡಪಾಯಿಗಳಲ್ಲಿ 8-10 ಜನ ಉಳಿದುದೂ ಗೀಸೆಪ್ ಡೇ ವೆನುತೋ ಎಂಬು ವನ ಸಾಹಸದಿಂದ. ಡೇ ವೆನುತೋ ರೈಲ್ವೆ ವಿಭಾಗದ ಸಾಮಾನ್ಯ ನೌಕರ. ಆತ 8017 ರಲ್ಲಿ ಹಿಂದಿನಿಂದ 11ನೇ ಡಬ್ಬಿಯಲ್ಲಿ ಪ್ರವಾಸ ಮಾಡುತ್ತಿದ್ದ.

8017 ಗೂಡ್ಸ್ ಮೃತ್ಯುಸುರಂಗವನ್ನು ಪ್ರವೇ ಶಿಸುತ್ತಿದ್ದಾಗ ಡೇ ವೆನುತೋ ಗಾಢನಿದ್ರೆಯಲ್ಲಿ

ಮುಳುಗಿದ್ದ. ಗಾಡಿ ಒಮ್ಮೆಲೇ ನಿಂತು ಆಘಾತ ಉಂಟಾದಾಗಲೂ ಅವನ ನಿದ್ದೆಗೆ ತೊಂದರೆ ಯಾಗಲಿಲ್ಲ. ಆದರೆ ಉಸಿರಾಟಕ್ಕೆ ಅಡಚಣೆ ಯಾದಾಗ ಆತ ಎಚ್ಚಟತ್ತ. ಗಾಡಿ ನಿಂತುದನ್ನು ಕಂಡು ಕಾರಣ ತಿಳಿಯಲೆಂದು ಆತ ಕೆಳಗಿಳಿದ. ಎಲ್ಲೆಲ್ಲೂ ನೀರವತೆ ಹಾಗೂ ಗಾಢಾಂಧಕಾರ ವ್ಯಾಪಿಸಿತ್ತು. ಡೇ ವೆನುತೋ ತನ್ನ ಸಹ ಪ್ರವಾಸಿ ಗರನ್ನು ನಿಟ್ಟಿಸಿದ. ಅವರೆಲ್ಲ ಮೌನವಾಗಿ ಮಲ ಗಿದ್ದರು. ಒಮ್ಮೆಲೇ ಆತ ಬೆಚ್ಚಿ ಬಿದ್ದ. ಬಾಲ ವಾನೋದಲ್ಲಿ ಆತನ ಜತೆಗೆ ಒಬ್ಬ ರೇಲ್ವೆ ಅಧಿಕಾರಿಯೂ ಆ ಡಬ್ಬಿಯನ್ನೇರಿದ್ದ. ಆದ ರೀಗ ಆತ ಮಾಯವಾಗಿದ್ದ. ಆತ ಎಲ್ಲಿ ಹೋಗಿರಬಹುದು? ನಿರ್ಜನ ಸ್ಥಾನದಲ್ಲಿ ಗಾಡಿ ನಿಂತುದು. ರೇಲ್ವೆ ಅಧಿಕಾರಿಯ ಕಣ್ಮರೆ ಇವೆರಡೂ ಅವನಿಗೆ ರಹಸ್ಯಮಯ ಎನಿಸಿತು. ಭಯಂಕರ ನಿಶ್ಯಬ್ದತೆ ಈ ರಹಸ್ಯಮಯ ವಾತಾ ವರಣವನ್ನು ಇನ್ನಷ್ಟು ಭಯಂಕರಗೊಳಿಸು ತ್ತಿತ್ತು. ಯಾವುದೋ ಅಜ್ಞಾತ ಶಕ್ತಿಯ ಪ್ರೇರಣೆಯಿಂದ ಡೇ ವೆನುತೋ ತನ್ನ ಡಬ್ಬಿಯಿಂದ ಕೆಳಜಿಗಿದ...ಮತ್ತು ವೇಗವಾಗಿ ಹಿಂದಕ್ಕೋಡಿದ.

ಕತ್ತಲ ದಾರಿಯಲ್ಲಿ ಬೀಳುತ್ತ ಏಳುತ್ತ ಆತ ಸಾಗುತ್ತಿದ್ದ. ಕಟ್ಟಕಡೆಗೆ ಮಳೆಯ ಸಪ್ಪಳ ಕೇಳಿ ಆತ ಬಿಡುಗಡೆಯ ಉಸಿರೆಳೆದ. ಅಂದರೆ ಆತ ಮೃತ್ಯುಸುರಂಗದಿಂದ ಪಾರಾಗಿ ಬಂದಿದ್ದ.

ಹೊರಬರುತ್ತಲೇ ಡೇ ವೆನುತೋ ಮತ್ತೆ ಮುಗ್ಗರಿಸಿದ. ಆತ ಕಣ್ಣರಳಿಸಿ ನೋಡತೊಡ ಗಿದ. ಕಾಲುಗಳ ಹತ್ತಿರದಲ್ಲೇ ಅವನ ಸಹ ಪ್ರವಾಸಿ ರೇಲ್ವೆ ಅಧಿಕಾರಿ ಮೂಟೆಯಂತೆ ಬಿದ್ದು ಕೊಂಡಿದ್ದ. ಅವನ ರೇನ್‌ಕೋಟು ಪೂರ್ತಿ ಒದ್ದೆಯಾಗಿತ್ತು. ತಲೆಗೂದಲು ತೊಯ್ದು ಹಣೆಯ ಮೇಲೆ ಬಿದ್ದಿತ್ತು. ಡೇ ವೆನುತೋ ಬಾಗಿ ಅಧಿಕಾರಿಯ ಭುಜ ಅಲುಗಾಡಿಸಿದ. ಅಧಿಕಾರಿ ಮಾತಾಡಲು ಯತ್ನಿಸಿದರೂ ಬಾಯಿ ಯಿಂದ ಶಬ್ದವೇ ಹೊರಡಲಿಲ್ಲ. ಅವನು ಸಂಕೇತದ ಮೂಲಕ ಏನೋ ಹೇಳಹೊರಟಿ ದ್ದರೂ ಸಾಧ್ಯವಾಗದೆ ಕೆಳಗುರುಳಿದ.

ಸುರಂಗದಲ್ಲಿ 8017 ಗೂಡ್ಸ್ ಗಾಡಿ ರಹಸ್ಯ ಮಯ ರೀತಿಯಿಂದ ನಿಂತಿತ್ತು. ಅದನ್ನು 650 ಜನ ಏರಿದ್ದರು. ಆದರೆ ಸುತ್ತಲೂ ನಿಶ್ಯಬ್ದತೆ ವ್ಯಾಪಿಸಿತ್ತು. ಆದದ್ದಾದರೂ ಏನು? ಪ್ರವಾಸಿಗರ, ಗಾರ್ಡ್‌ನ ಅಥವಾ ಇಬ್ಬರು ಡ್ರೈವರರ ಸದ್ದಾದರೂ ಕೇಳಿಸಬೇಡವೆ? ಯಾವುದೋ ರಹಸ್ಯಮಯ ಅಪಘಾತ ಸಂಭವಿಸಿದೆಯೆಂದು ಡೇ ವೆನುತೋಗೆ ಖಚಿತ ವಾಯಿತು. ಈಗ ತಾನು ಈ ಸುದ್ದಿಯನ್ನು ತಲುಪಿಸಲೇಬೇಕು. ಬೇಲಾಪುರೋ ಇನ್ನೂ ದೂರವಿದೆ. ಅದಕ್ಕಿಂತ ಬಾಲವಾನೋ ಹತ್ತಿರವಿದೆ. ಆದರೆ ಸುದ್ದಿ ಮುಟ್ಟಿಸುವ ಬಗೆ ಹೇಗೆ? ಕ್ಷಣಕಾಲ ಯೋಚಿಸಿ ಆತ ಬಾಲವಾನೋದತ್ತ ವೇಗವಾಗಿ ಓಡ ತೊಡಗಿದ್ದ.

ದಾರಿಯುದ್ದಕ್ಕೂ ಮಳೆಯಿಂದಾಗಿ ಕೆಸರು ತುಂಬಿದ್ದು ಅಲ್ಲಲ್ಲಿ ಜಾರುತ್ತಿತ್ತು. ನೀರಿನಿಂದ ತೊಯ್ದ ವೆನುತೋನ ಬೂಟ್ಸ್ ಭಾರವಾಗಿ ದ್ದವು. ಎಲ್ಲೆಲ್ಲೂ ಗಾಢಾಂಧಕಾರ, ಏನೇನೂ ಕಾಣಿಸುತ್ತಿರಲಿಲ್ಲ. ಡೇ ವೆನೂತೋ ಓಡ ತೊಡಗಿದ. ಇಷ್ಟು ದೂರ ಸಾಗಿ ತಾನು ಬಾಲ ವಾನೋ ತಲುಪಬಲ್ಲನೇ? ದಾರಿಯಲ್ಲೇ ಏನಾದರೂ ಅನಿಷ್ಟ ಸಂಭವಿಸಿದರೆ, ಯಾವು ದಾದರೂ ವಿಷ ಸರ್ಪದ ಮೇಲೆ ಕಾಲಿಟ್ಟರೆ? ಅಥವಾ ಚೇಳು ಕುಟುಕಿದರೆ? ಯುದ್ಧ ಕಾಲ ವಾದ್ದರಿಂದ ಎಲ್ಲಾದರೂ ಆಸ್ಫೋಟ ಸಂಭವಿ ಸಿದರೆ? ಯಾರಾದರೂ ಗೂಢಚಾರ ಅಡಗಿದ್ದು ಗುಂಡಿಕ್ಕಿ ಕೊಂದರೆ....? ಅಥವಾ ಯಾವು ದಾದರೂ ಸುರಂಗದಲ್ಲಿ ಅಡಗಿದ್ದ ಕೊಲೆ ಗಡುಕ ಡಕಾಯಿತ ಅಕಸ್ಮಾತ್ ದಾಳಿಯಿಟ್ಟರೆ? ಡೇ ವೆನತೋ ಭಯದಿಂದ ಬೆಬ್ಬಳಿಸಿದ.

ಇಷ್ಟೆಲ್ಲ ಯೋಚಿಸುತ್ತಿದ್ದರೂ ಅವನ ಕಾಲು ಗಳು ಮಾತ್ರ ಮುಂದೆ ಮುಂದೆ ಬಾಲವಾನೋ ದತ್ತ ಸಾಗುತ್ತಲೇ ಇದ್ದವು. ಬೆಳಗಾಗುವವರೆಗೆ ನಿಂತುಬಿಟ್ಟರೆ ಗಂಡಾಂತರ ತಪ್ಪಿಸಿಕೊಳ್ಳ ಬಹುದು. ಆದರೆ ಬೆಳಗಾಗುವವರೆಗೆ ಕಾದರೆ ಗಾಡಿಯೊಳಗಿನ ಜನರ ಗತಿಯೇನು? ಎಂಥ ಅಪಘಾತ ಉಂಟಾಗಿದೆಯೋ? ಎಷ್ಟು ಜನ ಉಳಿದು ಅದೆಷ್ಟು ಜನ ಸತ್ತರೋ! ರೈಲ್ವೆ ಅಧಿ ಕಾರಿಯಂತೆ ಸಾವು ಬದುಕುಗಳ ತೂಗು ಯ್ಯಾಲೆಯಲ್ಲಿ ತೊನೆದಾಡುವ ಜನರೆಷ್ಟೋ! ಅಂತವರಲ್ಲಿ ಒಬ್ಬನ ಪ್ರಾಣವನ್ನಾದರೂ ಉಳಿ ಸಲು ಸಾಧ್ಯವಾಗುವುದಾದರೆ ಬಹು ದೊಡ್ಡ

ಕಾರ್ಯ ಈಡೇರಿದಂತಾದೀತು. ಇಂಥ ಸಂಕಟದ ವೇಳೆ ಪ್ರತಿಯೊಬ್ಬನ ಜೀವನವೂ ಅಮೂಲ್ಯವೇ. ಡೇ ವೆನೂತೋ ಕತ್ತಲಿನೊಡನೆ ಹೋರಾಡುತ್ತ ರೈಲು ಕಂಬಿಗಳ ಮೂಲಕ ಮುಂದೆ ಸಾಗುತ್ತಿದ್ದ. ಎದುರಿಗೆ ಒಂದು ಸುರಂಗವಿತ್ತು. ಅವನು ನಿಸ್ಸಂಕೋಚವಾಗಿ ಒಳ ನುಗ್ಗಿದ. ಹಿಂದಿನ ಸುರಂಗದಲ್ಲಿ ಆದಂಥ ಅನುಭವವೇ ಆಯಿತು. ಉಸಿರಾಟಕ್ಕೆ ಕಷ್ಟವೆನಿಸುತ್ತಿತ್ತು. ಕತ್ತಲಲ್ಲಿ ಬಹುಶಃ ಬಾವಲಿಗಳು ರೆಕ್ಕೆ ಬಡಿದ ಸದ್ದು ಕೇಳಿಸಿತು. ಡೇ ವೆನುತೋ ಒಮ್ಮೆಲೇ ಜಾರಿ ಅಂಗಾತನೆ ಬಿದ್ದುಬಿಟ್ಟ. ತಲೆಗೂ ಬೆನ್ನಿಗೂ ಸಾಕಷ್ಟು ಪೆಟ್ಟಾಯಿತು. ನೋವಿನಿಂದ ನರಳಿದ. ಆದರೆ ಮರುಕ್ಷಣವೇ ಎದ್ದು ನಿಂತು ಕುಂಟುತ್ತ ಮತ್ತೆ ಬಾಲವಾನೋದತ್ತ ಸಾಗಿದ.

ಕತ್ತಲು, ಮಳೆ, ಜಾರುವಿಕೆ ಹಾಗೂ ಗಾಬರಿ ...ವೆನುತೋ ಹಲವು ಸಲ ಜಾರಿಬಿದ್ದ, ದೇಹ ವಿಡೀ ನೀರು ಹಾಗೂ ಕೆಸರಿನಿಂದ ತೊಯ್ದು ಹೋಯಿತು. ನೋವಿನಿಂದ ಎಲುಬುಗಳು ಮುರಿದಂತೆ ಭಾಸವಾಗುತ್ತಿತ್ತು. ಆದರೆ ವೆನುತೋ ನಿಲ್ಲಲಿಲ್ಲ. ಒಂದೊಂದಾಗಿ ಹಲವಾರು ಸುರಂಗಗಳನ್ನು ದಾಟಿ ಹೋದ. ಪ್ರತಿಯೊಂದರಲ್ಲೂ ಉಸಿರು ಕಟ್ಟಿದಂತಹ ಅನುಭವ. 8017 ಬರೀ 10 ನಿಮಿಷದಲ್ಲಿ ದಾಟಿ ಹೋಗಿದ್ದ ದೂರವನ್ನು ಕ್ರಮಿಸಲು ವೆನುತೋನಿಗೆ ಹಲವು ತಾಸುಗಳು ಬೇಕಾದವು. ಕಟ್ಟಕಡೆಗೆ ಆತ ಮೃತ್ಯುವನ್ನು ಸೋಲಿಸಿ ಬಿಟ್ಟ. ಎಲ್ಲ ಗಂಡಾಂತರಗಳನ್ನೂ ದಾಟಿ ಆತ ಬಾಲವಾನೋ ತಲುಪಿದ.

ಸ್ಟೇಷನ್ ಮಾಸ್ತರನೆದುರು ಹೋಗುತ್ತಲೇ... ಅವರನ್ನು ಉಳಿಸಿರಿ... ಅವರೆಲ್ಲ ಸಾಯುತ್ತಿದ್ದಾರೆ. ಬೇಗ...ಬೇಗ... ಹಾ...8017 .....!" ಎನ್ನುತ್ತಲೇ ಆತ ಎಚ್ಚರತಪ್ಪಿ ಕೆಳಗುರುಳಿದ.

ಮರುಕ್ಷಣವೇ ಫೋನುಗಳೂ, ತಂತಿಗಳೂ ಚುರುಕಾದವು. ನೆರವಿನ ಗಾಡಿಗಳೂ ಹೊರಬಂದವು. ಇಷ್ಟೆಲ್ಲ ಪ್ರಯತ್ನದ ಬಳಿಕವೂ 8-10 ಜನ ಮಾತ್ರ ಉಳಿದರು. ಡೇ ವೆನುತೋ ಈ ಸಾಹಸ ಮಾಡಿರದಿದ್ದರೆ ಈ ಜನರನ್ನೂ ಉಳಿಸಲಾಗುತ್ತಿರಲಿಲ್ಲ.

ಈ ರೋಮಾಂಚಕರ ದುರ್ಘಟನೆ ಹಾಗೂ ಅದರಲ್ಲಿ ಸತ್ತ ಜನರ ಸಂಖ್ಯೆ ಅಧಿಕಾರಿಗಳನ್ನು ಸ್ತಬ್ಧಗೊಳಿಸಿತು. ಅಪಘಾತಕ್ಕೆ ಕಾರಣ ಹುಡುಕಿದಾಗ ಈ ನಿರ್ಭಾಗ್ಯ ಪ್ರವಾಸಿಗಳಿಗಿಂತಲೂ ಮೊದಲೇ ಮೃತ್ಯು ದೇವತೆ ಹೊರಟಿದ್ದಳೆಂದು ತಿಳಿದುಬಂತು.

ಮಹಾಯುದ್ಧದಿಂದಾಗಿ ಆ ಕಾಲದಲ್ಲಿ ಒಳ್ಳೇ ಇಂಜಿನ್‌ಗಳು ಸಿಗುತ್ತಿರಲಿಲ್ಲ. ಹಳೆಯ ಇಂಜಿನ್‌ಗಳನ್ನೇ ದುರಸ್ತಿ ಮಾಡಿ ಬಳಸುತ್ತಿದ್ದರು. ಬಾಲವಾನೋದಿಂದ 8017 ಹೊರಡುವುದಕ್ಕೆ ಸ್ವಲ್ಪ ಮೊದಲು ಇನ್ನೊಂದು ಗೂಡ್ಸ್ ಗಾಡಿ ಹೊರಟುಹೋಗಿತ್ತು. ಅದಕ್ಕೆ ಜೋಡಿಸಲಾಗಿದ್ದ ಎರಡೂ ಇಂಜಿನ್‌ಗಳು ಬಹಳಷ್ಟು ವಿಷಮಯ ಹೊಗೆ ಕಾರುತ್ತ ಬಾಲವಾನೋದಿಂದ ಹೊರಬಿದ್ದವು. ದಾರಿಯಲ್ಲಿ ಸಿಗುವ ಸುರಂಗಗಳಲ್ಲಿ ಅವು ಹೊಗೆ ತುಂಬುತ್ತ ಹೋದವು. 10 ನಿಮಿಷದ ಬಳಿಕ ಎರಡು ಕಿಲೋಮಿಟರ್ ಉದ್ದದ ಸುರಂಗ ಬಂತು. ಅದರಲ್ಲಿ ಹೊಗೆ ಇನ್ನಷ್ಟು ತುಂಬಿತು. ಈ ಹೊಗೆ ಅತ್ಯಧಿಕ ಪ್ರಮಾಣದ ಕಾರ್ಬನ್ ಮೋನೋಕ್ಸಾಯ್ಡ್ ಅನಿಲದಿಂದ ಕೂಡಿತ್ತು. ಕಾರ್ಬನ್ ಮೋನೋಕ್ಸಾಯ್ಡ್ ತುಂಬ ವಿಷಮಯವಾದ ಅನಿಲ.

8017 ಗೂಡ್ಸ್ ಗಾಡಿಯೂ ಈ ಸುರಂಗದ ಮೂಲಕ ಮುಂದುವರಿಯುತ್ತಿತ್ತು. ಮಲಗಿದ ಪ್ರವಾಸಿಗಳು ಈ ವಿಷಮಯ ಅನಿಲದ ಪ್ರಭಾವಕ್ಕೆ ಗುರಿಯಾಗುತ್ತಿದ್ದರು. ಎರಡು ಕಿಲೋಮೀಟರ್ ಉದ್ದನೆಯ ಮೃತ್ಯುಸುರಂಗವನ್ನು ತಲಪುವ ಮೊದಲೇ ಎಷ್ಟೋ ಜನ ದುರ್ದೈವಿಗಳು ಎಚ್ಚರಾಗದೆಯೇ ಸತ್ತು ಹೋದರು. ಎಷ್ಟೋ ಜನ ಎಚ್ಚೆತ್ತರೂ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಯತ್ನಿಸಿ ಸಫಲರಾಗದೆ ಎಚ್ಚರತಪ್ಪಿ ಸತ್ತು ಹೋದರು. ಫ್ರಾನ್ಸಿಸ್ಕೋ ಲುಯಿ ಕೊಸೊಲಿನೊ ಡೊಮಿನಿಕೊಮಿಯೆಲ್ ಮೊದಲಾದ ಬೆರಳೆಣಿಕೆಯ ಭಾಗ್ಯಶಾಲಿಗಳ ಹೆಸರುಗಳಷ್ಟು ಅಪಘಾತಕ್ಕೀಡಾಗಿಯೂ ಬದುಕಿ ಉಳಿದವರ ಸೂಚಿಯಲ್ಲಿ ಕಾಣಿಸಿಕೊಂಡವು.

ಗೀಸೆಪ್‌ಡೇ ವೆನುತೋನ ಹೆಸರು ರೈಲು ಅಪಘಾತಗಳ ಇತಿಹಾಸದಲ್ಲಿ ಸಾಹಸಿ, ಜಾಣ ಹಾಗೂ ಧೈರ್ಯಶಾಲಿ ವ್ಯಕ್ತಿಯೆಂದು ನಮೂದಿಸಲ್ಪಟ್ಟಿತು. ●

# ಚೈತ್ರರಥ

ಮ.ಸು.ಕೃಷ್ಣಮೂರ್ತಿ

ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಹಳ್ಳಿಗರಿಗೆ ಜಾತ್ರೆ, ರಥೋತ್ಸವ, ತೆಪ್ಪೋತ್ಸವ, ಕೊಠಾರೋತ್ಸವ, ಮೊದಲಾದವುಗಳಲ್ಲಿ ಎಲ್ಲಿಲ್ಲದ ಸಂಭ್ರಮ. ನಮ್ಮ ಊರಿನಲ್ಲಿ ಯಾವ ರಥೋತ್ಸವವೂ ನಡೆಯುತ್ತಿರಲಿಲ್ಲ. ಆದರೆ ನಮ್ಮ ಊರಿನ ನೆರೆಯ ಊರುಗಳಲ್ಲಿ ನಡೆಯುವ ರಥೋತ್ಸವಗಳಿಗೆ ನಾವು ಹಾಜರಾಗದೆ ಇರುತ್ತಿರಲಿಲ್ಲ.

ಹೇಮಗಿರಿ, ಚುಂಚನಕಟ್ಟೆ, ಕಿಕ್ಕೇರಿ, ಹೊಳೇನರಸೀಪುರ ಮತ್ತು ಅಕ್ಕಿಹೆಬ್ಬಾಳದ ಜಾತ್ರೆಗಳಿಗೆ ನಾನು ಒಂದಿಲ್ಲೊಂದು ಸಲ ಹೋಗಿದ್ದೇನೆ. ಇವುಗಳಲ್ಲೆಲ್ಲ ನನಗೆ ಅತ್ಯಂತ ಪ್ರಿಯವಾದುದೆಂದರೆ ಹೇಮಗಿರಿಯ ರಥೋತ್ಸವ. ಕಾರಣ ಮೊದಲನೆಯದಾಗಿ ಹೇಮಗಿರಿ ನಮ್ಮ ಊರಿಗೆ ಅತ್ಯಂತ ನಿಕಟವಾದುದು. ಎರಡನೆಯದಾಗಿ ಅದರ ಬೆಟ್ಟ, ಮೂರನೆಯದಾಗಿ ಅಲ್ಲಿ ಹೇಮಾವತಿ ನದಿಯಲ್ಲಿ ಮುಳುಗಿದ ಚಿನ್ನದ ರಥ.

ಅಲ್ಲಿ ಯಾವುದೋ ಕಾಲದಲ್ಲಿ ಒಂದು ಚಿನ್ನದ ರಥ ಮುಳುಗಿಹೋಯಿತಂತೆ! ಅದನ್ನು ಪತ್ತೆ ಹಚ್ಚಲು ಯತ್ನಿಸಿ ಜನ ವಿಫಲರಾದರಂತೆ! ಆದ್ದರಿಂದ ಆ ನದಿಯಲ್ಲಿ ಈಗಲೂ ಯಾವುದೋ ಕಾಣದ ತಾಣದಲ್ಲಿ ಮೂಲೆಯಲ್ಲಿ ಚಿನ್ನದ ರಥ ಹುದುಗಿರಬೇಕೆಂದು ಬಾಲ್ಯದಲ್ಲಿ ನಾನು ಮತ್ತು ನನ್ನ ಗೆಳೆಯರು ಅದಕ್ಕಾಗಿ ಹುಡುಕಾಟ ನಡೆಸಿದ್ದುಂಟು.

ಮುಳುಗಿ ಹೋಗಿದ್ದೆಲ್ಲ ಚಿನ್ನದ್ದೇ! ಏನಾದರೂ ಆಗಲಿ 'ಹೇಮಗಿರಿ' ಎಂದ ಕೂಡಲೇ ಇಂದಿಗೂ ಆ ಹೇಮರಥ ನನ್ನ ಕಣ್ಣೆದುರಿಗೆ ನಿಲ್ಲುತ್ತದೆ. ಅದಲ್ಲದೆ ಅಲ್ಲಿಯ ರಂಗನಾಥನ ಮರದ ರಥ, ಅದರ ಧ್ವಜ, ಥಳ ಥಳಿಸುವ ಕಳಸ ಚಿನ್ನದ ರಥವಾಗಿ ನನ್ನ ಚಿತ್ತ ಭಿತ್ತಿಯ ಮೇಲೆ ಇಂದಿಗೂ ಒಮ್ಮೊಮ್ಮೆ ಬಂದು ಹೋಗುವುದುಂಟು.

ಅನಂತರ ನಾನು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಬಂದ ಮೇಲೆ ಅಲ್ಲಿಯ ಚಾಮುಂಡಿ ಬೆಟ್ಟ, ಚಾಮುಂಡೇಶ್ವರಿಯ ರಥೋತ್ಸವ, ಅದರಲ್ಲೂ ಮಹಾರಾಜರೇ ಸ್ವತಃ ಎಳೆಯುತ್ತಿದ್ದ ಚಿನ್ನದ ಕಳಸದ ರಥವನ್ನು ಕಂಡು ರೋಮಾಂಚಿತನಾದುದುಂಟು. ಚಾಮುಂಡಿ ಬೆಟ್ಟದ ಮೇಲೆ ಚಾಮುಂಡೇಶ್ವರಿಯ ರಥೋತ್ಸವವಾದರೆ ಕೆಳಗೆ ಅರಮನೆಯ

ಮುಂದೆ ರಥಸಪ್ತಮಿಯ ದಿನ ಊರಿನ ಎಲ್ಲ ದೇವಾಲಯಗಳ ರಥಗಳು ಬಂದು ಸೇರುತ್ತಿದ್ದವು. ಆ ರಥಗಳಿಗೆ ನಾವು ದವನವನ್ನು ಎಸೆದಿದ್ದೂ ಎಸೆದದ್ದೆ!

ಮೈಸೂರಿನ ಸುತ್ತಮುತ್ತ ಇರುವ ಶ್ರೀರಂಗಪಟ್ಟಣ, ಕರೀಘಟ್ಟ, ನಂಜನಗೂಡು ಮತ್ತು ತಿರುಮಕೂಡಲು ನರಸೀಪುರದ ರಥೋತ್ಸವಗಳೂ ಬಾಲ್ಯದಲ್ಲಿ ನನಗೆ ಆಕರ್ಷಣೀಯ ಕೇಂದ್ರಗಳಾಗಿದ್ದವು.

ಅಂತೂ ರಥೋತ್ಸವವೆಂದರೆ ಈಗಲೂ ನನ್ನ ಮನಸ್ಸಿಗೆ ಹಬ್ಬ. ನಮ್ಮ ಮನೆದೇವರ ರಥೋತ್ಸವದ ದಿನ ಮನೆಯಲ್ಲಿ ಹಬ್ಬ ಮಾಡಬೇಕಂತೆ. ಆದರೆ ನನಗೆ ಮಾತ್ರ ರಥೋತ್ಸವವೆಂದರೆ ಸಾಕು, ಅದು ಯಾವುದೇ ದೇವರದ್ದಿರಲಿ ನನ್ನ ಮನಸ್ಸಿಗೆ ಆ ಕ್ಷಣ ಹಬ್ಬ. ಗತಕಾಲಕ್ಕೆ ಪ್ರಯಾಣಿಸಲು ನನಗೆ ಅದರ ಕಲ್ಪನೆಯೇ ಸಾಕು. ಕಾಳಿದಾಸನ 'ಕುಮಾರಸಂಭವ'ದಲ್ಲಿ ಕಾಮದೇವ ತನ್ನ ರಥವನ್ನು ಏರಿ ಕುಳಿತ ವರ್ಣನೆಯನ್ನು ಓದುತ್ತಿದ್ದಾಗ ನನ್ನ ಕಣ್ಣ ಮುಂದೆ ನಮ್ಮ ಹೇಮಗಿರಿಯ ರಥವೇ ಎದ್ದು ನಿಲ್ಲುತ್ತಿತ್ತು. ಆಂಡಯ್ಯನ 'ಕಬ್ಬಿಗರ ಕಾವ್ಯ'ದಲ್ಲಿ ಬರುವ ಕಾಮನ ತೇರಿನ ವರ್ಣನೆಯನ್ನು ಓದಿದ ಮೇಲಂತೂ ನನ್ನ ರಥದ ಮೋಹ ಇನ್ನೂ ಹೆಚ್ಚಾಯಿತು.

ರಥದ ಈ ಮೋಹವನ್ನು ದೃಢಗೊಳಿಸಿತು, ನಾನು ಚಿಕ್ಕಂದಿನಲ್ಲಿ ಓದಿದ ಕುವೆಂಪು ಅವರ ಈ ಕವಿತೆ:

> **"ಜೀವ ರಥೋತ್ಸವವಿದನಣಕಿಸದಿರು**
> **ಎಲೆ ಸಂನ್ಯಾಸಿ**
> **ಸಾರಥಿಯನು ನೋಡಾದರೂ ಬಾ**
> **ತೇರನು ಎಳೆಯುವ ಸಂನ್ಯಾಸಿ!"**

ಎನ್.ಟಿ. ರಾಮರಾವ್ ಅವರ 'ಚೈತನ್ಯರಥ' ಮತ್ತು ರಾಮಕೃಷ್ಣ ಹೆಗಡೆಯವರ 'ಜಯವಾಹಿನಿ' ಇವುಗಳನ್ನೆಲ್ಲ ನೆನೆದಾಗ ಅನಾಯಾಸವಾಗಿಯೇ ನನಗೆ ತುಳಸೀದಾಸರ 'ವಿಜಯರಥ'ದ ನೆನಪಾಗುತ್ತದೆ. ಅವರ 'ರಾಮಚರಿತಮಾನಸ'ದಲ್ಲಿ ಲಂಕೆಯ ಯುದ್ಧದಲ್ಲಿ ವಿರಥನಾದ ರಾಮನನ್ನು ಕಂಡು "ಮಹಾರಥಿ ರಾವಣನನ್ನು ನೀವು ಹೇಗೆ ಜಯಿಸುವಿರಿ?" ಎಂದು ವಿಭೀಷಣ ತಳ್ಳಂಕಗೊಂಡು ಕೇಳುತ್ತಾನೆ. ಆಗ ಅವನನ್ನು ಸಮಾಧಾನ ಮಾಡುತ್ತಾ ವಿಜಯರಥ ಯಾವುದೆಂದು ವಿವರಿಸುತ್ತ ರಾಮ ಹೀಗೆ ಹೇಳುತ್ತಾನೆ. "ಜಯ ಯಾವುದರಿಂದ ದೊರೆಯುವುದೋ ಆ ರಥವೇ ಬೇರೆ, ಶೌರ್ಯ ಮತ್ತು ಧೈರ್ಯ ಆ ರಥದ ಗಾಲಿಗಳು. ಸತ್ಯ ಶೀಲ ಅದರ ದೃಢ ಧ್ವಜಪತಾಕೆಗಳು. ಬಲ, ವಿವೇಕ, ದಯೆ ಹಾಗೂ ಪರೋಪಕಾರ ಆ ರಥದ ಕುದುರೆಗಳು, ಕ್ಷಮೆ, ದಯೆ ಹಾಗೂ ಸಮತ್ವವೇ ಮುಪ್ಪುರಿಗೊಂಡು ಸವೆದ ಹಗ್ಗದಿಂದ ಆ ಕುದುರೆಗಳನ್ನು ಕಟ್ಟಿದೆ. ಭಗವದ್ಭಜನೆಯೇ ಆ ರಥದ ಸಾರಥಿ. ವೈರಾಗ್ಯವೇ ಆ ಯೋಧನ ಗುರಾಣಿ. ಸಂತೋಷ ಕೃಪಾಣ, ದಾನವೇ ಪರಳು, ಬುದ್ಧಿ ಪ್ರಚಂಡ ಶಕ್ತಿ, ಶ್ರೇಷ್ಠ ವಿಜ್ಞಾನವೇ ಕಠಿಣ ಕೋದಂಡ, ಅಮಲ ಅಚಲ ಮನವೇ ತೂಣೀರ. ಶಮ, ಯಮ, ನಿಯಮಗಳೇ ಅದರಲ್ಲಿರುವ ನಾನಾ ವಿಧವಾದ ಬಾಣಗಳು, ವಿಪ್ರ, ಗುರುಪೂಜನವೇ ಅವನ ಅಭೇದ್ಯ ಕವಚ. ಇದಕ್ಕೆ ಸರಿದೊರೆಯಾದ ವಿಜಯದ ಉಪಾಯ ಬೇರೊಂದಿಲ್ಲ. ಇಂಥ ಧರ್ಮಮಯ ರಥವುಳ್ಳಾತನಿಗೆ ಗೆಲ್ಲಲು ಶತ್ರುವೇ ಇರುವುದಿಲ್ಲ. ಇಂಥ ರಥವುಳ್ಳ ವೀರ ಸಂಸಾರವೆಂಬ ಮಹಾದುರ್ಜಯ ಶತ್ರುವನ್ನು ಗೆಲ್ಲಬಲ್ಲ."

ತುಳಸೀದಾಸರ ಈ ವಿಜಯರಥವನ್ನು ನೆನೆದಾಗ ಮನುಜನ ದೇಹವೇ ಒಂದು ರಥ ಎಂಬ ಕಠೋಪನಿಷತ್ತಿನ ಮಾತು ನೆನಪಾಗುತ್ತದೆ.

ನಾನು ಚರ್ಚಿಸುತ್ತಿರುವ ರಥ ಈ ಎಲ್ಲ ರಥಗಳಿಗಿಂತಲೂ ಭಿನ್ನ. ನಮ್ಮ ನಾಡಿನಲ್ಲಿ ಒಂದೊಂದು ಊರಿನಲ್ಲಿ ಒಂದೊಂದು ಋತು, ಮಾಸದಲ್ಲಿ ಒಂದೊಂದು ಕಡೆ ರಥೋತ್ಸವ. ಆದರೆ ನಾನು ಹೇಳುವುದು ಜೈತ್ರರಥ! ಅದಕ್ಕೆ ಚಿತ್ರಮಯವಾದ ರಥ ಇಲ್ಲವೆ ಎಳೆ ಚಿಗುರಿನ ವಸಂತರಥ ಎನ್ನಬಹುದು. ಹಿಂದೆ ರಾಜಮಹಾರಾಜರುಗಳು ಶತ್ರುಗಳನ್ನು ಗೆಲ್ಲಲು ರಥಾರೂಢರಾಗಿ ಜೈತ್ರಯಾತ್ರೆಗೆ ಹೋಗುತ್ತಿದ್ದರು. ಅಂಥವರ ರಥವನ್ನು ಜೈತ್ರರಥ ಎಂದು ಕರೆಯುತ್ತಿದ್ದರು.

ಹೆಸರು ಹೀಗಿದ್ದರೂ ಬೇಸಿಗೆಯನ್ನು ಬಿಟ್ಟು

ಉಳಿದೆಲ್ಲ ಕಾಲಗಳಲ್ಲೂ ಈ ರಥ ನಮ್ಮ ಬೀದಿಯಲ್ಲಿ ಹೋಗುತ್ತದೆ. ಉಳಿದೆಡೆ ರಥ ಹೋಗುವ ಬೀದಿಯೇ ಬೇರೆ. ಅದು ಹೋಗುವ ಬೀದಿಗೆ ರಥ ಬೀದಿಯೆಂದೇ ಹೆಸರು. ನ್ಯಾಯವಾಗಿ ನೋಡಿದರೆ ರಥ ಹೋದೆಡೆಯೇ ಬೀದಿ. ಆದ್ದರಿಂದ ಸಂಸ್ಕೃತದಲ್ಲಿ ಬೀದಿಗೆ 'ರಥ್ಯಾ' ಎಂದು ಹೆಸರು.

ಆದರೆ ಕಾಶಿಯಂಥ ವಿಖ್ಯಾತ ಪ್ರಾಚೀನ ನಗರಗಳನ್ನು ನೋಡಿದರೆ, ಅದರಲ್ಲೂ ಅವುಗಳ ಗಲ್ಲಿಗಳನ್ನು ನೋಡಿದರೆ ಈ ರಥ, ರಥೋತ್ಸವ ದ್ರಾವಿಡ ಸಂಸ್ಕೃತಿಯದೆಂಬುದು ಸ್ಪಷ್ಟವಾದೀತು. ಕಾಶಿಯಲ್ಲಿ ವಿಶ್ವನಾಥ ದೇವಾಲಯಕ್ಕೆ ಹೋಗುವ ಬೀದಿ ಕೂಡ ಒಂದು ಗಲ್ಲಿ, 'ರಥ್ಯಾ' ಅಲ್ಲ, ಅಲ್ಲಿ ರಥವಿರಲಿ, ಒಂದು ರಿಕ್ಷಾ ಕೂಡ ಹೋಗಲಾಗುವುದಿಲ್ಲ.

ನಾನು ಹೇಳಲಿರುವ ರಥ ಇವೆಲ್ಲಕ್ಕಿಂತ ಭಿನ್ನ. ಅದು ನಿತ್ಯ ರಥೋತ್ಸವ ಇಲ್ಲವೆ ನಿತ್ಯೋತ್ಸವ ಎನ್ನಬಹುದು. ಮೈಸೂರಿನಲ್ಲಿ ಕೆಲ ಶಾಲೆಗಳಿಗೆ ತಮ್ಮದೇ ಆದ ಸ್ವಂತ ವಾಹನಗಳಿಲ್ಲ, (ಬೆಂಗಳೂರಂಥಲ್ಲಿ ಶಾಲೆಯದೇ ಬಸ್ಸೋ ವ್ಯಾನೋ ಇರಬಹುದಾಗಿದೆ) ಹೀಗಾಗಿ ಕೆಲವು ಪೋಷಕರು ಕುದುರೆಗಾಡಿಯೊಂದನ್ನು ವರ್ತನೆ ಮಾಡಿಕೊಂಡಿರುತ್ತಾರೆ. ಹತ್ತಿಪ್ಪತ್ತು ಮಕ್ಕಳನ್ನು ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಶಾಲೆಗೆ ಬಿಡುವುದು, ಮತ್ತೆ ಶಾಲೆಯಿಂದ ಮನೆಗೆ ಕರೆದು ತಂದುಬಿಡುವುದು ಗಾಡಿಯವನ ಕೆಲಸ. ಇಂಥ ರಿಕ್ಷಾಗಳನ್ನೂ ನೋಡಿದ್ದೇನೆ. ಆದರೆ ಯಾವನೋ ರಿಕ್ಷಾಚಾಲಕ ಬೇಹುಶಾರಾಗಿ ರಿಕ್ಷಾ ಓಡಿಸಿದ್ದರಿಂದಲೋ ಅಥವಾ ಒಮ್ಮೆ ಒಂದು ರಿಕ್ಷಾಕ್ಕೂ ಸಿಟಿ ಬಸ್ಸಿಗೂ ಡಿಕ್ಕಿಯಾಗಿ ಅನೇಕ ಮಕ್ಕಳು ಸತ್ತವಂತೆ. ಈ ಕಾರಣದಿಂದಲೋ ಏನೋ ಪಾಲಕರು ರಿಕ್ಷಾಗಳಿಗಿಂತ ಟಾಂಗಾ ಗಾಡಿಯನ್ನೇ ಬಯಸುತ್ತಾರೆ.

ತಮ್ಮ ಮಕ್ಕಳನ್ನು ಕಾರಿನಲ್ಲಿ ಇಲ್ಲವೆ ಸ್ಕೂಟರಿನಲ್ಲಿ ಕರೆದುಕೊಂಡು ಹೋಗಿಬಿಡುವ ಪುಣ್ಯಾತ್ಮರೂ ಇದ್ದಾರೆ. ಆದರೆ ಆ ವರ್ಗವೇ ಬೇರೆ ಅವರ ವರ್ಗಾಪವರ್ಗವೇ ಬೇರೆ. ಒಂದು ಕಾಲದಲ್ಲಿ ಟಾಂಗಾಕ್ಕೆ ಹೆಸರಾಗಿದ್ದ ಮೈಸೂರಿನಲ್ಲಿ ಈ ತ್ರಿಚಕ್ರವಾಹನಗಳಿಂದಾಗಿ ಟಾಂಗಾಗಳು ಈಗ ಕೊನೆಯುಸಿರೆಳೆಯುತ್ತಿವೆ. ಬಡ ಹಾಗೂ ಮಧ್ಯಮ ವರ್ಗದ ಮಕ್ಕಳ ಪಾಲಿಗೆ ಈ ಟಾಂಗಾಗಳು ಚಿನ್ನದ ರಥಗಳೇ ಸರಿ. ನಮ್ಮ ಮನೆಯ ಮುಂದೆ ನಿತ್ಯವೂ ಬೆಳಿಗ್ಗೆ ಎಂಟೂವರೆಗೆ ಸರಿಯಾಗಿ ಇಂಥದೊಂದು ರಥ ಬರುತ್ತದೆ. ಹಿಂದೆ ದೇವರಥದ ಬರವಿಗಾಗಿ ಕಾಯುತ್ತಾ ತಾಯಂದಿರು ಹೂ ಹಣ್ಣು ಹಿಡಿದು ನಿಲ್ಲುತ್ತಿದ್ದರು. ಆದರೆ ಈಗ ಹೂ ಹಣ್ಣಿಗೆ ಬದಲಾಗಿ ಪುಸ್ತಕಗಳ ಚೀಲ, ಬುಟ್ಟಿ ಹಿಡಿದು ನಿಂತಿರುತ್ತಾರೆ. ದೇವರಥಕ್ಕೆ ಬಣ್ಣಬಣ್ಣದ ಪತಾಕೆಗಳಿದ್ದರೆ ಈ ರಥಕ್ಕೆ ಮಕ್ಕಳ ವಿವಿಧ ವರ್ಣದ ಚೀಲಗಳು, ಬುಟ್ಟಿಗಳು, ಡಬ್ಬಿಗಳ, ಬಟ್ಟೆ, ಟೇಪುಗಳು ಕಂಗೊಳಿಸುತ್ತಿರುತ್ತವೆ.

ದೇವರಥಕ್ಕೆ ಕುದುರೆಯಿಲ್ಲ, ಸಾರಥಿಯಿಲ್ಲ. ಆದರೆ ಈ ರಥಕ್ಕೆ ಕುದುರೆಯಿದೆ, ಸಾರಥಿಯಿದ್ದಾನೆ. ಆ ಸಾರಥಿಗೆ ಈ ದೇವರುಗಳ ಮೇಲೆ ಎಲ್ಲಿಲ್ಲದ ಭಕ್ತಿ, ಪ್ರೀತಿ. ಅವನು ತನ್ನ

## ಮಾದರಿ!

ಯಾದವಿ ಕಲಹದ ಸಮಯ. ಅಮೆರಿಕ ಸಂಯುಕ್ತ ಸಂಸ್ಥಾನದ ವಿದೇಶಾಂಗ ಸಚಿವರಿಗೆ ಅಧ್ಯಕ್ಷರನ್ನು ತುರ್ತಾಗಿ ಕಾಣುವ ಕರೆಬಂದಿತು.

ಆತುರಾತುರವಾಗಿ, ವಿದೇಶಾಂಗ ಸಚಿವರು 'ವೈಟ್‌ಹೌಸ್' (white house) ಗೆ ಧಾವಿಸಿದಾಗ ಅವರಿಗೊಂದು ಆಶ್ಚರ್ಯ ಕಾದಿತ್ತು. ಅಧ್ಯಕ್ಷ ಸ್ಥಾನದಲ್ಲಿರುವ ಅಬ್ರಹಾಂ ಲಿಂಕನ್ ರವರು ತಮ್ಮ ಷೂಗಳಿಗೆ ತಾವೇ ಪಾಲೀಶ್ ಹಾಕುತ್ತಿದ್ದರು!

"ದೇಶದ ಉನ್ನತ ಸ್ಥಾನದಲ್ಲಿರುವ ವ್ಯಕ್ತಿ, ತಮ್ಮ 'ಶೂ' ಗಳಿಗೆ ತಾವೇ ಪಾಲೀಶ್ ಹಾಕುವ ಪದ್ಧತಿ ರೂಢಿಯಲ್ಲಿಲ್ಲ" ಎಂದು ನುಡಿದರು; ವಿದೇಶಾಂಗ ಮಂತ್ರಿ. ಅದಕ್ಕೆ ಅಬ್ರಹಾಂ ಲಿಂಕನ್‌ರವರು,

"ಮತ್ತೆ... ಇನ್ನಾರ ಶೂಗಳಿಗೆ ಪಾಲೀಶ್ ಹಾಕಬೇಕು" ಎಂದರು, ತಮ್ಮ ಹಾಸ್ಯ ಮಿಶ್ರಿತ ಚತುರ ಮಾತುಗಳಿಂದ, ನಗುತ್ತ.

(ಸಂಗ್ರಹ)
ಎಚ್. ಗವಿಸಿದ್ದಯ್ಯ




ರಥಕ್ಕೆ ಗುಡಿಯಲ್ಲಿರುವ ದೇವರು ಬಿಜಮಾಡಿದ್ದರೆ ಇಷ್ಟೊಂದು ಆಸ್ಥೆ ವಹಿಸಿಸುತ್ತಿದ್ದನೋ ಇಲ್ಲವೋ! ಆ ಗಾಡಿಗೆ, ಕುದುರೆಗೆ ಎಲ್ಲಿಲ್ಲದ ಶೃಂಗಾರ! ಕುದುರೆಯ ಕೊರಳಿಗೆ ಘಂಟೆ! ತಲೆಗೆ ಚುಂಗು! ಗಾಡಿಗೆ ಬಣ್ಣ! ಕುದುರೆಗೆ ಥಳಥಳಿಸುವಂಥ ಕಂಚಿನ ಒಡವೆಗಳು!

ಹಿಂದೆ ರಥದಲ್ಲಿ ದೇವರ ವಿಗ್ರಹಗಳನ್ನು ಕಂಡು ಜನ ಪುಲಕಿತರಾಗುತ್ತಿದ್ದರು, ಪುನೀತರಾಗುತ್ತಿದ್ದರು. ಆದರೆ ಆ ದೇವರು ಎಂದಿಗೂ ಬಾಯಿ ತೆರೆದುದಿಲ್ಲ, ಇಂದಿಗೂ ತೆರೆಯುವುದಿಲ್ಲ, ಹಲ್ಲು ಬೀರುವುದಿಲ್ಲ! ಏನು ಮಾಡಿದರೂ ಮೆಚ್ಚಿ 'ಅಹುದು' ಎನ್ನುವುದಿಲ್ಲ. ಆದರೆ ಈ ರಥವನ್ನೇರುವ ದೇವರು ಮನೆ ಮನೆಯಿಂದಲೂ ಬರುವ ಪುಟ್ಟ ದೇವರುಗಳು, ಬಂಗಾರದ ಮಕ್ಕಳು. ಅವು ಹಾದಿಯುದ್ದಕ್ಕೂ ನಗೆಮಲ್ಲಿಗೆಯನ್ನು ಚೆಲ್ಲುತ್ತ ಬರುತ್ತವೆ.

ದೇವರಥದಲ್ಲಿ ಹೆಚ್ಚೆಂದರೆ ಶ್ರೀದೇವಿ, ಭೂದೇವಿಯರಿಂದ ಪರಿವೃತನಾದ ಮಹಾವಿಷ್ಣು ಇಲ್ಲವೆ ರಾಮಪಂಚಾಯತನ! ಸಾಮಾನ್ಯವಾಗಿ ಒಂಟಿ ಇಲ್ಲವೆ ಯುಗಳ ಮೂರ್ತಿಯೇ ಹೆಚ್ಚು. ಆದರೆ ಈ ರಥದಲ್ಲಿ ರಥದ ಗಾತ್ರಕ್ಕೆ ಅನುಗುಣವಾಗಿ ದೇವತೆಗಳ ಸಂಖ್ಯೆ! ಆ ದೇವತೆಗಳಲ್ಲಿ ಅಷ್ಟದಿಕ್ಪಾಲಕರಿದ್ದಾರೆ, ತ್ರಿಮೂರ್ತಿಗಳಿದ್ದಾರೆ. 33 ಕೋಟಿ ದೇವತೆಗಳಲ್ಲಿ ಯಾರು ಬೇಕಾದರೂ ದೊರೆತಾರು!

ಅಗೋ ಆಕೆ ಮರಿ ಚಂಡಿ, ಚಾಮುಂಡಿ. ಶಾಲೆಗೆ ಹೋಗುವುದಿಲ್ಲವೆಂದು ಹಟ. ತಾಯಿಯ ಪುಸಲಾವಣೆ, ಪ್ರಲೋಭನೆಗೆ ಬೆಲೆಯಿಲ್ಲ. ಆದರೆ ಒಬ್ಬ ದೇವತೆ 'ಪೊಂಯ್' ಎಂದು ಏನನ್ನೋ ಊದಿದ. ತಕ್ಕೋ ಆಕೆಯ ಮುಖದ ಮೇಲೆ ಮಂದಹಾಸ! ಮತ್ತೊಬ್ಬ ಮರಿ ರುದ್ರ, ಪ್ರಳಯರುದ್ರನಾಗಿ ಪುಸ್ತಕ, ಚೀಲ, ಚಾಕಲೇಟ್ ಎಲ್ಲ ಎಸೆದು ಸೆಟೆದು ನಿಂತಿದ್ದಾನೆ. ರಥ ಹತ್ತಲೊಲ್ಲ. ತಾಯಿ ವಿಫಲಳಾದಳು. ಇನ್ನಾವುದೋ ದೇವತೆ ಹೇಳಿತು: "ಪುಟ್ಟು, ಇಂದು ಕುದುರೆಯಾಟ ಆಡೋಣ." ಸರಿ, ರುದ್ರ ಶಿವನಾಗಿಬಿಟ್ಟ. ತಲೆಯ ಮೇಲಿದ್ದ ಚಂದ್ರ ಮುಖದ ಮೇಲಕ್ಕೆ ಬಂದಿಳಿದ.

ಮತ್ತೊಂದು ದೇವರಿಗೆ ಐರಾವತವನ್ನೇರಿದ ಇಂದ್ರನ ಗತ್ತು ರಥವೇರಲೊಲ್ಲ. ರಿಕ್ಷಾ, ಕಾರೇ ಬೇಕು! ಅಗೋ ಅಲ್ಲೊಬ್ಬ ದೇವತೆ

ಟ್ರೊಂಯ್ ಟ್ರೊಂಯ್ ಎಂದು ಮಂಡೂಕ ಗೀತ ಹಾಡಿದ. ಇಡೀ ರಥ ನಗೆಯ ಕಡಲಲ್ಲಿ ಮುಳುಗಿತು. ಇಂದ್ರನ ಶ್ರೀಮದ್ಗಾಂಭೀರ್ಯ ವೆಲ್ಲ ಕರಗಿ ಅವನು ಪ್ರಸನ್ನವದನನಾಗಿ ರಥಾ ರೋಹಣ ಮಾಡಿದ. ಇನ್ನೊಬ್ಬ ವರುಣ ದೇವತೆ! ಕಣ್ಣು, ಮೂಗು, ಬಾಯೆಲ್ಲ ನೀರು. ಎಷ್ಟು ಧೈರ್ಯ ಹೇಳಿದರೂ ಬಳಿಗೆ ಬಾರ!

ಆಗ ಸಾರಥಿ ಕುದುರೆಯ ಕೊರಳ ಘಂಟೆ ಬಾರಿಸಿದ. ಆ ನಾದ ದೇವತೆಗಳನ್ನು ಎಚ್ಚರಿಸ ಬೇಕಾದರೆ ಘಂಟಾನಾದ ಮಾಡಬೇಕಂತೆ. ಆ ಜೋಭದ್ರ ಮೋರೆಯ ಮೇಲೆ ನಗೆ ಮಲ್ಲಿಗೆ ಯನ್ನು ಮೂಡಿಸಿತು. ಆತ ರಥದೊಳಕ್ಕೆ ಬಿಜ ಮಾಡಿದ.

ಹೆಣ್ಣು ದೇವತೆಗಳ ಪುಷ್ಪಾಲಂಕಾರದ್ದೇ ಒಂದು ಪರಿಯಾದರೆ ಗಂಡು ದೇವತೆಗಳ ಠೀವಿಯೇ ಬೇರೆ. ತ್ರಿಲೋಕ ತಲ್ಲಣನಾದ ರಾವಣನನ್ನು ಗೆಲ್ಲುವ ರಾಮನ ಮುದ್ರೆ ಒಂದಾ ದರೆ, ಮುರಳೀನಾದದಿಂದ ಲೋಕವನ್ನೇ ಮರಳುಗೊಳಿಸುವ ಮಂದಸ್ಮಿತ ಮತ್ತೊಂದಕ್ಕೆ. ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಕೊನೆಗೆ ಬುದ್ಧನ ಅವತಾರವನ್ನೂ ಹೊಸ ಗಾಲದ ಈ ಜೈತ್ರರಥದಲ್ಲಿ ನೋಡಬಹುದು.

ಈ ರಥದ ಸಾರಥಿ ಕೂಡ ವಿಲಕ್ಷಣ. ಇತರ ರಂತೆ ಬರಿಯ ಹಣಕ್ಕಾಗಿ ಅವನು ಗಾಡಿ ಹೊಡೆ ಯುವವನಲ್ಲ. ಮಕ್ಕಳೆಂದರೆ ಅವನಿಗೆ ಪಂಚ ಪ್ರಾಣ. ಯುಗಾದಿ, ದೀಪಾವಳಿ ಮೊದಲಾದ ಹಬ್ಬಗಳ ದಿನ ರಜಾ. ಆದರೆ ಅದರ ಮಾರ ನೆಯ ದಿನ ಅವನ ರಥಕ್ಕೆ ಹಬ್ಬ. ಅವನು ತನ್ನ ಗಾಡಿಗೆ ಬಣ್ಣ ಬಣ್ಣದ ಕಾಗದದ ತೋರಣ ಕಟ್ಟಿ ಅಲಂಕರಿಸುವ ಅವನ ಚಾಟಿ ನಿಜಕ್ಕೂ ಇಂದ್ರ ಧನಸ್ಸೇ ಇರಬೇಕು. ಬಣ್ಣ ಬಣ್ಣದ ದಾರಗಳಿಂದ ನಿರ್ಮಿಸಿ ಹೆದೆಬಿಚ್ಚಿದ ಕಾಮನ ಬಿಲ್ಲಿನಂತೆ, ಎದೆ ಬಿಚ್ಚಿದ ಯಕ್ಷದಂಡದಂತೆ ಅದು ಕಂಗೊಳಿಸುತ್ತದೆ. ಅವನ ಕುದುರೆ ಬಡಕಲು ಕುದುರೆಯಲ್ಲ, ಅವನ ದೃಷ್ಟಿಯಲ್ಲಿ ಅದು ಉಚ್ಚೈಶ್ರವ. ಆ ಪುಟ್ಟ ದೇವತೆಗಳನ್ನು ಅವನು ನಂದನ ಕಾನನಕ್ಕೊಯ್ಯುವನೋ ಎಂಬಂಥ ಉತ್ಸಾಹ. ಆ ರಥದ ಸಾರಥ್ಯ ಮಾಡಲು ಅನೇಕ ಪುಟ್ಟ ದೇವತೆಗಳು ತಹ ತಹಿಸುತ್ತವೆ. ಬಣ್ಣದ ಕೋಲು ಬಣ್ಣದ ದಾರ ಹಿಡಿದು ಹೊಯ್ ಹೊಯ್ ಎಂದು ಕುದುರೆ ಯನ್ನು ಮುಂದಕ್ಕೆ ಓಡಿಸಿದರೆ ಅವು ಒಗ್ಗಿನ ಬುಗ್ಗೆ ಯಾಗಿಬಿಡುತ್ತವೆ.

ಆ ರಥದಲ್ಲಿ ಈ ದೇವತೆಗಳು ಆಸೀನರಾಗಲು ಸಾಕಷ್ಟು ಸ್ಥಾನವಿಲ್ಲ. ಬಲಿ ಚಕ್ರವರ್ತಿಯಂತೆ ವಾಮನ ಕುಳಿತುಕೊಳ್ಳಲು ತನ್ನ ತಲೆಯನ್ನೇ ಒಡ್ಡುವಂಥ ಭಾವುಕ ಆ ಜೈತ್ರರಥದ ಸಾರಥಿ. ಇನ್ನು ಕೆಲವು ದೇವತೆಗಳಿಗೆ ಅವನ ಹೆಗಲೇರ ದಿದ್ದರೆ ನೆಮ್ಮದಿಯಿಲ್ಲ. ಇನ್ನು ರಗಳೆ ಮಾಡುವ ದೇವತೆಗಳನ್ನು ಅವನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ರಮಿಸಿದ್ದೂ ರಮಿಸಿದ್ದೇ! ಸಾಮಾನ್ಯವಾಗಿ ಟಾಂಗಾ ಚಾಲಕರು ಕೊಳಕು ಬಟ್ಟೆ ತೊಟ್ಟು ಸದಾ ಅಗ್ನಿಹೋತ್ರ ಮಾಡು ತ್ತಿರುತ್ತಾರೆ. ಆದರೆ ಆ ಸಾರಥಿ ಹಾಗಲ್ಲ. ನಿತ್ಯ ಶುಭ್ರವಸನಧಾರಿಯಾಗಿ, ಮಡಿಯುಟ್ಟು ದೇವಾಲಯಕ್ಕೆ ಹೋಗುವ ಭಕ್ತನಂತೆ ಬರುತ್ತಾನೆ.

"ಏನಯ್ಯಾ, ಬೀಡಿ, ಸಿಗರೇಟು ಸೇದುವುದಿ ಲ್ಲವೆ?" ಯಾರೋ ಕೇಳಿದರು.

"ಬೀಡಿ ಸಿಗರೇಟಿನಿಂದ ಬಾಯಿಗೆ ವಾಸನೆ ಬರುತ್ತದೆ. ಒಮ್ಮೆ ಯಾವುದೋ ಮಗು ನನ್ನ ವಾಸನೆಗೆ ಮೂಗು ಮುರಿಯಿತು. ಅಂದೇ ನಾನು ಬೀಡಿ, ಸಿಗರೇಟಿಗೆ ನಮಸ್ಕಾರ ಹಾಕಿ ಬಿಟ್ಟೆ." ಮೇಲಿರುವ ದೇವತೆಗಳನ್ನು ಕೆಳಕ್ಕೆ ಬರ ಮಾಡಿಕೊಳ್ಳಲು ಅಗ್ನಿಹೋತ್ರ ಮಾಡಬೇಕು. ಹಾಗೆಯೇ ನೆಲದ ಮೇಲಿರುವ ದೇವತೆಗಳನ್ನು ಓಡಿಸಬೇಕಾದರೆ ಅಗ್ನಿಹೋತ್ರ ಬೇಕು. ಅಗ್ನಿ ಹೋತ್ರಕ್ಕೆ ಬದಲಾಗಿ ಅವನು ನಿತ್ಯವೂ ತನ್ನ ರಥಯಾತ್ರೆಯ ಆರಂಭದಲ್ಲಿ ಗಂಧದ ಕಡ್ಡಿ ಹಚ್ಚುವುದುಂಟು! "ನಿನ್ನ ರಥದಲ್ಲಿ ಒಂದು ದೇವರ ಪಟವನ್ನು ಇಟ್ಟು ಬಿಡು" ಒಮ್ಮೆ ಯಾರೋ ಪಾಲಕರು ಹೇಳಿದರು.

"ಜೀವಂತ ದೇವತೆಗಳೇ ಇರುವಾಗ ನಿರ್ಜೀವ ದೇವತೆಗಳೇಕೆ ಸ್ವಾಮಿ?" ಅವನು ಕೇಳಿದ.

"ಹಾಗಾದರೆ ನೈವೇದ್ಯವೂ ಉಂಟು ಅನ್ನು?" ಅದಕ್ಕೆ ಸಾರಥಿ ನಿರುತ್ತರ. ಆದರೆ ವಸ್ತುಸ್ಥಿತಿ ಹಾಗಲ್ಲ. ಶಾಲೆಗೆ ಹೋಗುವಾಗ, ಬರುವಾಗ ಅವನು ಮಕ್ಕಳನ್ನು ಶಾಲೆಗೆ ಕರೆದುಕೊಂಡು ಹೋಗಿ ವಾಪಸ್ಸು ತಂದುಬಿಡುತ್ತಿದ್ದ. ಉಳಿದ ವೇಳೆಯಲ್ಲಿ ಬೇರೆಯವರನ್ನು ಕೂರಿಸಿಕೊಂಡು

## ಕುಪುತ್ರೋಜಾಯೇತ

1958 ರಲ್ಲಿ ಸಾವರ್ಕರರನ್ನು ನರಸಿಂಹ ಗಣೇಶ ಜೋಶಿ ಎಂಬುವವರು ಒಂದು ಪ್ರಶ್ನೆ ಕೇಳಿದರು. 'ಪಂಜಾಬಿನಲ್ಲಿ ಸಿಖ್ಖರು ತಮ್ಮನ್ನು ಹಿಂದುಗಳೆಂದು ಕರೆದುಕೊಳ್ಳಲು ತಯಾರಿಲ್ಲ. ಆದ್ದರಿಂದ ಈಗ "ಹಿಂದು"ವಿನ ಬಗ್ಗೆ ನಿಮ್ಮ ಶ್ಲೋಕವನ್ನು ಬದಲಿಸುವುದು ಅಗತ್ಯಲ್ಲವೇ?" ಸಾವರ್ಕರ್ ತಟ್ಟನೆ ಮನನೊಂದು ನುಡಿದರು- 'ಇಲ್ಲ' ಬದಲಿಸಲು ಸಾಧ್ಯವಿಲ್ಲ. ಐತಿಹಾಸಿಕ ಹಾಗೂ ವಸ್ತುನಿಷ್ಠ ವಿವರಣೆ ನಾನು ಕೊಟ್ಟಿದ್ದೇನೆ. "ಕುಪುತ್ರೋಜಾಯೇತ ಕ್ವಚಿದವೆ ಕುಮಾತಾನ ಭವತಿ" ಹಿಂದೂ ಸಮಾಜ ತಮ್ಮ ತಾಯಿ ಅಲ್ಲವೆಂದು ಸಿಖ್ಖರು ಬೇಕಾದರೆ ಹೇಳಿಕೊಳ್ಳಲಿ; ಆದರೆ ಹಿಂದೂ ಸಮಾಜವು ಅವರನ್ನು "ಇವರು ನನ್ನ ಮಕ್ಕಳಲ್ಲ" ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ಅದು ತನ್ನ ಮಗು ಎಂಬ ವಿವೇಚನೆ ತಾಯಿಗಿದೆ.

(ಸಂಗ್ರಹ)

–ಎಚ್.ಆರ್. ಚಂದ್ರಶೇಖರ್

ಗಾಡಿ ಹೊಡೆಯುತ್ತಿದ್ದ. ಅವನು ಖುಷಿಯ ಮನುಷ್ಯ. ಏನಾದರೂ ಹೆಚ್ಚು ಸಂಪಾದನೆಯಾದರೆ ತಾನೂ ಕುಡಿದು ತನ್ನ ಕುದುರೆಗೂ ಕುಡಿಸಿಬಿಡುತ್ತಿದ್ದ. ಅಂದು ತಾನೂ 'ದೇವತೆ'ಯಾಗಿ ತನ್ನ ಕುದುರೆಯನ್ನು ಕ್ಷಣಕಾಲ 'ದೇವಲೋಕ'ಕ್ಕೆ ಕಳಿಸುತ್ತಿದ್ದ. ಹೌದು, ದೇವತೆಯಾಗಿ ದೇವತೆಯನ್ನು ಪೂಜಿಸಬೇಕಂತೆ! "ದೇವೋ ಭೂತ್ವಾದೇವಂ ಯಜೇತ್!" ಉಳಿದ ಹಣದಿಂದ ಮಾರನೆಯ ದಿನ ಈ ಪುಟ್ಟ ದೇವರುಗಳಿಗೆ ಪೆಪ್ಪರಮೆಂಟ್ ಇಲ್ಲವೆ ಚಾಕಲೇಟ್ ನೈವೇದ್ಯ!

ಆ ಮರಿದೇವತೆಗಳದೂ ಅದೇ ಸ್ವಭಾವ! ಯಾರದೋ ಹುಟ್ಟು ಹಬ್ಬ. ಇಡೀ ತರಗತಿಗೆ ಸಿಹಿ ಹಂಚುವ ಮರಿ ದೇವತೆ ಸಾರಥಿಯನ್ನು ಹೇಗೆ ತಾನೆ ಮರೆತಾನು?

ಒಮ್ಮೆ ನಾನು ಆ ಸಾರಥಿಯನ್ನು, "ಏನಯ್ಯಾ, ಸಾಬು, ನಿನ್ನ ಮಕ್ಕಳೂ ಶಾಲೆಗೆ ಹೋಗುತ್ತವೆಯೋ?" ಎಂದು ಕೇಳಿದೆ. ನನ್ನ ಮಾತನ್ನು ಕೇಳಿ ಅವನ ಮುಖ ಸಪ್ಪಗಾಯಿತು. "ಆ ಭಾಗ್ಯ ನನಗಿಲ್ಲ ಬುದ್ಧಿ. ಒಂದು ಗಂಡು ಮಗುವಾಗಿತ್ತು. ಆದರೆ ದೇವರು ಆ ಕೈಯಿಂದ ಕೊಟ್ಟು ಈ ಕೈಯಿಂದ ಕಿತ್ತುಕೊಂಡ. ಅದು ಹಳೆ ಕಥೆ ಬಿಡಿ. ಆದರೆ ನನ್ನ ಗಾಡಿಯಲ್ಲಿ ಬರುವ ಮಕ್ಕಳೆಲ್ಲ ನನ್ನ ಮಕ್ಕಳೇ! ಮಕ್ಕಳಿಗೆ ರಜಾ ಬಂದಾಗ ನನ್ನ ನೋವು ಹೇಳತೀರದು. ನಾನು ಆಗ ಈ ಊರಿನಲ್ಲೇ ಇರುವುದಿಲ್ಲ. ಎಲ್ಲಾದರೂ ಹೊರಟುಬಿಡುತ್ತೇನೆ. ಆದರೆ ನೋಡಿ, ನನ್ನ ಹೆಂಡತಿಗೆ ಈ ಭಾಗ್ಯವೂ ಇಲ್ಲ ಎಂದು ಹೇಳುವಾಗ ಅವನು ಕಣ್ಣುಗಳು ತೇವಗೊಂಡಿದ್ದವು.

ನಮ್ಮ ಮಾತಿಗೆ ಕಡಿವಾಣ ಹಾಕಿತು ಪಕ್ಕದ ಮನೆಯ ಮಗುವಿನ ಕೂಗು. ಕೂಡಲೇ ಅವನು ವಿದಾಯ ಹೇಳಿ 'ರಥ' ಹತ್ತಿದ್ದ.

ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಆದ್ದರಿಂದ ನನಗೆ ರಥಾರೋಹಣ ಯೋಗವಿರಲಿಲ್ಲ. ನನ್ನ ಮಕ್ಕಳಿಗೂ ಆ ಯೋಗವಿಲ್ಲ ಎಂದು ಕಾಣುತ್ತದೆ. ಅದೇನು ಸಂಯೋಗವೋ ಕಾಣೆ, ನಮ್ಮ ಮನೆಯ ಎದುರಿಗೇ ಅವುಗಳ ಶಾಲೆ. ಆ ಶಾಲೆ ದಾಟಿದ ಮೇಲೆ ಅವರು ಬಸ್ಸು 'ಗ್ರೀಷ್ಮರಥ' (ಕಬ್ಬಿಣದ ತಗಡು ತೊಟ್ಟಿದ್ದರಿಂದ ಗ್ರೀಷ್ಮರಥವೇ ಸರಿ) ಹತ್ತು ತ್ತಿದ್ದರು.

ಆದರೇನು! ಈ ರಥದ ಮೋಹ ನನ್ನಲ್ಲಿ ಹೋಗದು. ನಾವು ಚಿಕ್ಕಂದಿನಲ್ಲಿ ರಥದ ಬರವಿಗಾಗಿ ಕಾಯುತ್ತ ಅದು ಬಂದಾಗ ದೇವರಿಗೆ ದವನ ಎಸೆಯುತ್ತಿದ್ದೆವು. ನಿತ್ಯವೂ ನಮ್ಮ ಮನೆಯ ಮುಂದೆ ಬರುವ ಈ ರಥಕ್ಕೆ ಹೂವು ಎಸೆಯಲು ನನ್ನ ಎಳೆಯ ಮನ ಕಾತರಿಸುತ್ತದೆ. ಅದು ಬರುವ ವೇಳೆಗೆ ಊರಿನಲ್ಲಿದ್ದರೆ ಸಾಧ್ಯವಾದಷ್ಟು ಬಿಡುವು ಮಾಡಿಕೊಂಡು ಹೊರಗೆ ಬಂದು ನಿಲ್ಲುತ್ತೇನೆ. ಆ ಜೈತ್ರರಥ ಬರುವ ಹೊತ್ತಿಗೆ ನಾನು ಮಿಂದು ಮಡಿಯುಟ್ಟಿರುತ್ತೇನೆ. ಅದು ಬಂದ ಕೂಡಲೇ ನನಗೆ ಕ್ಷಣವಾದರೂ ಸರಿ, ಭವನಿಮಜ್ಜನವಾಗುತ್ತದೆ. ನಾನು ಈ ಲೋಕವನ್ನು ಮರೆಯುತ್ತೇನೆ. ಪಕ್ಕದ ಮನೆಯ ಪುಟ್ಟ ದೇವತೆ 'ಮಾವ, ಟಾಟಾ' ಎಂದಾಗಲೇ ನನಗೆ ಈ ಲೋಕದ ಅರಿವು. ಅಯತ್ನಪೂರ್ವಕವಾಗಿ ನನ್ನ ಬಾಯಿಂದಲೂ ಹೊರಡುತ್ತದೆ 'ಟಾಟಾ'. ಅನಂತರ ಸಾಗುತ್ತದೆ ನಮ್ಮ ನಿತ್ಯ ಯಾತ್ರೆ. ●

# ಹೈದರಾಬಾದಿನ ಖ್ಯಾತಿ

ಹೈದರಾಬಾದ್ ಎಂದೊಡನೆ ಸಾಮಾನ್ಯ ಜನರಿಗೆ ನೆನಪಾಗುವುದು ಚಾರ್ಮಿನಾರ್. ಗೋವಳಕೊಂಡ ಕೋಟೆ ಅಥವಾ ಸಾಲಾರ್ ಜಂಗ್ ಮೂಜಿಯಂ. ಆದರೆ ಶ್ರೀಮಂತರಿಗೆ ಹೈದರಾಬಾದು ತನ್ನ ಖ್ಯಾತ ಮುತ್ತುಗಳನ್ನು ನೆನಪಿಸುತ್ತದೆ. ಚಾರ್ಮಿನಾರ್‌ಗೆ ಹತ್ತಿರದಲ್ಲೇ ಕುಶಲ ಕರ್ಮಿಗಳು ಈ ಹೊಳೆಯುವ ವಸ್ತುಗಳ ತಯಾರಿಕೆಯಲ್ಲಿ ಮಗ್ನರಾಗಿರುತ್ತಾರೆ.

ಹೈದರಾಬಾದ್ ಮುತ್ತುಗಳು ಜಗತ್ತಿನಾದ್ಯಂತ ಪ್ರಸಿದ್ಧವಾಗಿದ್ದರೂ ಈ ನಗರದಲ್ಲಿ ಕಚ್ಚಾ ಮುತ್ತುಗಳು ಕಾಣಿಸಿಗುವುದಿಲ್ಲ. ಅವುಗಳನ್ನು ಚೀನಾ ಮತ್ತು ಜಪಾನದಿಂದ ಆಮದು ಮಾಡಿಕೊಳ್ಳಲಾಗುತ್ತದೆ. ತಲೆ ತಲಾಂತರಗಳಿಂದ ಮುತ್ತು ತಯಾರಿಕೆಯಲ್ಲಿ ತೊಡಗಿರುವ ಕುಶಲಕರ್ಮಿಗಳಿಗೆ ಹೆಚ್ಚು ಸಂಬಳ ಕೊಡಬೇಕಾದ ಅಗತ್ಯವಿಲ್ಲವಾದ್ದರಿಂದ ಇಲ್ಲಿ ಮುತ್ತು ತಯಾರಿಕೆ ಕೆಲಸ ಬಹಳ ಅಗ್ಗ.

ರಾಷ್ಟ್ರಪತಿಗಳಂಥವರು ಸಹ ಮುತ್ತುಗಳ ಖರೀದಿಗೆಂದು ಹೈದರಾಬಾದಿಗೆ ಭೇಟ್ಟಿಕೊಡುತ್ತಾರೆ. ಹಿಂದಿನ ರಾಷ್ಟ್ರಪತಿಗಳಾದ ವಿ.ವಿ. ಗಿರಿ, ಫಖ್ರುದ್ದೀನ್ ಆಲಿ ಮಹ್ಮದ್ ಮತ್ತು ಜೈಲ್‌ಸಿಂಗ್ ತಮ್ಮ ಕುಟುಂಬದೊಂದಿಗೆ ಮುತ್ತಿನ ಆಭರಣಗಳ ಖರೀದಿಗೆ ಬಂದಿದ್ದನ್ನು ಇಲ್ಲಿನ ಅಂಗಡಿಕಾರರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹಿಂದಿ ಚಲನಚಿತ್ರ ನಟಿಯರಾದ ಹೇಮಾಮಾಲಿನಿ ಮತ್ತು ಸ್ಮಿತಾ ಪಾಟೀಲ ಆಭರಣ ಕೊಳ್ಳಲು ಬಂದಾಗ ಜನಜಂಗುಳಿಯನ್ನು ನಿಯಂತ್ರಿಸಲು ಪೊಲೀಸ್ ಬಂದೋ ಬಸ್ತ್ ಮಾಡಿದ್ದನ್ನು ಚಾರ್ಮಿನಾರ್ ಬಳಿಯ ವ್ಯಾಪಾರಿಯೊಬ್ಬ ಸ್ಮರಿಸಿಕೊಳ್ಳುತ್ತಾರೆ.

ಖ್ಯಾತ ವ್ಯಾಪಾರಿಯಾಗಿದ್ದ ತನ್ನ ಅಜ್ಜ ಕೇದಾರನಾಥಜಿ ಮೋತಿಲಾಲಾ ಸುಮಾರು 75 ವರ್ಷಗಳ ಹಿಂದೆ ಮುತ್ತಿನ ಆಭರಣಗಳ ಅಂಗಡಿಯನ್ನು ಆರಂಭಿಸಿದ್ದನ್ನು ಅಜಯ ಭಾಯಿ ನೆನಪಿಸಿಕೊಳ್ಳುತ್ತಾನೆ. ಹೈದರಾಬಾದಿನ ಹಿಂದಿನ ದೊರೆಗಳು ಮುತ್ತಿನ ವ್ಯಾಪಾರಕ್ಕೆ ಬಹಳ ಪ್ರೋತ್ಸಾಹ ನೀಡಿದ್ದರೆಂದು ಅವನು ಹೇಳುತ್ತಾನೆ.

ಕಚ್ಚಾ ಮುತ್ತುಗಳನ್ನು ಕುಶಲಕರ್ಮಿಗಳು ಒಡೆದು, ಶುದ್ಧಗೊಳಿಸಿ ಗಾತ್ರ, ಆಕಾರ ಹಾಗೂ ಹೊಳಪಿನ ಆಧಾರದ ಮೇಲೆ ವಿಂಗಡಿಸುತ್ತಾರೆ. ಆಕಾರದ ಮೇಲೆ ವಿಂಗಡಿಸಲಾಗುವ ನಾಲ್ಕು ಮುಖ್ಯ ವಿಧಾನಗಳೆಂದರೆ ಅಕ್ಕಿಯ ಆಕಾರ, ಬೀಜದ ಆಕಾರ, ದುಂಡನೆಯ ಆಕಾರ, ಮತ್ತು ಹೂವಿನಾಕಾರ.

ಮುತ್ತುಗಳಲ್ಲಿ ಮೂರು ಪ್ರಕಾರಗಳಿವೆ. ನೈಸರ್ಗಿಕವಾದದ್ದು, ಸಾಗುವಳಿ ಮಾಡಿದ್ದು ಮತ್ತು ಅರೆ ಸಾಗುವಳಿ ಮಾಡಿದ್ದು ನೈಸರ್ಗಿಕವಾದವುಗಳು ಸಿಂಪಿಹುಳಗಳ ದೇಹದೊಳಗೆ ದೊರೆಯುತ್ತವೆ. ಸಿಂಪಿಹುಳುವಿನ ದೇಹದೊಳಗೆ ಹೊರಗಿನ ಪದಾರ್ಥ ಸೇರಿಸಿ ತಯಾರಿಸಿದ ಮುತ್ತು ಸಾಗುವಳಿ ಮಾಡಿದ್ದು ಅರೆ ಸಾಗುವಳಿ ಮಾಡಿದ ಮುತ್ತುಗಳೆಂದರೆ ಪ್ಲಾಸ್ಟಿಕ್ ಮತ್ತು ಗಾಜಿನಿಂದ ತಯಾರಾದವುಗಳು.

ನೈಸರ್ಗಿಕ ಮುತ್ತುಗಳು ಬಹಳ ಜನಪ್ರಿಯ, ನಂತರದ ಸ್ಥಾನ ಸಾಗುವಳಿ ಮಾಡಿದ ಮುತ್ತುಗಳಿಗೆ ಗುಣ ಮಟ್ಟವನ್ನವಲಂಬಿಸಿ ಈ ಎರಡೂ ಬಗೆಯ ಮುತ್ತುಗಳು ಒಂದು ಗ್ರಾಂಗೆ ಹತ್ತು ರೂಪಾಯಿಂದ ಹಿಡಿದು 250 ರೂಪಾಯಿಗಳಿಗಿಂತ ಹೆಚ್ಚು ಬೆಲೆಗೆ ಮಾರಾಟವಾಗುತ್ತವೆ. ನೈಸರ್ಗಿಕ ಮುತ್ತುಗಳನ್ನೊಳಗೊಂಡ ನೆಕ್ಲೇಸನ್ ಬೆಲೆ 300 ರಿಂದ ಹತ್ತು ಸಾವಿರ ರೂಪಾಯಿಗಳವರೆಗೆ, ಅದೇ ಕಂಠಾಭರಣ ಅರೆ ಸಾಗುವಳಿ ಮಾಡಿದ, ಮುತ್ತುಗಳಿಂದ ಕೂಡಿದ್ದಾದರೆ ನೂರು ರೂಪಾಯಿಗಿಂತ ಕಡಿಮೆ ಬೆಲೆಗೆ ದೊರೆಯುತ್ತದೆ.

ಹೈದರಾಬಾದ-ಸಿಕಂದರಾಬಾದ ಮುತ್ತುಗಳ ವ್ಯಾಪಾರಿಗಳ ಸಂಘಕ್ಕೆ 10 ಜನ ಸದಸ್ಯರು ಬಹುತೇಕ ಅಂಗಡಿಗಳು ಚಾರ್ಮಿನಾರ್ ಬಳಿಯಿದ್ದು ಹೆಚ್ಚಾಗಿ ಮಾರವಾಡಿಗಳ ನಿಯಂತ್ರಣದಲ್ಲಿವೆ. ●

# ಹಸಿವು

ಯುವಕ, ಒಬ್ಬರನ್ನೊಬ್ಬರು ದಿಟ್ಟಿಸುತ್ತಾ ಮಾತನಾಡದೆ ಕುಳಿತಿದ್ದಾರೆ. ತುಂಬಿದ ಕೆನ್ನೆಗಳು, ಎದ್ದುತೋರುವ ವಕ್ಷಸ್ಥಲ, ಕಪ್ಪು ಕಣ್ಣುಗಳ ಆ ಹೆಂಗಸಿನ ವಯಸ್ಸು ಸುಮಾರು ಇಪ್ಪತ್ತೈದಿರಬಹುದು. ಗಟ್ಟಿಮುಟ್ಟಾದ ಅವಳ



ಮಾರ್ಸಲ್ಸ್‌ಗೆ ಹೋಗುವ ರೈಲು ಜಿನೋವಾವನ್ನು ಆಗಷ್ಟೇ ಬಿಟ್ಟು ಬೆಟ್ಟ ಗುಡ್ಡಗಳನ್ನು ದಾಟುತ್ತಾ, ಪುಟ್ಟ ಪುಟ್ಟ ಸೇತುವೆಗಳನ್ನು ಹಾಯುತ್ತಾ, ಕಡು ಕಪ್ಪು ಟನಲ್‌ಗಳನ್ನು ಹಾವಿನಂತೆ ಬಳಸುತ್ತಾ ಮುನ್ನುಗ್ಗುತ್ತಿದೆ.

ಆ ರೈಲಿನ ಕೊನೆಯ ಬೋಗಿಯಲ್ಲಿ ಒಬ್ಬ ಸ್ಥೂಲಕಾಯದ ಹೆಂಗಸು ಮತ್ತು ಒಬ್ಬ

ಅಂಗರಚನೆಯನ್ನು ನೋಡಿದರೆ ಆಕೆ ರೈತಾಪಿ ಹೆಣ್ಣೆಂಬುದು ಖಚಿತವಾಗುತ್ತದೆ. ಕಿಟಕಿಯ ಬಳಿ ಕುಳಿತು ಓಡುವ ದೃಶ್ಯಗಳನ್ನು ನೋಡುತ್ತಿದ್ದ ಆಕೆ ತನ್ನ ಮುಂದಿನ ಬುಟ್ಟಿಗಳನ್ನು ಸೀಟಿನಡಿಗೆ ತಳ್ಳಿ ಪುಟ್ಟ ಬುಟ್ಟಿಯೊಂದನ್ನು ಮಾತ್ರ ತನ್ನ ತೊಡೆಯ ಮೇಲಿಟ್ಟುಕೊಂಡು ಪುನಃ ಕಿಟಕಿಯಲ್ಲಿ ಮುಖಹಾಕಿ ಕುಳಿತುಕೊಂಡಳು.

ಮೂಲ: ಮೊಪಾಸಾ
ಕನ್ನಡಕ್ಕೆ: ಮುರಳೀಧರ ಖಜಾನೆ

ಎದುರಿಗೆ ಕುಳಿತಿರುವ ಯುವಕನದು ಸೊರಗಿದ ಮುಖ, ನಿಸ್ತೇಜವಾದ ಕಣ್ಣುಗಳು, ಗುಳಿಬಿದ್ದ ಗಲ್ಲ, ಬಿಸಿಲಲ್ಲಿ ಅಲೆದಲೆದು ಕಪ್ಪಾದ ಮೈಬಣ್ಣ. ದೃಷ್ಟಿಯನ್ನು ಶೂನ್ಯದಲ್ಲಿ ನೆಟ್ಟಿದ್ದ ಆತನ ಪಕ್ಕದಲ್ಲಿ, ಆತನ ಸರ್ವಸ್ವವಾದ ಒಂದು ಅಂಗಿ ಹಾಗೂ ಪ್ಯಾಂಟನ್ನು ಕರ್ಚೀಫ್‌ನಲ್ಲಿ ಕಟ್ಟಿದ ಪುಟ್ಟಗಂಟು. ಆತನ ಗುದ್ದಲಿ ಪಿಕಾಸಿಗಳು ಸೀಟಿನ ಕೆಳಗೆ ಮಲಗಿ ನಿದ್ರಿಸುತ್ತಿವೆ. "ಬಹುಶಃ ಈ ಯುವಕ ಕೆಲಸವನ್ನು ಹುಡುಕಿಕೊಂಡು ಫ್ರಾನ್ಸ್‌ಗೆ ಹೊರಟಿರ ಬೇಕು" ಎಂದು ಎದುರು ಕುಳಿತಾಕೆಯ ಊಹೆ.

ಮೇ ತಿಂಗಳ ಕೊನೆಯ ದಿನಗಳಿವು. ಸೂರ್ಯ ಕೆಂಡದುಂಡೆಯಂತೆ ಕಾದು ಉರಿಯುತ್ತಿದ್ದಾನೆ. ಮೇಲಿಂದ ಬೆಂಕಿಯ ಮಳೆ ಸುರಿಯುತ್ತಿದೆಯೇನೋ ಎನ್ನಿಸುತ್ತಿದೆ. ಕರಾವಳಿತೀರದ ಉಸುಕು ರೈಲನ್ನು ಬೆನ್ನಟ್ಟಿ ಬರುತ್ತಿದೆ. ದಾರಿಯಲ್ಲಿ ಅಲ್ಲಲ್ಲಿ ಹೂ ಬಿಟ್ಟ ಲಿಂಬೆ, ಕಿತ್ತಳೆ ಮರಗಳಿಂದ ಪರಿಮಳ ಘಮ್ಮನೆ ಬೋಗಿಯೊಳಕ್ಕೆ ನುಗ್ಗುದೆ. ರೈಲು ಪ್ರತಿಯೊಂದು ನಿಲ್ದಾಣದಲ್ಲೂ ನಿಲ್ಲುತ್ತಾ ಸುಂದರ ಉದ್ಯಾನವನದಲ್ಲಿ ವಿಹರಿಸುವಂತೆ ನಿಧಾನವಾಗಿ ಸರಿದು ಹೋಗುತ್ತಿದೆ. ಜಗ್ ಜಗ್, ಸದ್ದು ಮಾತ್ರ ನಿರಂತರವಾಗಿ ಕೇಳಿಬರುತ್ತಾ, ಆಗಾಗ ಎಲ್ಲರನ್ನು ಎಚ್ಚರಿಸುವಂತೆ ಕೋ... ಎನ್ನುತ್ತಿದೆ.

ಆ ಹೆಂಗಸು ಆಗಾಗ್ಗ ಕಣ್ಣುಮುಚ್ಚುತ್ತಾ, ತೆರೆಯುತ್ತಾ ಅರೆನಿದ್ರೆಯಲ್ಲಿದ್ದಾಳೆ. ತನ್ನ ತೊಡೆಯ ಮೇಲಿನ ಬುಟ್ಟಿ ಜಾರಿದಾಗ ಗಾಭರಿಯಿಂದ ಕಣ್ತೆರೆದು ಬುಟ್ಟಿಯನ್ನು ಪುನಃ ತೊಡೆಗೇರಿಸಿಕೊಂಡು ನಿದ್ರಿಸಲು ಯತ್ನಿಸುತ್ತಾಳೆ. ರೈಲಿನ ಸೂರು ಕಾದ ಹೆಂಚಿನಂತೆ ಕೆಂಪಾಗಿ ಬಿಸಿಲಿನ ಧಗೆಗೆ ಬೆವರು ಆಕೆಯ ಹಣೆಯ ಮೇಲೆ ಮುತ್ತಿನ ಮಣಿಗಳಂತೆ ಸಾಲುಕಟ್ಟಿವೆ. ಆಯಾಸದಿಂದ ಕಷ್ಟಪಟ್ಟು ಉಸಿರಾಡುತ್ತಿದ್ದಾಳೆ.

ಆ ಯುವಕ ಮಾತ್ರ ತಲೆಬಗ್ಗಿಸಿ ಗಾಢವಾಗಿ ನಿದ್ರಿಸುತ್ತಿದ್ದಾನೆ.

ಸಣ್ಣ ಸ್ಟೇಷನ್‌ವೊಂದು ಬಂದಾಗ ಆ ಹೆಂಗಸಿಗೆ ಫಕ್ಕನೆ ಎಚ್ಚರವಾಯಿತು. ನಂತರ ತನ್ನ ಬುಟ್ಟಿಯನ್ನು ಹೊರಗೆಳೆದು ಬ್ರೆಡ್, ಬೇಯಿಸಿದ ಮೊಟ್ಟೆ, ವೈನ್‌ತುಂಬಿದ ಫ್ಲಾಸ್ಕ್' ಕಳಿತ ಕೆಂಪು ಪ್ಲಮ್ಸ್‌ನ್ನು ಪಕ್ಕದಲ್ಲಿ ಜೋಡಿಸಿಟ್ಟುಕೊಂಡಳು.

ಈ ವೇಳೆಗೆ ಆ ಯುವಕನಿಗೂ ಎಚ್ಚರವಾಯಿತು. ಕಣ್ಣುಬಿಟ್ಟಾಗ ಎದುರಿನ ಹೆಂಗಸು ಗಬಗನೆ ತಿನ್ನುವುದರಲ್ಲಿ ಮಗ್ನಳಾಗಿದ್ದಳು. ಬ್ರೆಡ್, ಮೊಟ್ಟೆ, ಪ್ಲಮ್ಸ್ ಗುಳುಂಕರಿಸುವುದನ್ನು ಆತ ನೋಡುತ್ತಲೇ ಇದ್ದ. ಉಸಿರಾಡಲು ಮಾತ್ರ ಆಕೆ ಮಧ್ಯೆ ಮಧ್ಯೆ ತಿನ್ನುವುದನ್ನು ಸ್ವಲ್ಪ ಹೊತ್ತು ನಿಲ್ಲಿಸುತ್ತಿದ್ದಳು. ಗಂಟಲೊತ್ತಿದಂತಾದಾಗ ಸ್ವಲ್ಪ ವೈನ್ ಕುಡಿಯುತ್ತಿದ್ದಳು. ಆಕೆಯ ಪಕ್ಕದಲ್ಲಿದ್ದ ಬ್ರೆಡ್, ಮೊಟ್ಟೆ, ಪ್ಲಮ್ಸ್‌ಗಳೆಲ್ಲಾ ನಿಧಾನವಾಗಿ ಕರಗಿದವು.

ಆಕೆ ತಿಂದು ಮುಗಿಸಿದ ನಂತರ ಈತ ತನ್ನ ಕೈಗಳನ್ನು ಹೊಟ್ಟೆಯ ಮೇಲಿರಿಸಿಕೊಂಡು ಮಲಗಲು ಯತ್ನಿಸಿದಾಗ ತುಟಿಗಳು ಒಂದನ್ನೊಂದು ಅಪ್ಪಿ ಕುಳಿತವು. ರೆಪ್ಪೆಗಳು ತಾವಾಗಿಯೇ ಮುಚ್ಚಿಕೊಂಡವು.

ಆಕೆ ಈಗ ವಿರಾಮವಾಗಿ ಮೈ ಕೈ ಚಾಚಿ ಕುಳಿತಳು. ಸದ್ದಾದಾಗ ಈತ ನಿಧಾನವಾಗಿ ಕಣ್ಣು ತೆರೆದು ಗಮನಿಸಿದ. ಆಕೆ ಸಾವಧಾನವಾಗಿ ತನ್ನ ಕುಬುಸದ ಒಂದೆರಡು ಗುಂಡಿ ಬಿಚ್ಚಿದಳು. ಅವಳ ಬೃಹದಾಕಾರದ ವಕ್ಷಸ್ಥಲಗಳು ಗಾಳಿಗೆ ತೆರೆಧುಕೊಂಡವು. ಸ್ವಲ್ಪ ಆಯಾಸ ಕಡಿಮೆಯಾದಂತಾದಾಗ, ಆಕೆ ಇಟಾಲಿಯನ್‌ನಲ್ಲಿ "ಉಸಿರಾಡಲೂ ಆಗದಷ್ಟು ಧಗೆ" ಎಂದಳು. ಆತ ಅದೇ ಭಾಷೆಯಲ್ಲಿ, ಅದೇ ಧ್ವನಿಯಲ್ಲಿ "ಪ್ರವಾಸಕ್ಕೆ ಹೇಳಿಸಿದ ಹವಾಮಾನವಲ್ಲ ಇದು" ಎಂದ.

ನೀನ್ನೆಲ್ಲಿಂದ ಬರುತ್ತೀದ್ದಿಯ? ಪಿಡಾಮಿಂಟ್ ನಿಂದಲೇ? ಆಕೆಯ ಪ್ರಶ್ನೆ.

"ನಾನು ಆಷ್ಟ್ರಿಯಾದಿಂದ" ಎಂದ ಆತ.

"ನಾನು ಕ್ಯಾಸೆಲ್‌ನಿಂದ" ಎಂದಳು ಆಕೆ.

ಅವರಿಬ್ಬರೂ ನೆರೆಹೊರೆಯವರು. ತಮ್ಮೂರು, ತಮ್ಮ ಮನೆ, ನಾಗರಿಕ ಸೌಲಭ್ಯಗಳು, ಬೆಳೆ, ಕೂಲಿ ದರ ಹೀಗೆ ತಮ್ಮ ಬದುಕಿನ

ಹಲವು ಸಂಗತಿಗಳನ್ನು ಕುರಿತು ಮಾತನಾಡ ತೊಡಗಿದರು. ಅವರಿಬ್ಬರ ಅಭಿರುಚಿ ಹಾಗೂ ನಂಬಿಕೆಗಳಲ್ಲಿ ಹೊಂದಾಣಿಕೆ ಇತ್ತು. ತಮಗೆ ಗುರುತಿದ್ದವರ ಪರಿಚಯದವರ ಹೆಸರುಗಳನ್ನು ಹೇಳುತ್ತಿದ್ದಂತೆ, ಗುರುತಿಸಿಕೊಳ್ಳುತ್ತಿದ್ದಂತೆ ಅವರು ಹೆಚ್ಚು ಆತ್ಮೀಯರಾಗುತ್ತಿದ್ದರು. ಕೊನೆಗೆ ಅವರ ಮಾತು ಸ್ವಂತ ಸಂಗತಿಗಳತ್ತ ತಿರುಗಿತು. ಆಕೆ ವಿವಾಹಿತೆ, ಮೂರು ಮಕ್ಕಳ ತಾಯಿ, ಮಕ್ಕಳನ್ನು ತನ್ನ ತಂಗಿಯ ಬಳಿ ಬಿಟ್ಟಿರುವ ಈ ಹೆಂಗಸಿಗೆ ಮಾರ್ಸೆಲ್ಸ್‌ನಲ್ಲಿ ದಾದಿಯಕೆಲಸ.

ಈತ ಕೆಲಸ ಹುಡುಕಿಕೊಂಡು ಮಾರ್ಸೆಲ್ಸ್‌ಗೆ ಹೊರಟಿದ್ದ.

"ಮಾರ್ಸೆಲ್ಸ್‌ನಲ್ಲಿ ಸಾಕಷ್ಟು ಕಟ್ಟಡಗಳನ್ನು ಕಟ್ಟುತ್ತಿರುವುದರಿಂದ ಖಂಡಿತಾ ನಿನಗೆ ಕೆಲಸ ಸಿಕ್ಕುತ್ತದೆ" ಆಕೆಯ ಆಶ್ವಾಸನೆ.

ಮತ್ತೆ ಅವರಿಬ್ಬರ ನಡುವೆ ಮೌನ.

ಧಗೆ ಮತ್ತಷ್ಟು ಜಾಸ್ತಿಯಾಯಿತು. ಧೂಳಿನ ಮೋಡಗಳು ರೈಲನ್ನು ಬೆನ್ನಟ್ಟುತ್ತಿದ್ದವು. ಬಿಸಿ ಗಾಳಿ ಕಿಟಕಿಯಿಂದೊಳಗೆ ನುಗ್ಗುತ್ತಿದ್ದವು. ಇಬ್ಬರೂ ನಿದ್ರೆಯ ಆಳಕ್ಕಿಳಿದರು.

ಮತ್ತೆ ಈ ಇಬ್ಬರು ಪ್ರಯಾಣಿಕರಿಗೆ ಎಚ್ಚರವಾದಾಗ ಸೂರ್ಯ ಪಶ್ಚಿಮದಲ್ಲಿ ಮರೆಯಾಗಲು ಸನ್ನಾಹ ನಡೆಸುತ್ತಿದ್ದ. ಗಾಳಿ ಹಗುರವಾಗಿತ್ತು. ಆಕೆ ಮಾತ್ರ ಉಸಿರಾಡಲೂ ಆಗದೆ ಕಷ್ಟಪಡುತ್ತಿದ್ದಳು. ಈಗ ಆಕೆಯ ಕುಬುಸ ಪೂರ್ತಿ ಬಿಚ್ಚಿದೆ, ಕಣ್ಣುಗಳು ಸೋತು ಹೋಗಿವೆ.

"ನಿನ್ನೆಯಿಂದ ನಾನು ಹಾಲೂಡಿಸಿಲ್ಲ. ನನಗೆ ವಿಪರೀತ ಆಯಾಸ. ಈ ಎದೆನೋವು ತಡೆಯಲು ನನ್ನಿಂದ ಸಾಧ್ಯವಿಲ್ಲ" ಎಂದಳು ಆಕೆ.

ಆತ ಉತ್ತರಿಸಲಿಲ್ಲ. ಅಥವ ಏನು ಉತ್ತರ ಕೊಡಬೇಕೆಂದು ಅವನಿಗೆ ತೋಚಲಿಲ್ಲ.

"ಬೇರೆ ಹೆಂಗಸಿನೆದೆಯಲ್ಲಿ ನನ್ನೆದೆಯಲ್ಲಿರುವಷ್ಟು ಹಾಲಿದ್ದಿದ್ದರೆ ಮಗುವಿಗೆ ಅವಳು ದಿನಕ್ಕೆ ಮೂರು ಸಾರಿ ಹಾಲೂಡಿಸುತ್ತಿದ್ದಳು. ಆಕೆಗೆ ನನ್ನಂಥೆಯೇ ಕಷ್ಟವಾಗುತ್ತಿತ್ತು. ಈಗ ನನ್ನೆದೆಯ ಮೇಲೆ ನೂರು ಕೆ.ಜಿ. ಭಾರ ಹೇರಿದಂತಿದೆ. ಆ ಭಾರದಿಂದ ನನಗೆ ಉಸಿರಾಡಲೇ ಆಗುತ್ತಿಲ್ಲ. ಉಸಿರು ಸಿಕ್ಕಿಕೊಂಡಂತಾಗಿದೆ. ನಾನೀಗ ಹಾಲೂಡಿಸದೇ ಇರಲು ಸಾಧ್ಯವೇ ಇಲ್ಲ" ಎಂದಳು.

ಹೌದು! ನಿನಗೆ ಬಹಳ ಕಷ್ಟವಾಗಿರಬೇಕು, ಎಂದ ಆತ.

"ನಾನೀಗ ಬಲವಂತವಾಗಿ ಹಾಲು ತೆಗೆಯದೆ ಬೇರೆ ದಾರಿಯೇ ಇಲ್ಲ. ಮಾರ್ಸೆಲ್ಸ್‌ನಲ್ಲಿದ್ದಾಗ ಹೀಗಾದರೆ ನಾನು ಬಲವಂತವಾಗಿ ಹಾಲು ತೆಗೆಯುತ್ತಿದ್ದೆ. ತೆಗೆದ ಹಾಲು ಕಾರಂಜಿಯಂತೆ ಚಿಮ್ಮುವುದನ್ನು ನೋಡಲು ಜನ ಸೇರುತ್ತಿದ್ದರು. ನೀನು ನಂಬಿದರೆ ನಂಬು ಬಿಟ್ಟರೆ ಬಿಡು, ಜನ ಆಶ್ಚರ್ಯದಿಂದ ಇದನ್ನು ನೋಡುತ್ತಿದ್ದಾಗ ನಾನು ಹೆಮ್ಮೆಯಿಂದ ಉಬ್ಬಿಹೋಗುತ್ತಿದ್ದೆ ಎಂದಳಾಕೆ.

ನಿಜಕ್ಕೂ! ಆತ ಆಶ್ಚರ್ಯ ವ್ಯಕ್ತಪಡಿಸಿದ.

ಖಂಡಿತಾ, ನಿನಗೆ ತೋರಿಸಲು ನನಗಡ್ಡಿಯಿಲ್ಲ. ಆದರೆ ಈಗ ಸದ್ಯಕ್ಕೆ ಅದರಿಂದ ಲಾಭವಿಲ್ಲ ಎಂದಳು.

ಅಷ್ಟರಲ್ಲಿ ಪುನಃ ರೈಲು ನಿಂತಿತು. ಸ್ಟೇಷನ್ ಬಳಿ ಹರಿದ ಚಿಂದಿ ಧರಿಸಿದ ಹೆಂಗಸೊಬ್ಬಳು ಹಸಿವಿನಿಂದ ಕಂಗೆಟ್ಟು ಕಿರುಚುವ ತನ್ನ ಮಗುವನ್ನು ಎದೆಗೊತ್ತಿ ನಿಂತಿದ್ದಳು. ಆ ಹೆಂಗಸನ್ನು ನೋಡಿದ ಈಕೆ, "ನಾನು ಬೇಕಾದರೆ ಆಕೆಗೆ ಸಹಾಯ ಮಾಡಬಲ್ಲೆ. ಹಾಗೆಯೇ ಆ ಮಗು ಸಹ ನನಗೆ ಸಹಾಯ ಮಾಡಬಲ್ಲದು. ಆಕೆ ಆ ಮಗುವನ್ನು ನನಗೆ ಹತ್ತು ನಿಮಿಷ ಹಾಲೂಡಿಸಲು ಕೊಟ್ಟರೆ ನಾನು ಆಕೆಗೆ ಐದು ಫ್ರಾಂಕ್ ಕೊಡುತ್ತೇನೆ. ಆಗ ಮಗುವೂ ರಚ್ಚೆ ಹಿಡಿದಿರುವುದನ್ನು ನಿಲ್ಲಿಸುತ್ತದೆ. ನನ್ನ ಎದೆನೋವು ಕಡಿಮೆಯಾಗಿ ನಾನು ಹೊಸ ಹೆಂಗಸಾಗುತ್ತೇನೆ" ಎಂದವಳು ನೋವು ಅಸಹನೀಯವಾದಾಗ "ನನ್ನಿಂದ ಇನ್ನು ತಡೆಯಲಾಗುವುದಿಲ್ಲ. ನಾನು ಸತ್ತೇ ಹೋಗುತ್ತೇನೆ" ಎಂದು ತನ್ನ ಎದೆಯನ್ನು ಗಟ್ಟಿಯಾಗಿ ಒತ್ತಿ ಹಿಡಿದುಕೊಂಡಳು.

ರೈಲು ಮಾತ್ರ ತನ್ನ ಸ್ಥಿತಪ್ರಜ್ಞೆಯಿಂದ ಮೊದಲಿನಂತೆ ಬೆಟ್ಟಗುಡ್ಡಗಳನ್ನು ಹಾಯುತ್ತಾ ಮಾರ್ಸೆಲ್ಸ್‌ನತ್ತ ಆತುರಾತುರದಿಂದ ಧಾವಿಸುತ್ತಿತ್ತು.

ಆಕೆಯ ನರಳಿಕೆ ಕ್ಷಣಕ್ಷಣಕ್ಕೂ ಜಾಸ್ತಿಯಾಗತೊಡಗಿತು.

ಆ ಯುವಕ ಭೀತಿಯಿಂದ ನಡುಗುತ್ತಾ ಆದರೂ ಧೈರ್ಯವಹಿಸಿ "ಆದರೆ...ಮೇಡಂ ...ನಾನೀಗ ನಿಮಗೆ ಸಹಾಯ ಮಾಡಬಲ್ಲೆ" ಎಂದ ದಣಿದ ದನಿಯಲ್ಲಿ ಆಕೆ "ಹೌದು ಈಗ ನೀನು ಮಾತ್ರ ನನ್ನ ಬದುಕಿಸಬಲ್ಲೆ. ಇನ್ನು ನನ್ನಿಂದ ಈ ನೋವು ತಡೆಯಲು ಸಾಧ್ಯವಿಲ್ಲ" ಎಂದಳು.

ಈ ಯುವಕ ಆಕೆಯ ಮುಂದೆ ತನ್ನ ಕಾಲುಗಳನ್ನು ಮಡಚಿ ಕೂತಾಗ ಆಕೆ ತನ್ನ ಮೊಲೆಗಳನ್ನು ಹೊರತೆಗೆದು ಬಲಗಡೆಯ ಮೊಲೆಯನ್ನು ಮಗುವಿನ ಬಾಯಿಗಿಡುವಂತೆ ಇಟ್ಟಾಗ, ಆತ ಅದನ್ನು ಎರಡು ಕೈಗಳಲ್ಲೂ ಹಿಡಿದು ಸ್ತನ್ಯಪಾನ ಮಾಡತೊಡಗಿದ. ಹಸಿವೆಯಿಂದ ಕಂಗೆಟ್ಟ ಮಗುವಿನಂತೆ ರೊಚ್ಚಿನಿಂದ ಹೀರತೊಡಗಿದ. ಸ್ವಲ್ಪ ಹೊತ್ತಿನ ನಂತರ ಆಕೆ ಆತನನ್ನು ಆ ಮೊಲೆಯಿಂದ ಬಿಡಿಸಿ ಇನ್ನೊಂದು ಮೊಲೆಯತ್ತ ಸರಿಸಿದಳು. ಆತ ಮತ್ತೆ ವಿಧೇಯತೆಯಿಂದ ಹೀರತೊಡಗಿದ. ಆತ ಮೊಲೆಯ ಹಾಲನ್ನು ಹೀರುತ್ತಾ ಹೋದಂತೆ ಆಕೆಗೆ ಸಂತೋಷದಿಂದ ಕುಣಿಯುವಂತಾಗುತ್ತಿತ್ತು. ಆತನ ತಲೆಯನ್ನು ತನ್ನೆದೆಗೆ ಒತ್ತಿ ಹಿಡಿದು ಬೇಗ ಬೇಗ ಹೀರುವಂತೆ ಹೇಳುತ್ತಿದ್ದಳು. ಆಕೆಯ ಉಸಿರಾಟದ ವೇಗ ಹೆಚ್ಚಿದಂತೆ ಈತ ಆಕೆಯ ಕೊರಳಸುತ್ತಲೂ ಕೈ ಹಾಕಿ ಇನ್ನಷ್ಟು ತೃಪ್ತಿಯಿಂದ ಎದೆ ಹಾಲನ್ನು ಹೀರತೊಡಗಿದ.

ಈಗ ಆಕೆಗೆ ಕಿತ್ತಳೆಯ ಸುವಾಸನೆಯನ್ನು ಆಘ್ರಾಣಿಸುವ ಶಕ್ತಿ ಬಂದಿತ್ತು. ನಿಧಾನವಾಗಿ ಆಕೆ ಆತನನ್ನು ದೂರ ಸರಿಸಿದಳು. ಕೃತಜ್ಞತಾ ದೃಷ್ಟಿಯಿಂದ ಆತನನ್ನು ದಿಟ್ಟಿಸುತ್ತಾ, ಈಕೆ "ಸಾಕು ನನಗೀಗ ನೋವು ಕಡಿಮೆಯಾಗಿದೆ. ನೀನು ನನಗೆ ಹೊಸ ಜೀವಕೊಟ್ಟೆ" ಎಂದಳು. ಆತ ಎದ್ದುನಿಂತು ತನ್ನ ಎಡಗೈಯಿಂದ ಹಾಲು ಕುಡಿದ ಬಾಯನ್ನು ಒರೆಸಿಕೊಳ್ಳುತ್ತಾ, "ನಾನು ನಿಮಗೆ ಕೃತಜ್ಞನಾಗಿರಬೇಕು. ಏಕೆಂದರೆ ನಾನು ಊಟಮಾಡಿ ಇಂದಿಗೆ ನಾಲ್ಕು ದಿನವಾಗಿತ್ತು" ಎಂದ.

ಅವರಿಬ್ಬರ ನಡುವೆ ಮತ್ತೆ ಮೌನ ಆವರಿಸಿತ್ತು.

ರೈಲು ವೇಗವನ್ನು ಗಳಿಸಿಕೊಂಡು ಮಾರ್ಸೆಲ್ಸ್‌ನತ್ತ ನುಗ್ಗತೊಡಗಿತು. ●

---

## ಕ್ರಾಂತಿ !

ಒಮ್ಮೆ ಸೈಬೀರಿಯದಲ್ಲಿ ಕ್ರುಶ್ಚೊಫ್ ಒಬ್ಬ ಹಣ್ಣು ಹಣ್ಣು ಮುದುಕನನ್ನು ಕಂಡು, "ಅಜ್ಜ, ಅಕ್ಟೋಬರ್ ಕ್ರಾಂತಿಗೂ ಮೊದಲು ನೀನಿದ್ದೆ. ಈಗ ಮೊದಲಿದ್ದುದಕ್ಕಿಂತಲೂ ಹೆಚ್ಚು ಸುಖವಾಗಿದ್ದೀಯಲ್ವೆ?" ಎಂದು ವಿಚಾರಿಸಿದರು.

"ಹೆಚ್ಚು ಸುಖವಾಗಿದ್ದೀನೋ ಇಲ್ವೊ ಗೊತ್ತಿಲ್ಲ. ಆದರೆ ಕ್ರಾಂತಿಗೆ ಮೊದಲು ನನ್ನಲ್ಲಿ ಎರಡು ಜತೆ ಬೂಟು, ಎರಡು ಓವರ್‌ಕೋಟು, ಎರಡು ಸೂಟು, ನಾಲ್ಕು ಫರ್ ಹ್ಯಾಟು, ನಾಲ್ಕು ಜೊತೆ ಕೈಚೀಲ, ಆರು ಜೊತೆ ಕಾಲುಚೀಲ ಇದ್ದವು. ಆದರೀಗ ಎಲ್ಲವೂ ಒಂದೊಂದು ಮಾತ್ರ ಅವೂ ಹರಕಲು ಉಳಿದುಕೊಂಡಿವೆ..." ಎಂದ ಅಜ್ಜ.

ಕ್ರುಶ್ಚೊಫ್ ಕಣ್ಣು ಮಿಟುಕಿಸದೆ, "ಬೇಜಾರು ಮಾಡಿಕೊಳ್ಳಬೇಡ, ಚೀನ, ಇಂಡಿಯಾ, ಆಫ್ರಿಕಗಳಲ್ಲಿ ಹೆಚ್ಚು ಜನರಿಗೆ ಮೈಮುಚ್ಚಲು ಒಂದು ಬಟ್ಟೆ ಕೂಡ ಇಲ್ಲ" ಎಂದರು.

"ಅಂದರೆ-ಅವರು ನಮಗಿಂತ ಮೊದಲೇ ಸಮಾಜವಾದಿ ಕ್ರಾಂತಿ ಮಾಡಿರಬೇಕು..." ಎಂದು ತಲೆಕೆರೆದುಕೊಂಡ ಮುದುಕ. (ಆಧಾರ)

*ಸಂಗ್ರಹ: ಎಚ್.ಆರ್. ಚಂದ್ರವದನರಾವ್*

# ವಿಚಾರಣೋಪಾಖ್ಯಾನ

ಪ್ರಾಣೇಶ್ ಗುಡಿ

ಯಾವುದಾದರೂ ಒಂದು ವಿಷಯಕ್ಕೆ ಅಡ್ಡ ತಲೆಹಾಕಿ ವಿಚಾರಿಸುವುದು ಮನುಷ್ಯನ ಒಂದು ಮೂಲಭೂತ ಗುಣವಾದರೆ ತನಗೆ ಸಂಬಂಧ ಪಟ್ಟಿರಲಿ ಪಡದಿರಲಿ, ಬೇರೆಯವರ ವಿಷಯಕ್ಕೆ ಮೂಗುತೂರಿಸಿ ಗುಟ್ಟಾಗಿ ವಿಚಾರಿಸುವುದು ಅವನ ಮೂಲಭೂತ ಅವಗುಣವೆನ್ನೋಣವೆ? ಸಾಮಾನ್ಯವಾಗಿ ವಿಚಾರಿಸುವಲ್ಲಿನ ಖುಷಿ ವಿಚಾರಣೆಗೆ' ಒಳಪಡುವಲ್ಲಿ ಇಲ್ಲ. ಬೇರೆಯವರ ಪೂರ್ವವೃತ್ತಾಂತವನ್ನು, ಪ್ರಸ್ತುತ ವೃತ್ತಾಂತವನ್ನು, ಪರಿಷ್ಕೃತ ವೃತ್ತಾಂತವನ್ನು ಕೆದಕಿ ಬೆದಕಿ ತಿಳಿದುಕೊಂಡು ನಂತರ ಅದಕ್ಕೆ ನಮ್ಮದೇ ಆದ ಉಪ್ಪು ಖಾರ ಹುಳಿಗಳನ್ನು ಸೇರಿಸಿ ಪ್ರಚುರಪಡಿಸುವಲ್ಲಿ ಇರುವ ಸೊಗಸು ನಮ್ಮ (ಹಳಸಿದ) ವೃತ್ತಾಂತವನ್ನು ಬಯಲಿಗಿಡುವಲ್ಲಿ ಇದ್ದೀತೇ? ಸುತರಾಂ ಇಲ್ಲ.

ವಿಚಾರಿಸುವುದೂ ಒಂದು ಕಲೆ. ಅದು ಎಲ್ಲರಿಗೂ ಸಿದ್ಧಿಸುವಂತಹುದಲ್ಲ. ವಿಷಯವನ್ನು ನಾಜೂಕಾಗಿ ಹೊರಗೆಳೆಯಬಲ್ಲಂಥವರು ಮಾತುಗಾರಿಕೆಯಲ್ಲಿನ ಆ ಅನುನಯ, ಆತ್ಮೀಯತೆ, ಅನುರಕ್ತಿ- ಆಹಾ, ಅವು ಅವರಿಗೇ ಸಲ್ಲತಕ್ಕ ಗುಣವಿಶೇಷಗಳು! ಈ ಪ್ರಕಾರದಲ್ಲಿ ಕನ್ಯಾಪಿತೃಗಳದು ಎತ್ತಿದ ಕೈ (ಕೈ ಎತ್ತಲೇಬೇಕಲ್ಲ ಮನೆಯಲ್ಲಿ ಕುಳಿತ ಕನ್ಯೆಯರು ಖರ್ಚಾಗಬೇಕಾದರೆ) ನಿಮಗೆ ಅವರದು ಎಂಡೇ ದಿನದ, ಅದೂ ಸಿಟಿಬಸ್‌ಸ್ಟ್ಯಾಂಡಿನಲ್ಲಿ ಬಸ್ಸಿಗಾಗಿ ಕಾಯುವಾಗಿನ ಅಲ್ಪ ಪರಿಚಯವಾದರೂ "ಅಂದಹಾಗೆ ಪ್ರತಿದಿನ ಸಾಯಂಕಾಲ ಈ ಕಡೆಯಿಂದ ಹಾದು






ಹೋಗುವ ಆ ತೆಳ್ಳನೆಯ ಬೆಳ್ಳನೆಯ ಹುಡುಗ ನಿಮ್ಮ ಮಗ ತಾನೇ? ಆ ಎತ್ತರ, ಆ ಗಾಂಭೀರ್ಯ, ಆ ಮುಖವರ್ಚಸ್ಸು ನೋಡಿದಾಗಲೇ ಅಂದುಕೊಂಡಿದ್ದೆ ನಿಮ್ಮ ಮಗ ಇರಬೇಕೆಂದು. ಓಹ್! ಎಲ್ಲವೂನಿಮ್ಮ ಪಡಿಯಚ್ಚು" ಎಂದು ಹೊಗಳುತ್ತಾರೆ. ಆಗ ನಿಮಗೆ ನಿಮ್ಮ ಯೌವನದ ದಿನಗಳು ಮರುಕಳಿಸಿ ಮುಖಕಮಲವರಳಿ ಖುಷಿಯಿಂದ ಬೀಗುತ್ತೀರಿ. ಪಾಪ, ಅದು ಅವರ ಮಗಳನ್ನು ನಿಮ್ಮ ಮಗನಿಗೆ ProPose ಮಾಡುವ ಪೀಠಿಕೆ ಎಂದು ನಿಮಗೆ ಆಗ ಗೊತ್ತಾಗಬೇಕಾದುದಾದರೂ ಹೇಗೆ? ತಕ್ಷಣ ಅವರುಕೇಳದೇನೇ ನಿಮ್ಮ ಮಗನ ವಿವರಗಳನ್ನಷ್ಟೇ ಏಕೆ, ನಿಮ್ಮ ವಂಶಾವಳಿಯ ವಿವರಗಳನ್ನೆಲ್ಲ ನೀವಾಗಿಯೇ ಆದ್ಯಂತ್ಯಾಗಿ ಅವರ ಮುಂದೆ ಬಿಚ್ಚಿಡುತ್ತೀರಿ! ಅದೇ ಖುಷಿಯಲ್ಲಿ ಅವರ ಮಗಳ ಜಾತಕವನ್ನೂ ನಿಮ್ಮ ಮಗನಿಗಾಗಿ ತೆಗೆದುಕೊಂಡು ನಗುನಗುತ್ತ ಜೇಬಿಗಿಳಿಸಿ ಬಿಟ್ಟಿರುತ್ತೀರಿ! ಇದು ವಿಚಾರಣಾತಜ್ಞರ ಮಾತುಗಾರಿಕೆಯ ಕುಶಲನೀತಿ!

ಆದರೆ ಕೆಲವು ಸ್ಥಳಗಳಲ್ಲಿ, ಅದೂ 'ವಿಚಾರಣೆ' ಎಂದು ತೂಗುಫಲಕ ಹಾಕಿದ ಸ್ಥಳಗಳಲ್ಲೇ ವಿಚಾರಿಸುವುದು ಕಷ್ಟಸಾಧ್ಯವೇನು, ದುಸ್ಸಾಧ್ಯವೇ ಆಗಿಬಿಡುತ್ತದೆ! ನಾವು 'ವಿಚಾರಣೆ' ಎಂಬ ಫಲಕವಿರುವ ಕೌಂಟರಿಗೆ ಹೋಗುತ್ತೇವೆ ಎಂದಿಟ್ಟುಕೊಳ್ಳೋಣ. ಕೌಂಟರಿನಲ್ಲಿ ಅತ್ಯಂತ ಗಂಭೀರ ಮತ್ತು ಮಾತನಾಡಿಸಿದರೆ ಸಾಕು ಮುನಿಯುವ ಮುಖಭಾವವನ್ನು ಹೊತ್ತ ವ್ಯಕ್ತಿಯೊಂದು ಕುಳಿತಿರುತ್ತದೆ! ಆದರೂ ನಾವು ಇರುವ ಧೈರ್ಯವನ್ನೆಲ್ಲ ಒಟ್ಟು ಗೂಡಿಸಿಕೊಂಡು, ಒಣಗಿದ ಗಂಟಲಿಂದ ಒಂದೆರಡು ಸಲ 'ಸಾರ್' ಎನ್ನುತ್ತೇವೆ. ಆಗ ಆ 'ಸಾರ್' ಯೋಗನಿದ್ರೆಯಿಂದ ಎಚ್ಚತ್ತವರಂತೆ ನಿಧಾನವಾಗಿ ತಲೆ ಎತ್ತಿ ನೋಡುತ್ತಾರೆ. ಆ ನೋಟದಲ್ಲಿ ತೂರಿ ಬರುವ ಭಾವಗಳಾದರೂ ಎಂಥವು? ಕೋಪ, ತಿರಸ್ಕಾರ, ವಿಷಾದ, ಆಶ್ಚರ್ಯ ಈ ನಾಲ್ಕೂ ಭಾವನೆಗಳನ್ನು ಒಂದೇ ನೋಟದಲ್ಲಿ ತೀಕ್ಷ್ಣವಾಗಿ ಪ್ರತಿಬಿಂಬಿಸಿ "ನಮ್ಮನ್ನು ಮಾತನಾಡಿಸುವ ಧೈರ್ಯ ತೋರಿ ಯೋಚನಾಭಂಗ ಮಾಡಿದ ಈ ನರಪ್ರಾಣಿ ಯಾರು?" ಎಂದು ತಪೋಭಂಗವಾದ ವಿಶ್ವಾಮಿತ್ರರು ನೋಡುವ ರೀತಿಯಲ್ಲಿ ನಮ್ಮನ್ನು ನೋಡುತ್ತಾರೆ. ಆಗಲೂ ನಾವು ಮೊಂಡು ಧೈರ್ಯಮಾಡಿ ನಮಗೆ ಬೇಕಾದ ಮಾಹಿತಿಯನ್ನು ಕೇಳಿಯೇ ಬಿಡುತ್ತೇವೆ. ಆಗ 'ಸಾರ್' ಅವರು ಎತ್ತಲೋ ನೋಡುತ್ತ, ತಮಗೆ ತಾವೇ ಹೇಳಿಕೊಂಡಂತೆ ತುಟಿ ಚಲಿಸಿ ಚುಟುಕಾಗಿ ಚುರುಕಾಗಿ ಒಂದೇ ಪದದಲ್ಲಿ ಉತ್ತರಕೊಟ್ಟು ಮತ್ತೆ ಧ್ಯಾನಾಸಕ್ತರಾಗುತ್ತಾರೆ. ಅವರು ತಮ್ಮ






ತುಟಿಯಲ್ಲಿ ಹೇಳಿಕೊಂಡದ್ದು ನಮ್ಮ ಕಿವಿಯವರೆಗೂ ತಲುಪಿ ಕೇಳಿಸಿದರೆ ನಮ್ಮ ಪುಣ್ಯವೇ ಪುಣ್ಯ. ಕೇಳಿಸದೆ ನಾವೇನಾದರೂ ಮತ್ತೊಮ್ಮೆ 'ಆಂ....?' ಎಂದು ನಮ್ಮ ಶ್ರವಣಶಕ್ತಿ ಕುಂದಿರುವುದನ್ನು ತೋರ್ಪಡಿಸಿದೆವೋ, 'ಸಾರ್' ಅವರು ಕ್ರುದ್ಧರಾಗಿ ಎರಡನೇ ಮಹಾಯುದ್ಧದ ಸಮಯದಲ್ಲಿ ಅಮೇರಿಕವು ಜಪಾನಿನ ಹಿರೋಷಿಮಾ ನಾಗಾಸಾಕಿಗಳ ಮೇಲೆ ದಾಳಿ ಮಾಡಿದಂತೆ ನಮ್ಮ ಮೇಲೆ ದಾಳಿ ಮಾಡಿಬಿಡುತ್ತಾರೆ ಅಷ್ಟೇ!

ಇಂಥ ಹಲವಾರು ದಾಳಿಗಳನ್ನು ಎದುರಿಸಿದ ಅನುಭವವಿರುವ ನಾನು 'ವಿಚಾರಣೆ' ಕೌಂಟರಗಳಲ್ಲಿ ಏನಾದರೂ ವಿಚಾರಿಸಬೇಕಾದ ಸಂದರ್ಭ ಬಂದಾಗ, ಕೌರವನ ಆಸ್ಥಾನಕ್ಕೆ ಸಂಧಾನಕ್ಕೆ ಹೊರಡುವಾಗ ಕೃಷ್ಣ ಮಾಡಿಕೊಂಡಷ್ಟೇ ಮಾನಸಿಕ ಸಿದ್ಧತೆಗಳನ್ನು ಮಾಡಿಕೊಂಡು ನಂತರ ವಿಚಾರಿಸುವ ದುಸ್ಸಾಹಸ ಮಾಡುತ್ತೇನೆ. ಆದರೂ ಪರಿಣಾಮ ಹೀಗೇ ಎಂದು ಹೇಳಲಿಕ್ಕಾಗುವುದಿಲ್ಲ ನೋಡಿ!

ಹೆಂಗಸರಿಗೂ ವಿಚಾರಣೆಗೂ ಅವಿನಾಭಾವ ಸಂಬಂಧ ಉಂಟು. ಬಾಲಗಂಗಾಧರ ತಿಲಕರು "ಸ್ವಾತಂತ್ರ್ಯ ನನ್ನ ಜನ್ಮಸಿದ್ಧ ಹಕ್ಕು" ಎಂದು ಮಾತ್ರ ಘೋಷಿಸಿದ್ದರೆ, ನಮ್ಮ ಮಹಿಳೆಯರು "ವಿಚಾರಣಾ ಸ್ವಾತಂತ್ರ್ಯ ನಮ್ಮ ಆಜನ್ಮಸಿದ್ಧ ಹಕ್ಕು" ಎಂದು ಘೋಷಿಸಿಬಿಟ್ಟಿದ್ದಾರೆ! ಒಮ್ಮೆ ನ್ಯಾಯಬೆಲೆ ಅಂಗಡಿಯ ಮುಂದೆ ರೇಷನ್‌ಗಾಗಿ ನಾಲ್ಕೈದು ಜನ ಮಹಿಳೆಯರ ಕೊನೆಯಲ್ಲಿ ಕ್ಯೂ ನಿಲ್ಲಬೇಕಾದ ದಯನೀಯ ಪರಿಸ್ಥಿತಿ ನನಗೆ ಒದಗಿತ್ತು. ಕಣ್ಣನ್ನು ನಿಯಂತ್ರಿಸುವ ಶಕ್ತಿ ನನಗಿದೆಯಾದರೂ ಕಿವಿಯನ್ನು ನಿಯಂತ್ರಿಸುವ ಶಕ್ತಿ ಇಲ್ಲವಾದುದರಿಂದ ಅವರಾಡುತ್ತಿದ್ದ ಮಾತುಗಳು ಸ್ಪಷ್ಟವಾಗಿ ನನಗೆ ಕೇಳಿಸುತ್ತಿದ್ದವು. ಆಚೆ ಮನೆಯ ಮೀನಾಕ್ಷಿ ಮೊನ್ನೆ ಮಿಕ್ಸಿ ತೆಗೆದುಕೊಂಡದ್ದನ್ನೇ ದೊಡ್ಡ ಸುದ್ದಿಮಾಡಿ ಊರೆಲ್ಲ ಡಂಗುರ ಸಾರಿಕೊಳ್ಳುತ್ತಿರುವುದು, ಈಚೆ ಮನೆಯ ಕಾಮಾಕ್ಷಿ ಮದುವೆಯ ವಯಸ್ಸಿಗೆ ಬಂದ ಇಬ್ಬರು ಹೆಣ್ಣುಮಕ್ಕಳನ್ನು 'ಮನೆಯೇ ಮಂತ್ರಾಲಯ' ಚಿತ್ರಕ್ಕೆ ಕಳಿಸಿ ತಾನು ಗಂಡನ ಜೊತೆ 'ಪ್ರೇಮಲೋಕ' ಚಿತ್ರವನ್ನು ಬಾಲ್ಕನಿಯಲ್ಲಿ ಕುಳಿತು ನೋಡಿಬಂದದ್ದು, ಪಕ್ಕದ ಮನೆಯ ನಳಿನಾಕ್ಷಿ ಮೊನ್ನೆ ತಾನೇ ಉದ್ಯೋಗಕ್ಕೆ ಸೇರಿದವಳು ನಿನ್ನೆ ಆಗಲೇ ಅದಾರೋ ಯುವಕನ ಜೊತೆ ಸ್ಕೂಟರ್‌ನಲ್ಲಿ ಬಂದಿಳಿದದ್ದು ಇತ್ಯಾದಿ – ಹೆಚ್ಚು ಕಡಿಮೆ ಇಂಥವೇ ಪರಿಕರಗಳನ್ನೊಳಗೊಂಡ ಗಹನವಾದ ಪ್ರಕರಣಗಳ ಮಂಡನೆ, ಚರ್ಚೆ, ಟೀಕೆ, ಕೊನೆಯಲ್ಲಿ ಆಯಾ ವಿಷಯಗಳ ಬಗ್ಗೆ ತಮ್ಮದೇ ಆದ ತೀರ್ಮಾನ-ಹೀಗೆ ಅವರ ವಿಚಾರಣಾ ವೈಖರಿ ಓತಪ್ರೋತವಾಗಿ ಹರಿದುಬಂದು ಕೆಲಸಮಯ ನನ್ನನ್ನೂ ಆ ಪ್ರಮೀಳಾ ಅಸೆಂಬ್ಲಿಯ ಕೇಳುಗ ಸದಸ್ಯನನ್ನಾಗಿಸಿದ್ದವು! ಅವರಲ್ಲಿ ಪ್ರತಿಯೊಬ್ಬರೂ ವಿಷಯವನ್ನು ಪ್ರಸ್ತಾಪಕ್ಕೆ ತರುತ್ತಿದ್ದ ರೀತಿ, ವಿಚಾರದ ಹೂರಣವನ್ನು ಹೊರಗೆಳದು ಟೀಕಿಸುತ್ತಿದ್ದ ವೇಗದ ಗತಿ, ಕೊನೆಗೆ ತೀರ್ಮಾನವನ್ನು ಕೊಡುವಲ್ಲಿ 'ಇದು ಹೀಗೆ' ಎಂದು ಕರಾರು ವಾಕ್ಕಾಗಿ ಹೇಳುತ್ತಿದ್ದ ಛಾತಿ ಇವುಗಳನ್ನು ಕೇಳು ತ್ತಿದ್ದ ನನಗೆ ನಾನು ನನ್ನ ಕಾಲೇಜು ದಿನಗಳಲ್ಲಿ ಓದಿದ್ದ ಅರಿಸ್ಟಾಟಲ್, ಪ್ಲೇಟೋ ಚರ್ಚಿಲ್ ಮುಂತಾದ ಪ್ರಪಂಚದ ಮೇಧಾವಿ ರಾಜಕೀಯ ತಜ್ಞರು ಕಣ್ಣಮುಂದೆ ಸುಳಿದು ದಂಗಾಗಿ ಹೋದೆ! ನ್ಯಾಯಬೆಲೆ ಅಂಗಡಿಯ ಮುಂದೆ ನಿಂತು ಅನ್ಯಾಯವಾಗಿ ಅವರಿವರ ಮನೆಯ ಸಮಾಚಾರವನ್ನು ವಿಚಾರಣೆ ಮಾಡಿ ಜಾಲಾಡಿ ದ್ದಾಯ್ತು; ತಮ್ಮ ಮನೆಯ ಸಮಾಚಾರವನ್ನು ಒಬ್ಬರೂ ವಿಚಾರಣೆಗೆ ಮಂಡಿಸಲೇ ಇಲ್ಲ ವಲ್ಲಾ ಎಂದು ನನಗನಿಸಿತಾದರೂ ಹಾಗೆಂದು ಅವರನ್ನು ಕೇಳುವ ಧೈರ್ಯ ನನಗಾದೀತೇ? ನನಗೇನು, ಯಾರಿಗೂ ಆಗದು!

ಒಂದು ಚೂರು ವಿಷಯದ ಎಳೆ ಸಿಕ್ಕರೂ ಸಾಕು, ಹೆಂಗಸರು ಅದನ್ನು ಹೆಂಜಿ ಗುಂಜಿ ಗಂಜಿ ತೆಗೆದುಬಿಡುತ್ತಾರೆ! ಉದಾಹರಣೆಗೆ ನೀವು ನಿಮ್ಮ ಶ್ರೀಮತಿಯವರಿಗೆ "ನಮ್ಮ ಆಫೀಸಿನಲ್ಲಿ ಕೆಲಸ ಮಾಡುವ ಸುಂದರಿ ಎಂಬಾಕೆ, ಪಾಪ ತುಂಬ ಒಳ್ಳೆಯ ಹುಡುಗಿ" ಎಂದು ಎಂದೋ ಒಂದುಸಲ ಸಾಂದರ್ಭಿಕವಾಗಿ ಒಂದು ಮಾತನ್ನು ಹೇಳಿದಿರಿ ಎಂದಿಟ್ಟುಕೊಳ್ಳಿ. ನೀವು ಅದನ್ನು ಅಲ್ಲೇ ಮರೆತುಬಿಡುತ್ತೀರಿ. ಆದರೆ ನಿಮ್ಮಾಕೆ ಅದನ್ನು ಮರೆಯು

ತ್ತಾರೆ ಎಂದುಕೊಂಡಿರಾ? ಉಹುಂ, ಅದು ಹೇಗೆ ಮರೆಯುತ್ತಾರೆ? 'ಆ ಸುಂದರಿ ಯಾರು, ಅವಳ ಹೆಸರು ಮಾತ್ರ ಸುಂದರಿಯೋ ಅಥವಾ ನೋಡುವುದಕ್ಕೂ ಸುಂದರಳಾಗಿರುವಳೋ, ಅವಳು ವಾರವೊಂದಕ್ಕೆ ಉಡುವ ತರಾವರಿ ಸೀರೆಗಳ ಸರಾಸರಿ ಸಂಖ್ಯೆ ಎಷ್ಟು, ಅವಳೊಂದಿಗೆ ನೀವು ಆಫೀಸಿನಲ್ಲಿ ದಿನಕ್ಕೆ ಎಷ್ಟು ಸಲ ಮಾತನಾಡುತ್ತೀರಿ, ಅವಳು ನಿಮ್ಮೊಂದಿಗೆ ಯಾವ ಭಾವಭಂಗಿಯಲ್ಲಿ ಮಾತನಾಡುತ್ತಾಳೆ, ಅವಳಿಗೆ ಮದುವೆ ಯಾಗಿದೆಯೇ, ಆಗಿಲ್ಲವಾದರೆ ಯಾವಾಗ ಆಗ ಬಹುದು' ಇತ್ಯಾದಿ ವಿವರಗಳನ್ನು ನಿಮ್ಮ ಶ್ರೀಮತಿಯವರು ಕೇಂದ್ರ ತನಿಖಾ ದಳದವರಿ ಗಿಂತಲೂ ತ್ವರಿತವಾದ ಗತಿಯಲ್ಲಿ ಮೂರೇ ದಿನದಲ್ಲಿ ಮನೆಯಲ್ಲಿ ಕುಳಿತುಕೊಂಡೇ ಅದು ಹೇಗೋ ಪತ್ತೆಹಚ್ಚಿಬಿಡುತ್ತಾರೆ! "ಯಾವು ದಕ್ಕೂ ನೀವು ಆ ಸುಂದರಿಯಿಂದ ಸ್ವಲ್ಪ ದೂರವೇ ಇರಿ" ಎಂದು ನಾಲ್ಕನೆಯ ದಿನ ಬೆಳಿಗ್ಗೆ Surprise ಆಗಿ ಒಂದು ಸುಗ್ರೀವಾಜ್ಞೆ ಯನ್ನೂ ಹೊರಡಿಸಿ ಬಿಡುತ್ತಾರೆ!

ಇನ್ನು ವಿಚಾರಿಸುವ ಚಪಲವೊಂದಿದ್ದರೆ ಸಾಲದು, ನಮಗೆ ಬೇಕಾದ ಮಾಹಿತಿಯನ್ನು ತಿಳಿದುಕೊಳ್ಳಬೇಕಾದರೆ ಚಾಣಕ್ಯ ಬುದ್ಧಿಯೂ ಬೇಕು. ಇಲ್ಲದಿದ್ದರೆ ಪ್ರತಿದಿನ ದಾರಿಯಲ್ಲಿ ಎದುರಾಗುವ ಚೆಂಗುಲಾಬಿ ಕೆನ್ನೆಯ ಚೆಲುವೆ ಯನ್ನು ಹಿಂದೆ ಮುಂದೆ ನೋಡದೆ ನೇರವಾಗಿ "ಶ್ರೀದೇವಿಯನ್ನೂ ನಾಚಿಸುವಂತಿರುವ ನೀವು ನನ್ನನ್ನು ಮದುವೆಯಾಗುತ್ತೀರಾ ಮಿಸ್?" ಎಂದು ನಡುದಾರಿಯಲ್ಲಿ ನಿಂತು ಕೇಳಿದ್ದೇ ಆದರೆ ಈ ವಿಷಯ ಶಾಸನ ಸಭೆಯವರೆಗೂ ಹೋಗಿ, ಹಾಗೆ ಕೇಳಿದವನ ಹೆಸರು, ಊರು, ವಯಸ್ಸು, ಮನಸ್ಸು, ಕೇಳಿದ ವೇಳೆ, ವೈಖರಿ ಮುಂತಾದ ವಿವರಗಳನ್ನು ಸಂಗ್ರಹಿಸಿ ಅವನಿಗೆ ತಕ್ಕ ಶಿಕ್ಷೆ ವಿಧಿಸಲು ಒಂದು ವಿಚಾರಣಾ ಆಯೋಗವನ್ನೇ ನೇಮಿಸಿಬಿಟ್ಟಾರು! ವಿಚಾರಣೆ ಕೈಗೊಳ್ಳುವಲ್ಲೂ ಕೆಲವು ಮಾರ್ಗಗಳೂ, ಮಾಧ್ಯಮಗಳೂ ಇವೆ ಎಂಬುದನ್ನು ಮರೆಯ ಲಾಗದು.



"ನೀವು ನನ್ನ ಕಾದಂಬರಿಗಳಲ್ಲಿ 'ಮಣ್ಣಿನ ವಾಸನೆ' ಇಲ್ಲ ಅಂತಿದ್ರಲ್ಲಾ... ತೊಗೊಳ್ಳಿ – 'ಮಣ್ಣಿನವಾಸನೆ' ಅಂತಾನೇ ಒಂದು ಕಾದಂಬ್ರಿ ಬರದು ತಂದಿದೀನಿ.."

ಕೆಲವು ಮಂದಿ ಆತ್ಮೀಯ ಅರ್ಥಾತ್ ಸತ್ಯ ವನ್ನು ಹೇಳಿದರೆ ಸರಿ, ಇಲ್ಲದಿದ್ದರೆ ಸತ್ಯದ ತಲೆಯ ಮೇಲೆ ಹೊಡೆದಂಥ ಮಿಥ್ಯವನ್ನು ಸೃಷ್ಟಿ ಸಬಲ್ಲ ವಿಚಾರಣಾಪ್ರಿಯರಿರುತ್ತಾರೆ. ಅಂಥ ವರಿಗೆ ಅವರು ಮೊದಲ ವಿಚಾರಣೆಯಲ್ಲೇ ಅವರು ಕೇಳಿದ ವಿಷಯಕ್ಕೆ ನಿಜಾಂಶವನ್ನು ಹೇಳಿಬಿಡುವುದು ಕ್ಷೇಮ. ಇಲ್ಲದಿದ್ದರೆ ನೀವು ಸುಮ್ಮನೆ ಶೋಕಿಗಾಗಿ ಗಡ್ಡ ಬಿಟ್ಟಿದ್ದರೂ, ಇತ್ತೀಚೆಗೆ ಪ್ರಣಯ ವ್ಯವಹಾರ ಒಂದರಲ್ಲಿ ಭಾರೀ ಸೋಲನ್ನು ಅನುಭವಿಸಿದ್ದರಿಂದಲೇ ಈ ರೀತಿ ಗಡ್ಡಬಿಟ್ಟು, ತಿರುಗಾಡುತ್ತಿದ್ದೀರಿ ಎಂದು ಗುಟ್ಟಾಗಿ ನಿಮ್ಮ ಬಗ್ಗೆ ಪ್ರಚಾರ ಮಾಡಿ ಬಿಟ್ಟಾರು ಹುಷಾರ್! ●

# ನಾಜಿ ಸೆರೆಮನೆಯಿಂದ...

ಫ್ರೆಡ್ರಿಕ್ ಪೇಂಟೌನ್ ವಿರಚಿತ Giraud's Brilliant Escape From A Nazi Prison ನಿಂದ ಆಯ್ದುದು

ರೇಣುಕ

ಜರ್ಮನ್ ಪದಾತಿ ಸೈನ್ಯ 1940ರ ಮೇ ಹತ್ತರಂದು ಬೆಲ್ಜಿಯಮಿನ ರಕ್ಷಣಾ ಕೋಟೆಯೆಂದು ಪ್ರಸಿದ್ಧವಾದ ಆರ್ಡನೆಸ್ ಕಾಡಿನಿಂದ ಪ್ರವಾಹದೋಪಾದಿಯಲ್ಲಿ ನುಗ್ಗಿ ಬಂದು ಲೆಕಟಲೆಟ್ ಬಳಿ ಫ್ರೆಂಚ್ ಬಟಾಲಿಯನ್ನಿನ ರಕ್ಷಣಾ ನೆಲೆಯೊಂದನ್ನು ಸುತ್ತುವರಿಯಿತು. ಮೊದಲು ಫ್ರೆಂಚ್ ರಕ್ಷಣಾ ನೆಲೆಯನ್ನು ಮಾರ್ಟರ್ ಫೈರಿನಿಂದ ಧೂಳಿಪಟ ಮಾಡಿದ ಮೇಲೆ ಜರ್ಮನ್ ಕಮಾಂಡರು ಅಳಿದುಳಿದ ಫ್ರೆಂಚ್ ಸೈನಿಕರಿಗೆ ಶರಣಾಗುವಂತೆ ಆಜ್ಞಾಪಿಸಿದ. ಬದುಕುಳಿದ ಸೈನಿಕರು ತಮ್ಮ ಆಯುಧಗಳನ್ನು ನೆಲದ ಮೇಲಿಟ್ಟು, ಜರ್ಮನ್ ಸೇನೆಗೆ ಶರಣಾದರು. ಶರಣಾದ ಫ್ರೆಂಚ್ ಸೈನಿಕರಲ್ಲಿ ಬಿಳಿ ಮೀಸೆಯ ಜನರಲ್ ಪದವಿಯವನೆಂದು ಸೂಚಿಸುವ ಐದು ನಕ್ಷತ್ರಗಳಿದ್ದ ಶಿರಸ್ತ್ರಾಣವನ್ನು ಧರಿಸಿದ ಆರು ಅಡಿ ಎತ್ತರದ ಮಹಾಕಾಯನಾದ ವೃದ್ಧ ಸೇನಾನಿಯನ್ನು ಕಂಡು ಜರ್ಮನ್ ಕಮಾಂಡರನು ಚಕಿತನಾದನು. ಕಾಲು ಶತಮಾನದ ಅವಧಿಯಲ್ಲಿ ಎರಡನೆಯ ಬಾರಿ ಜನರಲ್ ಹೆನ್ರಿ ಹೊನೋರ್ ಗಿರೋಡನು ಜರ್ಮನ್ ಸೇನೆಗೆ ಸೆರೆಸಿಕ್ಕಿದ್ದ. ಫ್ರೆಂಚ್ ಸೇನೆಯಲ್ಲಿ ಉಚ್ಚ ಪದವಿಗೇರಿದ ಅತ್ಯಲ್ಪ ಸಮಯದಲ್ಲೇ ಕೈದಿಯಾಗಿ ಸೆರೆಸಿಕ್ಕಿದುದು ಜನರಲ್ ಗಿರೋಡನಿಗೆ ದೊಡ್ಡ ತೇಜೋಭಂಗವಾದಂತಾಗಿತ್ತು.

ಫ್ರೆಂಚ್ ಸೇನೆಯಲ್ಲಿ ಅತಿ ಬುದ್ಧಿವಂತನಾದ ಸೇನಾಧಿಕಾರಿಯೆಂದು ಗಿರೋಡ್ ಹೆಸರು ಪಡೆದಿದ್ದ. ಸೈಂಟ್ ಸಿರ್ ಸೈನಿಕ ಶಾಲೆಯಲ್ಲಿ ಶಿಕ್ಷಣ ಮುಗಿಸಿ ಫ್ರೆಂಚ್ ಸೇನೆಗೆ ಸೇರಿದ ಕೆಲವಾರು ತಿಂಗಳಲ್ಲಿಯೇ ಅವನ ದುರಾದೃಷ್ಟ ಅವನನ್ನು ಮೊದಲನೆಯ ಜಾಗತಿಕ ಮಹಾಯುದ್ಧಕ್ಕೆ ನೂಕಿತು. ಮೊದಲ ಮಹಾಯುದ್ಧದಲ್ಲಿ ಕ್ಯಾಪ್ಟನ್ ಆಗಿದ್ದ ಗಿರೋಡ್ ಫ್ರೆಂಚ್ ಸೇನೆಯ ಪಡೆಯೊಂದರ ಅಧಿಕಾರಿಯಾಗಿ ಶತ್ರು ನೆಲೆಯೊಂದರ ಮೇಲೆ ಬಯೊನೆಟ್ ದಾಳಿಯನ್ನು ನಡೆಸುತ್ತಿದ್ದಾಗ ಗಾಯಗೊಂಡು ಕೆಳಗೆ ಬಿದ್ದ. ಗಿರೋಡ್ ಸತ್ತಿರಬಹುದೆಂದು ಊಹಿಸಿ ಅವನ ಸೈನಿಕರು ಅವನನ್ನು ರಣರಂಗದಲ್ಲಿಯೇ ಬಿಟ್ಟು ಓಡಿಹೋದರು. ಜರ್ಮನ್‌ರು ಗಿರೋಡನನ್ನು ಸೆರೆಹಿಡಿದು ಬೆಲ್ಜಿಯಮ್ಮಿನ ಯುದ್ಧ ಕೈದಿಗಳ ಶಿಬಿರವೊಂದರಲ್ಲಿ ಸೆರೆ ಇಟ್ಟರು. ಯುದ್ಧದಲ್ಲಾದ ಗಾಯಗಳು ಮಾಯುವ ಮುನ್ನವೇ ಗಿರೋಡ್ ಜರ್ಮನ್ ಸೆರೆಯಿಂದ ತಪ್ಪಿಸಿಕೊಂಡು ಬೆಲ್ಜಿಯನ್ನನಂತೆ ನಟಿಸುತ್ತಾ ಸರ್ಕಸ್ ಕಂಪನಿಯೊಂದನ್ನು ಸೇರಿಕೊಂಡು ಬ್ರಸೆಲ್ಸನ್ನು



ತಲುಪಿದ. ಅಲ್ಲಿಂದ ಗೆಳೆಯನೊಬ್ಬನ ನೆರವಿನಿಂದ ಹಾಲೆಂಡಿಗೆ ಹೋಗಿ ನಂತರ ಬ್ರಿಟನ್ನಿಗೆ ಪಾರಾದ. ಯುದ್ಧದಲ್ಲಾದ ತೀವ್ರ ಸ್ವರೂಪದ ಗಾಯಗಳಿಂದಾಗಿ ಕುಂಟನಾಗಿದ್ದರೂ ಗಿರೋಡ್ ಮತ್ತೆ ತನ್ನ ರೆಜಿಮೆಂಟನ್ನು ಸೇರಿಕೊಂಡು ಕಾರ್ಯನಿರತನಾದ.

ಎರಡನೆಯ ಮಹಾಯುದ್ಧ ಯುರೋಪಿನಲ್ಲಿ ಆಸ್ಫೋಟಗೊಂಡಿತು. ಡೆನ್ಮಾರ್ಕ್ ಮತ್ತು ನಾರ್ವೆ ದೇಶಗಳು ಹೆಚ್ಚು ಪ್ರತಿರೋಧವಿಲ್ಲದೆ ಜರ್ಮನ್ ಸೇನೆಗೆ ಶರಣಾಗನಂತರ ನಾಜಿ ಸೇನೆ ಬೆಲ್ಜಿಯಮ್ಮಿನತ್ತ ಸಾಗಿತು. ಆಂಗ್ಲೊ ಫ್ರೆಂಚ್ ಸೇನೆಗಳು ಬೆಲ್ಜಿಯಮ್ಮಿನ ನೆರವಿಗೆ ಧಾವಿಸಿ ಬಂದವು. ಆರ್ಡನೆಸ್ ಕಾಡಿನ ಪ್ರದೇಶ ಬೆಟ್ಟ ಗುಡ್ಡಗಳಿಂದ ಕೂಡಿ ಟ್ಯಾಂಕ್ ಕದನಕ್ಕೆ ಪ್ರಶಸ್ತವಲ್ಲದುದರಿಂದ ಆಂಗ್ಲೋ ಫ್ರೆಂಚ್ ಸೇನೆಗಳ ದಂಡನಾಯಕರು ಜರ್ಮನ್ ಆಕ್ರಮಣವನ್ನು ಈ ಪ್ರದೇಶದಲ್ಲಿ ನಿರೀಕ್ಷಿಸಿರಲಿಲ್ಲ. ಅವರ ಈ ನಿರ್ಲಕ್ಷ್ಯವೇ ಅವರ ಸೋಲಿಗೆ ಕಾರಣವಾಯಿತು.

ಆಂಗ್ಲೋ-ಫ್ರೆಂಚ್ ಸೇನೆಗಳ ದಂಡನಾಯಕನಾದ ಗಿರೋಡನು ಜರ್ಮನ್ ಸೇನೆ ಆರ್ಡನೆಸ್ ಕಾಡನ್ನು ಅನಿರೀಕ್ಷಿತವಾಗಿ ಭೇದಿಸಿಕೊಂಡು ಬೆಲ್ಜಿಯಮ್ಮಿನ ಗಡಿಯೊಳಗೆ ನುಗ್ಗಿದ ಸುದ್ದಿಯನ್ನು ಕೇಳಿ ಜರ್ಮನ್ ಸೇನಾಪ್ರವಾಹವನ್ನು ತಡೆಗಟ್ಟುವ ಸಾಧ್ಯತೆಯ ಬಗ್ಗೆ ಸ್ಥಳ ಪರಿಶೀಲನೆಗಾಗಿ ಕೆಲವು ಅಧಿಕಾರಿಗಳೊಂದಿಗೆ ಮುಂಚೂಣಿ ಪ್ರದೇಶಕ್ಕೆ ಧಾವಿಸಿ ಬಂದಾಗ ಆಕಸ್ಮಿಕವಾಗಿ ಜರ್ಮನ್‌ರ ಕೈಗೆ ಸಿಕ್ಕಿ ಬಿದ್ದಿದ್ದ.

ಗಿರೋಡ್ ಮೊದಲ ಮಹಾಯುದ್ಧದಲ್ಲಿ ಸೆರೆ ಸಿಕ್ಕಿ ಪಾರಾಗಿದ್ದ. ನಿಜ, ಆದರೆ ಅವನು ಅಂದು ಯುವಕನಾಗಿದ್ದ. ಈಗ ಅವನು ಅರವತ್ತೊಂದು ವಯಸ್ಸಿನ ವೃದ್ಧನಾಗಿದ್ದ. ಇಳಿ ವಯಸ್ಸಿನ ಕುಂಟ ಗಿರೋಡನಿಗೆ ಸೆರೆಯಿಂದ ಪಾರಾಗುವುದು ಕನಸಿನ ಮಾತೇ ಸರಿ. ಆದರೆ ಗಿರೋಡನು ವೃದ್ಧನಾಗಿದ್ದರೂ ಅವನ ಮನಸ್ಸು ಮುದಿಯಾಗಿರಲಿಲ್ಲ. ಮತ್ತೆ ಸೆರೆಯಿಂದ ಪಾರಾಗಲು ಸಂಕಲ್ಪಿಸಿದ. ಗಿರೋಡನನ್ನು ಈ ಸಲ ನಾಜಿಗಳು ಜರ್ಮನಿಯಲ್ಲಿ ಕೊನಿಂಗ್‌ಸ್ಟೆನ್ ಎಂಬ ಗುಡ್ಡದ ಮೇಲೆ ನೂರೈವತ್ತು ಅಡಿಗಳ ಎತ್ತರದ ಕಡಿದಾದ ಬಂಡೆಯ ಮೇಲಿದ್ದ ಅಭೇದ್ಯ ಕೋಟೆಯೊಂದರಲ್ಲಿ ಸೆರೆ ಇಟ್ಟರು. ಬಂದೀಖಾನೆಯ ಕಿಟಕಿಯಿಂದ ಇಣಿಕಿ ನೋಡಿದರೆ ದಟ್ಟ ಕಾಡಿನಿಂದ ಆವೃತ್ತವಾದ ಆಳವಾದ ಪ್ರಪಾತ. ಕೋಟೆಯ ಎಲ್ಲಾ

ಪ್ರವೇಶ ದ್ವಾರಗಳಲ್ಲಿಯೂ ಕಾವಲು ಸೈನಿಕರ ಸಂಖ್ಯೆಯನ್ನು ಇಮ್ಮಡಿಗೊಳಿಸಲಾಯಿತು. ಪ್ರತಿ ಹತ್ತು ನಿಮಿಷಗಳಿಗೊಮ್ಮೆ ಸೈನಿಕರ ಗಸ್ತು ಪಡೆಗಳು ಎಲ್ಲಾ ಪ್ರವೇಶದ್ವಾರಗಳನ್ನು ಹಾದು ಹೋಗುತ್ತಿದ್ದವು.

ಬಂದೀಖಾನೆಯನ್ನು ಪ್ರವೇಶಿಸಿದೊಡನೆ ಗಿರೋಡನು ಸೆರೆಯಿಂದ ಪಾರಾಗುವ ಹಂಚಿಕೆಯಲ್ಲಿ ತೊಡಗಿದ. ಮೊದಲು ಜರ್ಮನ್ ಭಾಷೆಯಲ್ಲಿ ಸ್ಪಷ್ಟವಾಗಿ ಮಾತನಾಡುವುದನ್ನು ಅಭ್ಯಾಸ ಮಾಡತೊಡಗಿದ. ಆತನಿಗೆ ಮೊದಲೇ ಅಲ್ಪ ಸ್ವಲ್ಪ ಜರ್ಮನ್ ಭಾಷೆ ಗೊತ್ತಿತ್ತು. ಪ್ರತಿದಿನ ಸಂಜೆ ಬಂದೀಖಾನೆಯ ಮೊಗಸಾಲೆಯಲ್ಲಿ ನಿಂತು ಕೋಟೆಯ ಹೊರಗಿನ ಪ್ರದೇಶವನ್ನು ಗಮನಿಸುತ್ತಾ ಸ್ಥಳ ಪರಿಚಯ ಮಾಡಿಕೊಳ್ಳುತ್ತಿದ್ದ. ಫ್ರಾನ್ಸಿನಿಂದ ಮಿತ್ರರು ಕಳುಹಿಸಿಕೊಡುತ್ತಿದ್ದ ತಿನಿಸುಗಳ ಪೊಟ್ಟಣಗಳಿಗೆ ಕಟ್ಟಿದ ದಾರವನ್ನು ಸಂಗ್ರಹಿಸಿ ಹಗ್ಗವೊಂದನ್ನು ಹೊಸೆದ. ಆದರೆ ಆ ಹಗ್ಗ ತನ್ನ ನೂರ ತೊಂಬತ್ತಾರು ಪೌಂಡುಗಳ ತೂಕವನ್ನು ತಡೆಯಲಾರದೆಂದು ಮನಗಂಡು ನಿರಾಶೆಗೊಂಡ.

ಗಿರೋಡನು ವೃದ್ಧನೂ, ಕುಂಟನೂ ಆಗಿದ್ದುದರಿಂದ ಕೊನಿಂಗ್‌ಸ್ಟೈನ್ನಿನ ಕೋಟೆಯ ಜೈಲರನು ಆತನ ವಿಚಾರದಲ್ಲಿ ಸ್ವಲ್ಪ ನಿರ್ಲಕ್ಷ್ಯದಿಂದಲೇ ಇದ್ದನು. ಗಿರೋಡನು ತನ್ನ ಕುಟುಂಬದವರಿಗೆ ಪತ್ರಗಳನ್ನು ಬರೆಯಲು ಅನುಮತಿ ಕೊಡಲಾಗಿದ್ದಿತು. ಗಿರೋಡನು ತನ್ನ ಪತ್ನಿಗೆ ಆಗಾಗ ಬರೆಯುತ್ತಿದ್ದ ಮುಗ್ಧ ಪತ್ರಗಳಲ್ಲಡಗಿದ್ದ ಸಂಕೇತಗಳ ರಹಸ್ಯ ಜರ್ಮನ್ ಪತ್ರ ಪರೀಕ್ಷಕರಿಗೆ ಯಾವ ಸಂಶಯವನ್ನೂ ಹುಟ್ಟಿಸುತ್ತಿರಲಿಲ್ಲ. ಹೀಗೆ ಆಗಾಗ ಬರೆಯುತ್ತಿದ್ದ ಪತ್ರಗಳಲ್ಲಿಯ ಒಕ್ಕಣೆಯಲ್ಲಿಯ ಸಂಕೇತಗಳ ಮೂಲಕ ಗಿರೋಡನು ಸೆರೆಮನೆಯಿಂದ ಪಾರಾಗುವ ತನ್ನ ಹಂಚಿಕೆಯ ವಿವರಗಳನ್ನು ಹಂತ ಹಂತವಾಗಿ ಹೊರಗೆ ಕಳುಹಿಸಲಾರಂಭಿಸಿದ.

ಫ್ರಾನ್ಸಿನಲ್ಲಿದ್ದ ಅವನ ಗೆಳೆಯರು ಗಿರೋಡನಿಗೆ ಒಂದು ಬಹುಮಾನದ ಪೊಟ್ಟಣವನ್ನು ಕಳುಹಿಸಿದರು. ಗಿರೋಡನಿಗೆ ಅದನ್ನು ತಲುಪಿಸುವ ಮುನ್ನ ಜೈಲರನು ಪೊಟ್ಟಣವನ್ನು ತೆರೆದು ಪರೀಕ್ಷಿಸಿದನು. ಅದರಲ್ಲಿ ಒಂದು ಟೆರಿಲಿನ್ ಹ್ಯಾಟಿದ್ದಿತು. ಅದರೊಳಗೆ ಕುಶಲತೆಯಿಂದ ಅಡಗಿಸಿಟ್ಟಿದ್ದ ನೂರ ಐವತ್ತು ಅಡಿಗಳಷ್ಟು ಉದ್ದದ ಬಲವಾದ ಸಣ್ಣ ತಾಮ್ರದ ತಂತಿಯ ಚಿಕ್ಕ ಸುರುಳಿ ಜೈಲರನ ಕಣ್ಣಿಗೆ ಬೀಳಲಿಲ್ಲ. ತಂತಿಯನ್ನು ಹ್ಯಾಟಿನ ಭಾಗವೆಂಬಂತೆ ಒಳಭಾಗಕ್ಕೆ ಜೋಡಿಸಿ ಹೆಣೆಯಲಾಗಿದ್ದು ಅದರ ಮೇಲೆ ಟೆರಿಲಿನ್ ಬಟ್ಟೆಯ ಕವಚವನ್ನು ಹೊದಿಸಿ ಹೊಲಿಯಲಾಗಿತ್ತು. ಗಿರೋಡನ ಸೆರೆಯಿಂದ ಪಾರಾಗುವ ಯೋಜನೆಯ ಏರ್ಪಾಟುಗಳು ಸಿದ್ಧವಾಗಲು 1940 ರಿಂದ 1941ರ ವರೆಗೆ ಇಡೀ ಒಂದು ವರ್ಷವೇ ಹಿಡಿಯಿತು.

17-4-1942ರ ಪ್ರಾತಃಕಾಲ ಐದು ಗಂಟೆಯ ಸಮಯ. ಸುತ್ತಲಿನ ಪ್ರದೇಶವೆಲ್ಲಾ ಮಂಜಿನಿಂದ ಮುಸುಕಿತ್ತು. ಇಪ್ಪತ್ತು ಗಜಗಳಷ್ಟು ಅಂತರದಲ್ಲಿಯ ವಸ್ತುಗಳೂ ಗೋಚರಿಸುತ್ತಿರಲಿಲ್ಲ. ಗಿರೋಡನು ಬಂದೀಖಾನೆಯ ಮೊಗಸಾಲೆಯಲ್ಲಿ ನಿಂತು ಗಸ್ತಿನ ಸೈನಿಕರು ತನ್ನ ಕೋಣೆಯ ಮುಂದೆ ಹಾದು ಹೋಗುವುದನ್ನೇ ನಿರೀಕ್ಷಿಸುತ್ತಿದ್ದ. ಅವನು ನಡುವಿಗೆ ಚಾಕೋಲೇಟ್ ಮತ್ತು ಬಿಸ್ಕತ್ತಿನ ಪೊಟ್ಟಣಗಳನ್ನು ಬಿಗಿದುಕೊಂಡಿದ್ದ. ಟೆರಿಲಿನ್ ಹ್ಯಾಟ್ ಮತ್ತು ಮಳೆಯ ಕೋಟೊಂದು ಸೊಂಟದಿಂದ ನೇತಾಡುತ್ತಿದ್ದುವು. ಗಸ್ತಿನ ಸೈನಿಕರು ಬಂದೀಖಾನೆಯ ಪ್ರವೇಶದ್ವಾರದ ಮುಂದೆ ಹಾದು ಹೋದ ಒಡನೆಯೇ ಗಿರೋಡನು ತಾನು ಹೊಸೆದಿದ್ದ ಹ್ಯಾಟಿನ ತಂತಿಯ ಹಗ್ಗವನ್ನು ಮೊಗಸಾಲೆಯ ಕಟಾಂಜನವೊಂದಕ್ಕೆ ಬಲವಾಗಿ ಬಿಗಿದು ನೂರೈವತ್ತು ಅಡಿಗಳ ಆಳದ ಮಹಾಪ್ರಪಾತದತ್ತ ಕಣ್ಣು ಮುಚ್ಚಿಕೊಂಡು ಸರಸರನೆ ಇಳಿಯತೊಡಗಿದ. ಅವನು ಕೈಗಳಿಗೆ ಕೈಚೀಲಗಳನ್ನು ತೊಟ್ಟಿದ್ದರೂ ಅಂಗೈ ಚರ್ಮ ಕಿತ್ತು ರಕ್ತ ಒಸರತೊಡಗಿತು. ಅವನ ಬೆರಳಲ್ಲಿದ್ದ ಮದುವೆಯ ಉಂಗುರ ಒತ್ತಿ ವೇದನೆ ಕೊಡಲಾರಂಭಿಸಿದಾಗ, ಅದನ್ನು ತೆಗೆದು ಜೇಬಿಗೆ ಹಾಕುವ ಪ್ರಯತ್ನದಲ್ಲಿದ್ದಾಗ ಕೆಳಗೆ ಬಂಡೆಯ ಸಂದಿನಲ್ಲಿ ಬಿದ್ದು ಕಾಣೆಯಾಯಿತು. ಮೇಲಿನಿಂದ ನೇತಾಡುತ್ತಾ ಇಳಿಯುವಾಗ ಅವನ ಶರೀರ ಗುಡ್ಡದ ಮೈಯಿಂದ ಹೊರಚಾಚಿಕೊಂಡಿದ್ದ ಕೋಡುಗಲ್ಲೊಂದಕ್ಕೆ

ಬಿಡಿದಾಗ ಯುದ್ಧದಲ್ಲಾದ ಅವನ ಹಳೆಯ ಗಾಯುಗಳು ಮರಣಯಾತನೆಯನ್ನು ಕೊಡ ಲಾರಂಭಿಸಿದವು. ಆದರೂ ಅದ್ಭುತ ಮನಃ ಸ್ಥೈರ್ಯದಿಂದ ಗಿರೋಡನು ಸುರಕ್ಷಿತವಾಗಿ ನೆಲಕ್ಕಿಳಿದನು.

ಗಿರೋಡನು ನೆಲವನ್ನು ಮುಟ್ಟಿದೊಡನೆ ಕುಂಟುತ್ತಾ ಸ್ವಲ್ಪ ದೂರ ನಡೆದು ಪೊದೆ ಯೊಂದರ ಮರೆಯಲ್ಲಿ ಕುಳಿತು ತನ್ನ ಗಿರಿಜಾ ಮೀಸೆಯನ್ನು ಬೋಳಿಸಿ ಹಾಕಿ, ತಾನು ಸೆರೆ ಸಿಕ್ಕಿದ್ದಾಗ ತೊಟ್ಟಿದ್ದ ಜನರಲ್ ಹುದ್ದೆಯ ಸಮವಸ್ತ್ರಗಳನ್ನು ತೆಗೆದು ಚೆಲ್ಲಿ ಸೊಂಟದ ಲ್ಲಿದ್ದ ಮಳೆಯ ಕೋಟನ್ನು ತೊಟ್ಟು ತಲೆಗೆ ಟೆರಿಲಿನ್ ಹ್ಯಾಟನ್ನು ಧರಿಸಿದ. ಎರಡು ಗಂಟೆ ಗಳ ಕಾಲ ಸತತವಾಗಿ ನಡೆದಾಗ ಸ್ಟಾಂಡೋ ಎಂಬ ಹಳ್ಳಿಯ ಬಳಿಯಿದ್ದ ಸೇತುವೆಯ ಹತ್ತಿರ ಬಂದ. ಸೇತುವೆಯ ಕಂಬವೊಂದಕ್ಕೆ ಒರಗಿ ಕೊಂಡು ಹಿಂದೆ ಏನೂ ನಡೆಯದವನಂತೆ ಉದ್ವೇಗರಹಿತನಾಗಿ ತನ್ನ ನಡುವಿನಲ್ಲಿದ್ದ ಪೊಟ್ಟಣವನ್ನು ಬಿಚ್ಚಿ ಅದರೊಳಗಿನ ಬಿಸ್ಕತ್ತು ಗಳನ್ನು ತಿಂದು ಮುಗಿಸಿದ.

ಒಂದು ಗಂಟೆಗೆ ಸರಿಯಾಗಿ ಪೂರ್ವಸಿದ್ಧತೆ ಯಂತೆ ಸಣಕಲು ಶರೀರದ ಒಬ್ಬ ಯುವಕ ಗಿರೋಡನು ಧರಿಸಿದಂತಹ ಟೆರಿಲಿನ್ ಹ್ಯಾಟೊಂದನ್ನು ಧರಿಸಿ ಕೈಯಲ್ಲಿ ಸೂಟ್ ಕೇಸೊಂದನ್ನು ಹಿಡಿದು ಸೇತುವೆಯ ಬಳಿ ಅಡ್ಡಾಡಲಾರಂಭಿಸಿದಾಗ ಗಿರೋಡನು ಅವ ನನ್ನು ಗುರುತಿಸಿ ಅವನ ಜೊತೆ ಸೇರಿದ. ಗಿರೋಡನ ಗೆಳೆಯರು ಆ ತರುಣನನ್ನು ಅವನ ಸಹಾಯಕ್ಕಾಗಿ ಫ್ರಾನ್ಸಿನಿಂದ ಕಳುಹಿಸಿದ್ದರು. ಗಿರೋಡನು ಆ ತರುಣನೊಡಗೂಡಿ ಹತ್ತಿರ ದಲ್ಲಿಯ ರೈಲ್ವೆ ನಿಲ್ದಾಣಕ್ಕೆ ಹೋಗಿ ಆಗಿನ್ನೂ ಹೊರಡಲಿದ್ದ ರೈಲೊಂದನ್ನು ಹತ್ತಿದನು. ಆ ತರುಣನ ಕೈಯಲ್ಲಿಯ ಸೂಟ್‌ಕೇಸನ್ನು ತೆಗೆದು ಕೊಂಡು ಗಿರೋಡನು ಬೋಗಿಯಲ್ಲಿಯ ಶೌಚ ಗೃಹವನ್ನು ಪ್ರವೇಶಿಸಿದನು. ಹಲವು ನಿಮಿಷ ಗಳ ನಂತರ ಶೌಚಗೃಹದಿಂದ ಗೌರವಾನ್ವಿತ ವ್ಯಕ್ತಿಯಂತೆ ಕಾಣುವ ಜರ್ಮನ್ ವಣಿಕ ನೊಬ್ಬನು ಹೊರಬಿದ್ದನು.

ಗಿರೋಡನು ಕೊನಿಂಗ್‌ಸ್ಟೆನ್ ಕೋಟೆಯಿಂದ ಪಾರಾದ ಹಲವಾರು ಗಂಟೆಗಳಲ್ಲಿ ಜರ್ಮ ನಿಯ ಎಲ್ಲಾ ಗಡಿಗಳಲ್ಲಿಯೂ ಪಹರೆಯ ಸೈನಿಕರನ್ನು ಎಚ್ಚರಗೊಳಿಸಲಾಯಿತು. ದೇಶಾ ದ್ಯಂತ ಗೆಸ್ಟಪೊಗಳು (ಜರ್ಮನ್ ಗೂಢಚರರು) ಗಿರೋಡನ ಶೋಧನೆಯಲ್ಲಿ ನಿರತರಾದರು. ಸತತವಾಗಿ ರೈಲಿನಲ್ಲಿ ಪ್ರಯಾಣ ಮಾಡುವು ದರ ಮೂಲಕ ಮಾತ್ರ ಗಿರೋಡನು ಜರ್ಮನರಿಂದ ತಪ್ಪಿಸಿ ಕೊಳ್ಳುವ ಸಾಧ್ಯತೆ ಇದ್ದಿತು. ಗಿರೋಡನು ಜರ್ಮನಿಯ ಮೂಲಕ ಒಂದು ವಾರ ಕಾಲ ರೈಲಿನಲ್ಲಿ ನಿರಂತರವಾಗಿ ಪ್ರಯಾಣ ಮಾಡಿದ.

ಒಂದು ಸಲ ಪ್ರಯಾಣ ಕಾಲದಲ್ಲಿ ಸ್ಟೂಗರ್ಟಿನ ರೈಲ್ವೆ ನಿಲ್ದಾಣದಲ್ಲಿ ಗೆಸ್ಟಪೊಗಳು ಬೋಗಿ ಗಳಲ್ಲಿಯ ಪ್ರಯಾಣಿಕರ ಎತ್ತರ ಮತ್ತು ಗುರುತಿನ ಪತ್ರಗಳನ್ನು ಹದ್ದಿನ ಕಣ್ಣಿನಿಂದ ಪರೀಕ್ಷಿಸಲಾರಂಭಿಸಿದರು. ಗಿರೋಡನು ತನ್ನ ವೇಷವನ್ನು ಬದಲಿಸಿಕೊಂಡಿದ್ದರೂ ತನ್ನ ಆರಡಿ ಎತ್ತರವನ್ನು ಮರೆಸಿಕೊಳ್ಳುವ ಹಾಗಿರ ಲಿಲ್ಲ. ಅವನು ಆಫ್ರಿಕನ್ ಕೋರಿನ್ (ಆಫ್ರಿಕ ದಲ್ಲಿ ಹೋರಾಡುತ್ತಿದ್ದ ಜನರಲ್ ರೊಮೆಲ್ಲನ ನಾಯಕತ್ವದ ಸೇನಾ ವಿಭಾಗ) ತರುಣ ಜರ್ಮನ್ ಲೆಫ್ಟಿನೆಂಟನೊಬ್ಬನ ಎದುರಿನಲ್ಲಿ ಕುಳಿತು ಅವನೆಡೆ ಮುಗುಳ್ನಕ್ಕು, ತಾನೂ ಆಫ್ರಿಕ ದಲ್ಲಿ ಬಹಳ ಕಾಲ ನೆಲೆಸಿದ್ದುದಾಗಿ ಹೇಳಿ ಕೊಂಡು ಪರಿಚಯ ಮಾಡಿಕೊಂಡ.

ಆಫ್ರಿಕವನ್ನು ಕಂಡಿದ್ದ ಗಿರೋಡನೊಂದಿಗೆ ಆ ಜರ್ಮನ್ ಲೆಫ್ಟಿನೆಂಟ್ ಅತಿ ಉತ್ಸಾಹದಿಂದ ಸಂಭಾಷಿಸತೊಡಗಿದ. ಅವನು ಜರ್ಮನ್ ಲೆಫ್ಟಿನೆಂಟನೊಂದಿಗೆ ಆಫ್ರಿಕ ಮರುಭೂಮಿ ಯಲ್ಲಿ ಹೇಗೆ ರೊಮೆಲ್ಲನು ಬ್ರಿಟಿಷರನ್ನು ಮಣ್ಣು ಮುಕ್ಕಿಸಬಹುದೆಂದು ರಸವತ್ತಾಗಿ ವಿವರಿಸುತ್ತಿರುವಾಗ, ಲೆಫ್ಟಿನೆಂಟ್ ಏಕಾಗ್ರ ಚಿತ್ತದಿಂದ ಅವನ ಮಾತುಗಳನ್ನು ಕೇಳುತ್ತಿದ್ದ. ಆ ಸಮಯದಲ್ಲಿ ಅಲ್ಲಿಗೆ ಬಂದ ಗೆಸ್ಟಪೊ ಗೂಢಚಾರಿಯೊಬ್ಬ ಗಿರೋಡನ ಭುಜ ಅಲು ಗಿಸಿ, "ಮಹಾಶಯ, ತಮ್ಮ ಪ್ರಯಾಣದ ಗುರು ತಿನ ಪತ್ರವನ್ನು ತೋರಿಸೋಣವಾಗಲಿ", ಎಂದಾಗ ಗಿರೋಡನ ವಿವರಣೆಗಳನ್ನು ಆಸಕ್ತಿ ಯಿಂದ ಆಲಿಸುತ್ತಿದ್ದ ಜರ್ಮನ್ ಲೆಫ್ಟಿನೆಂಟ ನಿಗೆ ಉಗ್ರವಾದ ಕೋಪ ಬಂತು. "ನಮ್ಮ ನಡುವೆ ಬಾಯಿ ಹಾಕಲು ನಿನಗೆಷ್ಟು ಧೈರ್ಯ!

ತೊಲಗು ಇಲ್ಲಿಂದ," ಎಂದು ಗದರಿಸಿದಾಗ ಗೂಢಚಾರಿ ಗಿರೋಡನ ಕ್ಷಮಾಪಣೆ ಕೇಳಿ ತಲೆ ತಗ್ಗಿಸಿಕೊಂಡು ಹೊರಟು ಹೋದ.

ಮತ್ತೊಂದು ಸಂದರ್ಭದಲ್ಲಿ ನಿಲ್ದಾಣವೊಂದರಲ್ಲಿ ರೈಲನ್ನು ಹತ್ತುವ ಪ್ರತಿಯೊಬ್ಬ ಪ್ರಯಾಣಿಕನನ್ನೂ ಗೆಸ್ಟಪೋಗಳು ತನಿಖೆ ಮಾಡುತ್ತಿದ್ದುದನ್ನು ಕಂಡು ಮತ್ತೆ ನಿಲ್ದಾಣದ ಪ್ಲಾಟ್‌ಫಾರಂನ ಮೇಲೆ ರೈಲು ಹೊರಡುವವರೆಗೂ ಗಿರೋಡನು ಅಡ್ಡಾಡತೊಡಗಿದ. ರೈಲು ವೇಗವಾಗಿ ಚಲಿಸಲಾರಂಭಿಸಿದೊಡನೆ ಗಿರೋಡನು ಮನಃಸ್ಥೈರ್ಯದಿಂದ ಸ್ವಲ್ಪವೂ ಕುಂಟದೆ ಗಾಡಿಯನ್ನು ಹತ್ತಲು ಓಡಲಾರಂಭಿಸಿದ. ಅವನ ಕನ್ನಡಕ ಅಲ್ಲಾಡತೊಡಗಿತು. ಓಡಿದ ಆಯಾಸಕ್ಕೆ ಉಬ್ಬಸ ಬಂದು ಅವನ ಮೂಗಿನ ಹೊಳ್ಳೆಗಳು ತಿದಿಯಂತೆ ಒತ್ತತೊಡಗಿದವು. ತಪ್ಪಿ ಹೋಗಲಿದ್ದ ರೈಲನ್ನು ಆತುರದಿಂದ ಹಿಡಿಯಲು ಓಡಿಬರುತ್ತಿದ್ದ ಜರ್ಮನ್ ವ್ಯಾಪಾರಿಯ ಲಕ್ಷಣಗಳೆಲ್ಲವೂ ಆಗ ಗಿರೋಡನಲ್ಲಿದ್ದವು. ಬೋಗಿಯಲ್ಲಿದ್ದ ಗೂಢಚಾರಿಯೊಬ್ಬ ಈ ವೃದ್ಧ ಮಹಾಶಯನಿಗೆ ಗಾಡಿಯನ್ನು ಹತ್ತಲು ಸಹಾಯ ಮಾಡಿದ.

ಕೊನೆಗೆ ಗಿರೋಡನು ಜರ್ಮನಿಯಿಂದ ಜರ್ಮನ್ ಆಕ್ರಮಿತ ಫ್ರಾನ್ಸನ್ನು ತಲುಪಿದನು. ಅಲ್ಲಿಂದ ಗಡಿಯನ್ನು ದಾಟಿ ಇನ್ನೂ ಸ್ವತಂತ್ರವಾಗಿ ಉಳಿದಿದ್ದ ಫ್ರಾನ್ಸಿಗೆ ನುಸುಳಲು ಗಿರೋಡನಿಗೆ ಸಾಧ್ಯವಾಗಲಿಲ್ಲ. ಜರ್ಮನ್ ಕಾವಲು ಸೈನಿಕರು ಫ್ರಾನ್ಸಿನ ಗಡಿಯ ಬಳಿ ಬರುತ್ತಿದ್ದ ಐದು ಅಡಿ ಹನ್ನೊಂದು ಇಂಚು ಎತ್ತರವಿದ್ದ ಪ್ರತಿಯೊಬ್ಬರನ್ನೂ ಹಿಡಿದುಕೊಂಡು ಬಂದು ತನಿಖಾಧಿಕಾರಿಯ ಬಳಿ ಬಿಡುತ್ತಿದ್ದರು. ಇದರಿಂದ ಉತ್ಸಾಹಗುಂದಿದ ಗಿರೋಡನು ಕಟ್ಟ ಕಡೆಯ ಪ್ರಯತ್ನವೆಂದು ಮತ್ತೆ ರೈಲಿನಲ್ಲಿ ಆಗ್ನೇಯ ಜರ್ಮನಿಯ ಮೂಲಕ ಸ್ವಿಸ್ ಸರಹದ್ದನ್ನು ತಲುಪಿದ. ಆದರೆ ಅಲ್ಲೂ ಜರ್ಮನ್ ಸೈನಿಕರ ಹದ್ದಿನ ಕಣ್ಣುಗಳನ್ನು ತಪ್ಪಿಸಿ ಸ್ವಿಸ್ ಪ್ರದೇಶದೊಳಗೆ ನುಸುಳುವ ತಂತ್ರ ಫಲಿಸಲಿಲ್ಲ. ಆದರೆ ಹಲವೆಡೆ ಜರ್ಮನಿ ಮತ್ತು ಸ್ವಿಡ್ಜರ್‌ಲೆಂಡಿನ ನಡುವಿನ ಗಡಿಯಲ್ಲಿ ಹಲವಾರು ಮೈಲುಗಳ ವರೆಗೆ ಹಬ್ಬಿದ್ದ ಎತ್ತರವಾದ ಪರ್ವತಶ್ರೇಣಿಯನ್ನು ಸಂಪೂರ್ಣವಾಗಿ ಪಹರೆಮಾಡಲು ಸಾಧ್ಯವಿರಲಿಲ್ಲ. ಕಟ್ಟಕಡೆಗೆ ಅದೃಷ್ಟದ ಮೇಲೆ ಭಾರ ಹಾಕಿ ಗಿರೋಡನು ಒಂದು ರಾತ್ರಿ ಎಚ್ಚರಿಕೆಯಿಂದ ಪರ್ವತಗಳ ಹಾದಿಯಲ್ಲಿ ನಡೆಯತೊಡಗಿದ. ಬೆಳಗಿನ ಜಾವದ ಸಮಯ. ಗಿರೋಡನು ಒಂದು ಕಡಿದಾದ ಶಿಖರವನ್ನು ಹತ್ತುತ್ತಿದ್ದ. ಎಲ್ಲಿಂದಲೋ ಬಂದ ಮೂವರು ಸೈನಿಕರು ಅವನನ್ನು ಸುತ್ತುವರಿದರು. ಗಿರೋಡನಿಗೆ ಗಾಬರಿಯಾಯಿತು. ಜರ್ಮನ್ ಸೈನಿಕರ ಕೈಗೆ ಸಿಕ್ಕಿಬಿದ್ದನೆಂದುಕೊಂಡ ಆತ ತನ್ನ ಅದೃಷ್ಟವನ್ನು ಹಳಿದುಕೊಳ್ಳಲಾರಂಭಿಸಿದ. ಆದರೆ ಆಗ ಅವನಿಗೆ ಅಚ್ಚರಿಯೊಂದು ಕಾದಿತ್ತು. ತನ್ನನ್ನು ಸುತ್ತುವರಿದ ಸೈನಿಕರು ಫ್ರೆಂಚ್ ಭಾಷೆಯಲ್ಲಿ ಮಾತನಾಡಿದುದು ಅವನ ಅಚ್ಚರಿಗೆ ಕಾರಣವಾಗಿತ್ತು. ಅವರು ಸ್ವಿಸ್ ಸೈನಿಕರಾಗಿದ್ದರು. ತಾನು ಸುರಕ್ಷಿತವಾದ ನೆಲೆಯನ್ನು ಸೇರಿದೆನೆಂದು ಗಿರೋಡನು ನೆಮ್ಮದಿಯ ನಿಟ್ಟುಸಿರು ಬಿಟ್ಟ.

ಕೊನೆಗೆ ಸ್ವಿಡ್ಜರ್‌ಲೆಂಡಿನಿಂದ ಜನರಲ್ ಹೆನ್ರಿ ಗಿರೋಡನು ತನ್ನ ತಾಯ್ನಾಡಿನ ಗಡಿಯನ್ನು ತಲುಪಿದ. 1914ರಲ್ಲಿ ಪ್ರಥಮ ವಿಶ್ವ ಸಮರದಲ್ಲಿ ಜರ್ಮನರ ಸೆರೆಯಿಂದ ಪಾರಾಗಿ ಸುರಕ್ಷಿತವಾಗಿ ಹಾಲೆಂಡನ್ನು ತಲುಪಿದಾಗ ಗಿರೋಡನು ತನ್ನ ಹೆಂಡತಿಗೆ ಒಂದು ತಂತಿ ಸಂದೇಶವನ್ನು ಕಳುಹಿಸಿದ್ದ ನೆನಪು ಮರುಕಳಿಸಿತು. ಆ ತಂತಿಯ ಸಂದೇಶ ಹೀಗಿದ್ದಿತು. "ವ್ಯಾಪಾರ ಮುಗಿಯಿತು. ಉತ್ತಮ ಆರೋಗ್ಯ- ಪ್ರೀತಿಯ ಹೆನ್ರಿ."

ಸ್ವಿಡ್ಜರ್‌ಲೆಂಡಿನಿಂದ ಫ್ರೆಂಚ್ ಗಡಿಯನ್ನು ತಲುಪಿದೊಡನೆ ಹೆನ್ರಿ ಗಿರೋಡನು ಅಂತಹುದೇ ಮತ್ತೊಂದು ತಂತಿ ಸಂದೇಶವನ್ನು ತನ್ನ ಹೆಂಡತಿಗೆ ತಂತಿ ಕಛೇರಿಯಿಂದ ಕಳುಹಿಸಿದ. "ವ್ಯಾಪಾರ ಮುಗಿಯಿತು, ಅತ್ಯುತ್ತಮ ಆರೋಗ್ಯ- ಪ್ರೀತಿಯ ಹೆನ್ರಿ."

ಅನಂತರ ಜನರಲ್ ಹೆನ್ರಿ ಹೊನೋರ್ ಗಿರೋಡನು ಫ್ರೆಂಚ್ ಉತ್ತರ ಆಫ್ರಿಕದಲ್ಲಿ ಟ್ಯೂನಿಶಿಯಾದ ಬಳಿ ಜರ್ಮನ್ ಸೇನೆಯ ವಿರುದ್ಧ ತನ್ನ ಕೈಕೆಳಗಿನ ಫ್ರೆಂಚ್ ಪಡೆಯನ್ನು ಮುನ್ನಡೆಸಿ ಯಶಸ್ವಿಯಾಗಿ ಹೋರಾಡಿ ಜರ್ಮನ್ ಸೇನೆಯನ್ನು ಧೂಳೀ ಪಟ ಮಾಡಿದ. ●



# ತುಸು ನನ್ನದು...

(ಪು.ಲ. ಅವರನ್ನು ಕುರಿತಂತೆ)

ಮೂಲ ಮರಾಠಿ: ಜಯವಂತ ದಳವಿ

ಕನ್ನಡಾನುವಾದ: ವಿರೂಪಾಕ್ಷ ಕುಲಕರ್ಣಿ

ಪು.ಲ. ಅವರಿಗೆ ಈಗ ಎಪ್ಪತ್ತು. ಹತ್ತು ವರ್ಷದ ಹಿಂದೆ ಅವರ ಅರವತ್ತರ ಹುಟ್ಟುಹಬ್ಬದ ಹೊತ್ತಿಗೆ ಜಯವಂತ ದಳವಿ ಬರೆದ ಲೇಖನವಿದು.

(ಪು.ಲ. ಚಿತ್ರಕೃಪೆ: ಡಾ. ಎಸ್.ಎಸ್. ಗೋರೆ, ಹುಬ್ಬಳ್ಳಿ)

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗವು ಕನ್ನಡ-ಮರಾಠಿಗೆ ಸಂಬಂಧಿಸಿದಂತೆ ಪರಸ್ಪರ ಕೊಡುಪಡೆಯ ಹಲವು ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಕಳೆದ ನಾಲ್ಕೈದು ವರ್ಷಗಳಿಂದ ನಡೆಸಿಕೊಂಡು ಬಂದಿದೆ. ಕನ್ನಡದ ಹಲವು ಕೃತಿಗಳು ಮರಾಠಿಗೆ ಅನುವಾದಗೊಂಡು ಪ್ರಕಟವಾಗಿವೆ. ಎರಡೂ ರಾಜ್ಯಗಳ ಸ್ಥಳ ನಾಮಗಳ ತೌಲನಿಕ ಅಭ್ಯಾಸ ನಡೆಯುತ್ತಲಿದೆ. ಪ್ರಕೃತ ಮರಾಠೀ ಲೇಖಕರನ್ನು ಕನ್ನಡಿಗರಿಗೆ ಪರಿಚಯಿಸುವ ದೃಷ್ಟಿಯಿಂದ "ಪು.ಲ. ದೇಶಪಾಂಡೆ- ವ್ಯಕ್ತಿ ಮತ್ತು ವಾಙ್ಮಯ" ಎಂಬ ಗ್ರಂಥವನ್ನು ಕನ್ನಡ ವಿಭಾಗವು ಸಿದ್ಧಗೊಳಿಸಿದೆ.

ಈ ಗ್ರಂಥದಲ್ಲಿ ಪು.ಲ. ದೇಶಪಾಂಡೆ ಅವರ ಹರಟೆ, ಕತೆ, ಏಕಾಂಕ, ವೈಚಾರಿಕ ಬರಹ, ವ್ಯಕ್ತಿ ಚಿತ್ರ ಇವುಗಳ ಆಯ್ದ ಲೇಖಗಳಿವೆ. ಪು.ಲ. ಅವರೊಡನೆ ಸುದೀರ್ಘ ಸಂದರ್ಶನವಿದೆ. ಜೊತೆಗೆ ನಮ್ಮ ಪುಸ್ತಕ ಸಂಗ್ರಹದಲ್ಲಿ ಪ್ರಕಟಿಸಲಿರುವ ಬರಹ ಪ್ರಮುಖವಾಗಿ ಸೇರಿದೆ. ಈ ಗ್ರಂಥದ ಸಂಪಾದಕರು ಅ.ರಾ. ತೋರೊ ಮತ್ತು ವಿರೂಪಾಕ್ಷ ಕುಲಕರ್ಣಿಯವರು.

ಏಪ್ರಿಲ್ 9 ರಂದು ಈ ಗ್ರಂಥದ ಬಿಡುಗಡೆ- ಶ್ರೀ ಗಿರೀಶ್ ಕಾರ್ನಾಡ ಅವರ ಅಧ್ಯಕ್ಷತೆಯಲ್ಲಿ. ಕನ್ನಡ ಮರಾಠಿ ಆದಾನ-ಪ್ರದಾನ ಯೋಜಕರೂ ಈ ಗ್ರಂಥದ ಕಾರಣಕರ್ತರೂ ಆದ ಡಾ|| ಶ್ರೀನಿವಾಸ ಹಾವನೂರರು ಅದನ್ನು ಪ್ರಕಟಣ ಪೂರ್ವದಲ್ಲಿಯೇ ನಮ್ಮ 'ಪುಸ್ತಕ ಸಂಗ್ರಹ'ಕ್ಕಾಗಿ ಒದಗಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಪು.ಲ. ದೇಶಪಾಂಡೆ ಅವರ ಹಲವಾರು ಬರಹಗಳನ್ನು 'ಕಸ್ತೂರಿ'ಯು ಈಗಾಗಲೇ ಪ್ರಕಟಿಸಿದೆ. ನಮ್ಮ ಓದುಗರಿಗೆ ಅವರ ಬಗ್ಗೆ ಹೆಚ್ಚು ಹೇಳಬೇಕಾದ ದ್ದಿಲ್ಲ. ಆ ಮಹಾನ್ ಲೇಖಕನಿಗೆ ಪುಣೆ, ಮುಂಬಯಿ ನಗರಗಳ ಕನ್ನಡಿಗರು ಗೌರವ ಸಲ್ಲಿಸುತ್ತಿರುವ ಈ ಸಂದರ್ಭದಲ್ಲಿ 'ಕಸ್ತೂರಿ'ಯು ಪರ್ಯಾಪ್ತವಾಗಿ ಪಾಲ್ಗೊಳ್ಳುತ್ತಲಿರುವ ಸಂತೋಷ ನಮ್ಮದಾಗಿದೆ.

ಸಂಪಾದಕ

ಈ ಮುನ್ನುಡಿ ಒಂದು ಸ್ವಗತವಿದ್ದಂತೆ. ಎಂದಿನ ಮುನ್ನುಡಿಯಲ್ಲ ಇದು. ಮರಾಠಿಯ ಹಾಸ್ಯ ಸಾಹಿತ್ಯದಲ್ಲಿ ಪು.ಲ. ದೇಶಪಾಂಡೆಯ ವರ ಸ್ಥಾನ ಯಾವುದು? ಎಂದಾಗಲಿ, ಅವರ ನಗೆ ಬರಹವನ್ನೋದಿದ ಹಿಂದಿನ ಕಾಲದ ಯಾವ ಯಾವ ವ್ಯಕ್ತಿಗಳು ನೆನಪಾಗುತ್ತಾರೆ? ಎಂದಾ ಗಲಿ ಕಂಡುಕೊಂಡ ಒಬ್ಬ ಪ್ರಾಧ್ಯಾಪಕನಂತೆ ಬರೆಯಹೊರಟಿಲ್ಲ ನಾನು. ನನ್ನಿಂದ ಹಾಗೆ ಬರೆಯಲೂ ಆಗದು. ಈ ನನ್ನ ಸ್ವಗತ ದಿಂದಾಗಿ ಇನ್ನೊಮ್ಮೆ ಪು.ಲ. ದೇಶಪಾಂಡೆ ಯವರತ್ತ ಹೊರಳಿ ನೋಡುವ ಯತ್ನ ನನ್ನದು.

ಮೊದಲಿನಿಂದಲೂ ನನ್ನಲ್ಲಿ ಪು.ಲ. ದೇಶ ಪಾಂಡೆಯವರನ್ನು ಕುರಿತು ಒಂದು ಆಕರ್ಷಣೆ ಇದೆ. ನಾನು ಅವರ ಭಕ್ತನಲ್ಲ. ಹಿರಿಯ ಸಾಹಿತಿ, ಸಮೀಕ್ಷಕರಾದ ಪ್ರಾ. ಮಂಗೇಶ ವಿಠ್ಠಲ ರಾಜಾಧ್ಯಕ್ಷ, ಮಿತ್ರರಾದ ನಂದಾ ನಾರಳ ಕರ ಇಲ್ಲವೆ ಹಿಂದೂಸ್ಥಾನೀ ಗಾಯಕ ಪಂಡಿತ ವಸಂತರಾವ್ ದೇಶಪಾಂಡೆಯವರಂತೆ ಪು.ಲ. ಅವರ ನಿಕಟವರ್ತಿಯೂ ನಾನಲ್ಲ. ಹಲವಾರು ಬಾರಿ ಬಾಳಿನ ಬೇರೆ ಕ್ಷೇತ್ರಗಳ ಬೇರೆ ಬೇರೆ ಜನ ನಮ್ಮನ್ನು ಆಕರ್ಷಿಸುವುದುಂಟು. ಅವರಲ್ಲಿ ಸಾಹಿತಿಗಳು, ರಾಜಕೀಯ ಧುರೀಣರು,

ಸಮಾಜದ ನೇತಾರರು ಇರುತ್ತಾರೆ. ಕಾಲ ಸರಿದಂತೆ ಈ ಕ್ರಮದಲ್ಲಿ ವ್ಯತ್ಯಾಸವಾಗುವುದೂ ಉಂಟು. ಇಂತಹ ವ್ಯಕ್ತಿಗಳ ಹತ್ತಿರಕ್ಕೆ ಹೋಗುವ ಅವಕಾಶ ದೊರೆತು ಅವರ ಪರಿಚಯ ದಟ್ಟವಾಗುತ್ತ ಬಂದಂತೆ ಅವರ ಬಗೆಗಿನ ನಮ್ಮಲ್ಲಿಯ ಆಕರ್ಷಣೆ ಕಡಿಮೆಯಾಗಲೂ ಬಹುದು. ಹಲವರ ಬಗೆಯಲ್ಲಿಯ ನನ್ನ ಅನುಭವ ಇದಾಗಿದೆ. ಪು.ಲ. ಅವರ ಸಂದರ್ಭದಲ್ಲಿ ಮಾತ್ರ ಇದಕ್ಕೆ ವಿಪರೀತವಾದ ಅನುಭವ ನನ್ನದು. 1942 ರಿಂದಲೂ ಪು.ಲ. ಅವರನ್ನು ಕೇಳಿ ಬಲ್ಲೆ. ಅವರೊಂದಿಗಿನ ಪರಿಚಯ ಮಾತ್ರ ತೀರ ತರುವಾಯದ್ದು. ಎಂದಿನಿಂದಲೂ ಅವರ ಸಾಹಿತ್ಯವನ್ನು ಓದುತ್ತ ಬಂದಿದ್ದೇನೆ. ಅದರಲ್ಲಿ ಹಿಡಿಸಿದ್ದೂ ಹಿಡಿಸದೆ ಇದ್ದದ್ದೂ ಇದೆ. ಹಲವರೊಂದಿಗೆ ಅವರು ಹೂಡಿದ ವಾದ ವಿವಾದಗಳು ಕಟೆದ ಶಬ್ದಗಳ ಚಕಮಕಿಗಳನ್ನು ಕಂಡು ಸೋಜಿಗಪಟ್ಟಿದ್ದೇನೆ. ಆದರೆ ಇಷ್ಟೆಲ್ಲ ಕಳೆದು ಕೂಡಿಸುವ ಲೆಕ್ಕಾಚಾರದ ತರುವಾಯವೂ ಒಬ್ಬ ಬರಹಗಾರನಾದ, ಅದಕ್ಕೂ ಹೆಚ್ಚಿಗೆ ಒಬ್ಬ ಮಾನವನಾದ, ಈ ವ್ಯಕ್ತಿಯನ್ನು ಕುರಿತಾದ ನನ್ನಲ್ಲಿಯ ಆಕರ್ಷಣೆ ಕಳೆದ ಮೂವತ್ತೆಂಟು ವರ್ಷಗಳಿಂದ ಉಳಿಯಿ ತಷ್ಟೇ ಅಲ್ಲ, ಇಂದಿಗೂ ಬೆಳೆಯುತ್ತಲೇ ಇದೆ!

ಕಳೆದ ವರ್ಷ ಮುಂಬಯಿಯ ದೂರದರ್ಶನದಲ್ಲಿ ಪು.ಲ. ಅವರ ಒಂದು ಸಂದರ್ಶನ ಕಾರ್ಯಕ್ರಮವಿತ್ತು. ಅದನ್ನು ಎರಡು ಭಾಗಗಳಲ್ಲಿ ತೋರಿಸಲಾಯಿತು. ಸಂದರ್ಶನವನ್ನು ಪಡೆಯುವವರಲ್ಲಿ ನಾನು ಮತ್ತು ಪು.ಲ. ಅವರ ಮಿತ್ರರೂ ಚಲನಚಿತ್ರ ಕ್ಷೇತ್ರದ ಅವರ ಹಳೆಗಾಲದ ಸಂಗಡಿಗರೂ ಆದ ರಾಮುಗಬಾಲೆ ಇದ್ದೆವು. ನಾನು ಅದೆಷ್ಟೋ ಪ್ರಶ್ನೆಗಳನ್ನು ಸಿದ್ಧಪಡಿಸಿದ್ದೆ. ಅದಕ್ಕಾಗಿ ವಾ.ಲ. ಕುಲಕರ್ಣಿ. ಶ್ರೀ ಪು. ಭಾಗವತ, ಮಂಗೇಶ ವಿಠ್ಠಲ ರಾಜಾಧ್ಯಕ್ಷ, ಅವರ ಮಡದಿ ಪ್ರೊ. ವಿಜಯಾ ರಾಜಾಧ್ಯಕ್ಷ, ಶಂಕರ ಸಾವಡಾರಂಥವರೊಂದಿಗೂ ಚರ್ಚಿಸಿದ್ದೆ. ತರುವಾಯ ಪು.ಲ. ಅವರ ಇಡಿಯ ಸಾಹಿತ್ಯವನ್ನೆಲ್ಲ ಇನ್ನೊಮ್ಮೆ ಓದಿ ತೆಗೆದೆ. ಕೆಲವನ್ನಂತೂ ಸುಮಾರು ಇಪ್ಪತ್ತು ಇಪ್ಪತ್ತೈದು ವರ್ಷಗಳ ತರುವಾಯ ಕೈಗೆತ್ತಿಕೊಂಡಿದ್ದೆ. ಈಗಲೂ ಅವು ಹಿಂದಿನಷ್ಟೇ ತಾಜಾತನ, ಅಷ್ಟೇ ಲವಲವಿಕೆಯಿಂದ ಕೂಡಿದ್ದವು. ಗೆಳೆಯರೊಂದಿಗಿನ ಚರ್ಚೆಗಳಿಂದಾಗಿ ಹೆಚ್ಚಾಗಿ ನನ್ನ ಗಮನಕ್ಕೆ ಬಂದ ಒಂದು ಸಂಗತಿಯೆಂದರೆ ಅರವತ್ತರ ಹೊಸ್ತಿಲಲ್ಲಿರುವ ಈ ಬರಹಗಾರನ ಬಗೆಗೆ ಹೊಸ ಹಳೆಯ ಚೊಕ್ಕಟತನ ಬಯಸುವ ಜನರಲ್ಲಿಯೂ ಸಾಕಷ್ಟು ಕುತೂಹಲವಿರುವುದು. ಅರವತ್ತರ ಹತ್ತಿರಕ್ಕಿರುವ ಉಳಿದ ಸಾಹಿತಿಗಳ ಹಿನ್ನೆಲೆಯಲ್ಲಿ ಕೂಡ ಈ ಸಂಗತಿಯು ಮಹತ್ವದ್ದಾಗಿ ಕಾಣಿಸುತ್ತದೆ.

ದೂರದರ್ಶನದ ಸಂದರ್ಶನದ ತರುವಾಯ ಎಷ್ಟೋ ಜನ ನನ್ನನ್ನು ಕಂಡಾಗಲಿ, ಕಾಗದಗಳ ಮೂಲಕವಾಗಲಿ ಪು.ಲ. ಹಾಗೂ ಅವರ ಸಂದರ್ಶನ ಕುರಿತು ಪ್ರತಿಕ್ರಿಯಿಸಿದರು. ಇವೆಲ್ಲವುಗಳಿಂದಾಗಿ ಪು.ಲ. ಅವರ ಸಾಹಿತ್ಯದ ಬೇರೆ ಬೇರೆ ಬದಿಗಳು ಎದ್ದು ಕಾಣುವಂತೆಯೂ ಒಬ್ಬ ಬರಹಗಾರ ಹಾಗೂ ಒಬ್ಬ ವ್ಯಕ್ತಿಯಾಗಿ ಅವರನ್ನು ಇಡಿಯಾಗಿ ಎತ್ತಿ ತೋರಿಸಬಲ್ಲ ಒಂದು ಹೊತ್ತಿಗೆಯನ್ನು ಸಂಪಾದಿಸಬೇಕೆಂಬ ಕಲ್ಪನೆ ನನ್ನಲ್ಲಿ ಮೂಡಿತು. ಆದರೆ ಇಂತಹ ದೊಡ್ಡ ಕೆಲಸ ನನ್ನಿಂದಾದೀತೇ? ಎಂದು ಯೋಚನೆಗಿಟ್ಟುಕೊಂಡಿತು. ಇದೇ ಸುಮಾರಿಗೆ ಪು.ಲ. ಅವರ ತೀರ ಹತ್ತಿರದ ಗೆಳೆಯ, ಪುಣೆಯ ನಂದಾ ನಾರಳಕರರಿಂದ ನನಗೊಂದು ಕಾಗದ ಬಂದಿತು. ಅವರ ಕರೆಯ ಮೇರೆಗೆ ಅವರನ್ನು ಕಾಣಲು ಪುಣೆಗೆ ಹೋದೆ. ಅಲ್ಲಿ ಮ್ಯಾಜೆಸ್ಟಿಕ್ ಪ್ರಕಾಶನ ಸಂಸ್ಥೆಯ ಕಾರ್ಯಾಲಯದಲ್ಲಿ ಅದರ ಒಡೆಯರಾದ ಕೇಶವರಾವ್ ಕೊಠಾವಳೆ, ನಂದಾ ನಾರಳಕರ ಮತ್ತು ನಾನು ಚರ್ಚೆಗಾಗಿ ಸೇರಿದೆವು. 1979ರ ನವೆಂಬರ್ ಎಂಟರಂದು ಪು.ಲ. ಅವರಿಗೆ ಅರವತ್ತು ತುಂಬುವುದಿತ್ತು. ಈ ಸಂದರ್ಭದಲ್ಲಿ ಒಂದು ಹೊತ್ತಿಗೆಯನ್ನು ಪ್ರಕಟಿಸುವುದಲ್ಲದೆ ಭವ್ಯವಾದ ಒಂದು ಸಂಗೀತ ಸಭೆಯನ್ನೂ ಏರ್ಪಡಿಸಬೇಕೆಂಬ ಯೋಜನೆ ನಾರಳಕರರದು ಆಗಿತ್ತು. ಅವರು ಎರಡು ಮೂರು ದಿನಗಳ ಸಂಗೀತ ಸಭೆಯಿಂದಾಗಿ ತಿಕೀಟುಗಳನ್ನು ಮಾರಿ ಬರಬಹುದಾದ ದೊಡ್ಡ ಮೊತ್ತವನ್ನು ಷಷ್ಟ್ಯ ಹಬ್ಬದ ದಿನ ಪು.ಲ. ದೇಶಪಾಂಡೆ ಫೌಂಡೇಶನ್ನಿಗೆ ಅರ್ಪಿಸಬೇಕೆಂದುಕೊಂಡಿ

ದ್ದರು. ಯೋಜನೆ ಕೊಂಡಾಡಬೇಕಾದದ್ದೇ. ಹೊತ್ತಿಗೆಯ, ನನ್ನ ಯೋಜನೆಯನ್ನೂ ಮಂಡಿಸಿದೆ. ನಾರಳಕರರಿಗೂ, ಕೋಠಾವಳೆಯವರಿಗೂ ಅದು ಹಿಡಿಸಿತು. ಅವರು ಹೊತ್ತಿಗೆಯನ್ನು ವಿಜೃಂಭಣೆಯಿಂದ ಹೊರತರುವ ಹೊಣೆಯನ್ನು ಹೊತ್ತರು. ತರುವಾಯ ಮರಾಠಿಯ ಹೆಸರಾಂತ ಚಿತ್ರಕಾರರಾದ ವಸಂತ ಸರವಟೇ ಹೊತ್ತಿಗೆಯನ್ನಲಂಕರಿಸಲು ತಾವಾಗಿಯೇ ಮುಂದೆ ಬಂದರು.

ಅಂದಿನ ಸಭೆಯ ಗೊತ್ತುವಳಿಗಳಲ್ಲಿ ರೂಪು ತಳೆದದ್ದೆಂದರೆ ಈ ಹೊತ್ತಿಗೆ 'ಪು.ಲ. ಏಕ ಸಾಠವಣ' ಒಂದೇ! ಮೂರು ದಿನಗಳ ಸಂಗೀತ ಸಭೆಗಳ ಮೂಲಕ ಹಣವನ್ನು ಕಲೆಹಾಕುವ ಯೋಜನೆಯನ್ನಂತೂ ಯಾರ ಕಿವಿಗೂ ತಲುಪುವ ಮೊದಲೇ ಪು.ಲ. ಸದೆಬಡಿದು ಬಿಟ್ಟರು. ತಮ್ಮ ಬಾಳಿನ ಅರವತ್ತು ವರ್ಷಗಳನ್ನು ದಾಟುವ ಅನೇಕರಲ್ಲಿ ತಾವೂ ಒಬ್ಬರು! ಅದಕ್ಕಾಗಿ ಹುಟ್ಟು ಹಬ್ಬವನ್ನು ಸಾರ್ವಜನಿಕವಾಗಿ ಆಚರಿಸುವ ಅವಶ್ಯಕತೆಯೇ ಇಲ್ಲವೆಂದು ಹೇಳಿ ಅವರು ನಾರಳಕರರನ್ನು ನಿರಾಶೆಗೊಳಿಸಿದರು. ಹಾಗೆ ನೋಡಿದರೆ ನಾರಳಕರರ ಯೋಜನೆಯಲ್ಲಿ ಕುಂದೆಂಬುದು ಇರಲಿಲ್ಲ. ಸಂಗೀತ ಸಭೆಗಳಿಂದ ಬರಬಹುದಾದ ಹಲವು ಲಕ್ಷಗಳಷ್ಟು ರೂಪಾಯಿಗಳ ಮೊತ್ತವನ್ನು 'ಪು.ಲ. ಫೌಂಡೇಶನ್ನಿ'ಗೆ ನೀಡಿದ್ದರೆ ಆ ಹಣ ಮತ್ತೆ ಸಾಮಾಜಿಕ ಕಾರ್ಯಗಳಿಗೇನೇ ದೊರಕಬಹುದಿತ್ತು. ಎಂದು ಅವರು ಯೋಚಿಸಿದ್ದರು. ಭಾಯಿ ಪು.ಲ. ದೇಶಪಾಂಡೆ ತಮ್ಮ ಯೋಜನೆಗೆ ಒಪ್ಪಿಗೆಯನ್ನು ಕೊಟ್ಟೇ ಕೊಡುವರೆಂದು ನಾರಳಕರರು ಅವರೊಂದಿಗಿನ ತಮ್ಮ ದೀರ್ಘಕಾಲದ ಗಟ್ಟಿ ಮುಟ್ಟಾದ ನೆಲೆಗಟ್ಟಿನ ಮೇಲೆ ನಿಂತಿರುವ ಗೆಳೆತನವನ್ನು ನಂಬಿ ನುಡಿದಿದ್ದರು. ಆದರೆ ಮುಂದೆ ಏನಾಯಿತೆಂಬುದು ತಿಳಿಯಲಿಲ್ಲ. ಒಮ್ಮೆಲೆ ಮೌನ ವ್ರತವನ್ನು ಧರಿಸಿದ ನಂದಾ ನಾರಳಕರರು ತುಟಿ ಪಿಟ್ಟೆನ್ನಲಿಲ್ಲ. ಮುಂದೆ ತಿಳಿದು ಬಂದ ಸಂಗತಿಯೆಂದರೆ ತಮ್ಮ ಹುಟ್ಟು ಹಬ್ಬಕ್ಕಾಗಿ ಯಾರಾದರೂ ಪುಕ್ಕಟೆಯಾಗಿ ಹಾಡಬೇಕು. ಜನ ಮಾತ್ರ ತಿಕೀಟುಗಳನ್ನು ಕೊಂಡು ಕೇಳಬೇಕೆಂಬ ಸಂಗತಿಯನ್ನೇ ಪು.ಲ. ತಳ್ಳಿಹಾಕಿದರಂತೆ. ಆ ಹೊತ್ತಿಗೆಯ ಬಗೆಗೂ ಅವರ ನಿಲುವು ಅದೇ ರೀತಿಯದಾಗಿತ್ತು. ನನಗೆ, "ಈ ಕೆಲಸದಲ್ಲಿ ಸುಮ್ಮನೆ ನಿಮ್ಮ ವೇಳೆ ಹಾಳಾದೀತು. ನಿಮ್ಮ ಬರವಣಿಗೆಯನ್ನು ಬದಿಗೆ ಸರಿಸಿ ನೀವು ಈ ಹೊತ್ತಿಗೆಯನ್ನು ತಯಾರಿಸುವಲ್ಲಿ ನನಗಂತೂ ಯಾವ ಅರ್ಥವೂ ಕಾಣುತ್ತಿಲ್ಲ." ಎಂದೆಲ್ಲ ಮತ್ತೆ ಮತ್ತೆ ಹೇಳಹತ್ತಿದರು. ಆದರೆ ಈ ಒಂದು ಸಂಗತಿಯ ಬಗೆಗೆ ಮಾತ್ರ ಪು.ಲ. ಅವರ ಮಾತನ್ನು ಕೇಳಲೇಕೂಡದೆಂದು ನಾನು, ನಾರಳಕರ ಹಾಗೂ ಕೊಠಾವಳೆಯವರು ನಿಶ್ಚಯಿಸಿದೆವು. ಪು.ಲ. ಅವರ ಒಂದೇ ಒಂದು ಶರತ್ತಿಗೆ ನಮ್ಮ ಒಪ್ಪಿಗೆಯನ್ನು ನೀಡ ಬೇಕಾಯಿತು. ಅದೆಂದರೆ ಅವರ ಹುಟ್ಟು ದಿನದಂದು ಹೊತ್ತಿಗೆಯ ಬಿಡುಗಡೆಯನ್ನು ಮಾಡಕೂಡದೆಂಬುದು!

ಇಷ್ಟೆಲ್ಲ ನಡೆದ ಬಳಿಕ ಕಳೆದ ವರ್ಷವಷ್ಟೆ ನಾನು ಹೊತ್ತಿಗೆಯ ಕೆಲಸಕ್ಕೆ ತೊಡಗಿದೆ. ಪು.ಲ. ಬೇರೆ ಬೇರೆ ಬಗೆಯ ಬರವಣಿಗೆಗಳನ್ನು ಕೈಗೊಂಡವರು. ಅವರೆಂದರೆ ನಮ್ಮ ಮರಾಠಿಯ ಎಲ್ಲಕ್ಕೂ ಮೇಲ್ದರ್ಜೆಯ ಹಾಸ್ಯಗಾರರು. ಅಂದ ಮಾತ್ರಕ್ಕೆ ಅವರೊಬ್ಬ ಬರೀ ಹಾಸ್ಯ ಬರಹಗಾರರೆಂದು ಎಲ್ಲೆಡೆಗಳಲ್ಲಿ ಕಂಡು ಬರುವ ಅವರ ಪ್ರತಿಮೆ ಅಪೂರ್ಣವಾದದ್ದೆಂದೇ ಹೇಳಬೇಕು. ಒಬ್ಬ ಮೇಲ್ದರ್ಜೆಯ ಹಾಸ್ಯಗಾರರಾಗಿರುವುದರ ಜೊತೆಗೆ ಅವರೊಬ್ಬ ಚಿಂತಕ ವಿಚಾರವಂತರಷ್ಟೆ ಅಲ್ಲದೆ ಸಮಾಜ ಸುಧಾರಣೆಯ ತೀವ್ರವಾದ ಕಾಳಜಿಯುಳ್ಳ ದೊಡ್ಡ ಬರಹಗಾರರೂ ಹೌದು. ಅವರ ಈ ಎರಡೂ ಬದಿಗಳು ಒಂದೆಡೆಯಲ್ಲಿ ಎದ್ದು ಕಾಣುವ ರೀತಿಯಲ್ಲಿ ಈ ಹೊತ್ತಿಗೆಯಾಗಬೇಕು ಎಂದುಕೊಂಡೆ.

ಹೊತ್ತಿಗೆಯ ಕೆಲಸದಲ್ಲಿ ಸಹಾಯ, ಮಾರ್ಗದರ್ಶನವನ್ನು ಪಡೆಯಲೆಂದು ಸುಮಾರು ಅರವತ್ತು ಎಪ್ಪತ್ತು ಜನ ಸಾಹಿತಿ ಮಿತ್ರರಿಗೆ ಕಾಗದಗಳನ್ನು ಬರೆದೆ. ನೀವೇ ಸಂಪಾದಕರಾಗಿದ್ದರೆ ಪು.ಲ. ಅವರ ಯಾವ ಅತ್ಯುತ್ತಮವಾದ ಸಾಹಿತ್ಯವನ್ನು ಆಯ್ದುಕೊಳ್ಳುತ್ತಿದ್ದಿರಿ? ಎಂದು ಕೇಳಿ ಅವರೆಲ್ಲರ ಶಿಫಾರಸುಗಳನ್ನು ಪಡೆದೆ. ಈ ಮಿತ್ರರಲ್ಲಿ ಟೀಕಾಕಾರರು, ಕಥೆ ಕಾದಂಬರಿಕಾರರು, ಹಾಸ್ಯಗಾರರು, ಕವಿಗಳು,

ಸಂಪಾದಕರು! ಹಿರಿಯರು, ಕಿರಿಯರು! ಎಂದೆಲ್ಲ ಬೇರೆ ಬೇರೆ ತರಹದ ಜನರಿದ್ದರು.

ಸುಮಾರಾಗಿ ಎಲ್ಲರಿಂದಲೂ ಮಾರೋಲೆಗಳು ಬಂದವೆನ್ನಬಹುದು. ಅವರೆಲ್ಲ ತಮ್ಮ ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ಬರೆದಿದ್ದರು. ಅವನ್ನು ಓದಿದಾಗ ಪು.ಲ. ಅವರನ್ನು ಒಬ್ಬ ಲೇಖಕ, ಒಬ್ಬ ಕಲಾವಿದನಲ್ಲದೆ ಒಬ್ಬ ವಿಚಾರವಂತನೆಂದೂ ಸಮಕಾಲೀನ ಲೇಖಕರು ಅದೆಷ್ಟು ಮನ್ನಿಸುತ್ತಾರೆ ಎಂಬ ಸಂಗತಿಯ ಹೊಸ ದರ್ಶನವೇ ನನಗಾಯಿತು.

ಗೆಳೆಯರಿಂದ ಬಂದ ಈ ಎಲ್ಲ ಕಾಗದಗಳ ಉಪಯೋಗ ಸಾಕಷ್ಟಾಯಿತು. ಒಂದು ಮಹತ್ವದ ಸಂಗತಿಯೆಂದರೆ ಅವರೆಲ್ಲರ ಬೇಕು ಬೇಡಗಳಲ್ಲಿರುವ ಸಾಮ್ಯ ಹಾಗೂ ವಿರೋಧಗಳು ನನ್ನ ಅರಿವನ್ನು ತುಸು ಹೆಚ್ಚಿಸಿದವು. ಪು.ಲ. ಅವರ 'ಬಟಾಟಾಚೀಚಾಳ್' (ಬಟಾಟೆಯ ಚಾಳು) ಪ್ರಕಟಗೊಂಡ ತರುವಾಯ ಅದರ ಏಕಪಾತ್ರ ಪ್ರಯೋಗಗಳಿಗೂ ಆರಂಭವಾಯಿತು. ಅದರ ಕೊನೆಯ ಭಾಗದಲ್ಲಿರುವ 'ಚಿಂತನೆ' ಅನೇಕರಿಗೆ ಹಿಡಿಸುತ್ತಿರಲಿಲ್ಲ. 'ಚಿಂತನೆ' ಒಂದು ಸುಳ್ಳಿನ ಕಂತೆಯಾಗಿದ್ದು ಬೇಕೆಂದೇ ಕೃತಕವಾದ ಅದನ್ನು ತುರುಕಿದ್ದಾಗಿದೆ ಎಂದವರು ಹಲವರು. ಇದಾದ ಬಳಿಕ ಅನೇಕ ವರ್ಷಗಳು ಸಂದಿವೆ. ಇಂದು ಮಾತ್ರ ಮಿತ್ರರ ಶಿಫಾರಸುಗಳನ್ನು ಹೊತ್ತು ತಂದ ಒಂದೊಂದು ಕಾಗದವೂ 'ಚಿಂತನೆ'ಯ ಪರವಾಗಿತ್ತು. 'ಚಿಂತನೆ'ಯನ್ನು ನನ್ನ ಹೊತ್ತಿಗೆಗಾಗಿ ಆಯ್ದುಕೊಳ್ಳಲೇಬೇಕೆಂಬ ಒತ್ತಾಯವನ್ನು ಕಂಡಾಗ ನನಗೆ ಮೋಜೆನಿಸಿತು.

ಅಂದ ಮಾತ್ರಕ್ಕೆ ನನಗೆ ಬಂದ ಶಿಫಾರಸುಗಳನ್ನಷ್ಟೇ ಆಧರಿಸಿ ನಾನು ಸಾಹಿತ್ಯವನ್ನು ಆಯ್ದು ಕೊಂಡೆ ಎನ್ನಲಾಗದು. ಇವೆಂದರೆ ನನ್ನ ಸ್ವಂತದ ಆಯ್ಕೆ ಹಾಗೂ ನನ್ನಲ್ಲಿ ಬಂದ ಬಹುಮತದ ಬೇಕು ಬೇಡಗಳ ಬೆರಕೆಯಾಗಿದೆ. ವ್ಯಾಖ್ಯಾನಗಳು ಹಾಗೂ ಕಾಗದಗಳ ಆಯ್ಕೆ ಇಡಿಯಾಗಿ ನನ್ನದೇ! ಈ ಹೊತ್ತಿಗೆಯಲ್ಲಿ ಕೊಡಲಾದ ಕಾಗದಗಳು ಪು.ಲ. ಅವರ ಅಂತರಂಗದ ಸೊಬಗನ್ನು ಅಂದವಾಗಿ ತೋರಬಲ್ಲವು ಎಂದು ಆಶಿಸುತ್ತೇನೆ.

ಬರವಣಿಗೆಯೊಂದಿಗೆ ನೇರವಾದ ಸಂಪರ್ಕ ವಿಲ್ಲದಿದ್ದರೂ ಸಾಹಿತ್ಯದೊಂದಿಗೆ ನಿಕಟವಾಗಿದ್ದ ಒಬ್ಬರಿಗೆ ಕೂಡ ನಾನು ಕಾಗದ ಬರೆದಿದ್ದೆ. ಅವರೆಂದರೆ ಶ್ರೀಮತಿ ಲಕ್ಷ್ಮೀಬಾಯಿ ಲಕ್ಷ್ಮಣ ದೇಶಪಾಂಡೆ, ಅವರು 5, ಅಜಮಲ್ ರೋಡ್, ವಿಲೇ ಪಾರ್ಲೆ, ಮುಂಬಯಿ-57 ವಿಳಾಸದಲ್ಲಿದ್ದವರು. ಎಂಬತ್ತರ ಹೊಸ್ತಿಲಲ್ಲಿರುವ ಈಕೆ ಪುರುಷೋತ್ತಮ ಲಕ್ಷ್ಮಣ ದೇಶಪಾಂಡೆಯವರ ತಾಯಿ. ಇವರ ಓದು ಹರಹಿನಿಂದ ಕೂಡಿದ್ದುದು. ಸಂಗೀತ ನಾಟಕಗಳ ಹುಚ್ಚು. ಇವರಿಗೆ ನನ್ನ ಕಾಗದದಲ್ಲಿ "ಈ ಹೊತ್ತಿಗೆಯ ಸಂಪಾದಕತ್ವವನ್ನು ನೀವು ವಹಿಸಿದ್ದಿರಾದರೆ ಪು.ಲ. ಅವರ ಯಾವ ಯಾವ ಸಾಹಿತ್ಯವನ್ನು ಸೇರ್ಪಡಿಸುತ್ತಿದ್ದೀರಿ?" ಎಂದು ಕೇಳಿದ್ದೆ. ಆ ತಾಯಿ ಮೂರು ಪುಟಗಳ ಒಂದು ಉದ್ದಾದ ಮಾರೋಲೆಯನ್ನು ಕಳಿಸಿದರು. ಇವರು ಮಾಡಿದ ಶಿಫಾರಸುಗಳನ್ನು ಕಾರ್ಯರೂಪಕ್ಕೆ ತರುವುದೆಂದರೆ ಪು.ಲ. ಅವರ ಇಡಿಯ ಸಾಹಿತ್ಯವನ್ನೇ ಒಂದು ಹೊತ್ತಿಗೆಯಾಗಿ ಪ್ರಕಟಿಸಬೇಕಿತ್ತು. ಕಾಗದದ ಕೊನೆಯ ನಾಲ್ಕು ಸಾಲುಗಳು ಮನ ಮುಟ್ಟುವಂತಿವೆ.

"ಭಾಯಿಯ ಬರವಣಿಗೆ ನನ್ನ ಬಾಳಿಗೆ ಒಂದು
ನೆಮ್ಮದಿಯನ್ನು ತಂದಿದೆ ಮನ ಕಲಕಿದಾಗ
ಭಾಯಿಯ ಯಾವುದಾದರೂ ಒಂದು ಹೊತ್ತಿಗೆ
ಯನ್ನು ಕೈಗೆತ್ತಿಕೊಳ್ಳುತ್ತೇನೆ ಓದುತ್ತ
ಸಾಗಿದಂತೆ ಬೇರೆಯದೇ ಆದ, ಯಾವುದೇ
ಬಂಧನಗಳಿಲ್ಲದ ಒಂದು ವಿಶ್ವವನ್ನು ಹೊಕ್ಕ ಅನುಭವ
ನನ್ನದಾಗುತ್ತದೆ. ಮನಸ್ಸಿಗೆ ನೆಮ್ಮದಿಯನ್ನು ತರುತ್ತದೆ"

ಪು.ಲ. ಅವರ ಕೆಲವು ಕಾಗದಗಳನ್ನು ಆಯ್ದು ಈ ಹೊತ್ತಿಗೆಯಲ್ಲಿ ಕೊಡಲಾಗಿದೆಯಷ್ಟೆ. ಈ ಆಯ್ಕೆಗೆ ಅನುಕೂಲವಾಗಲೆಂದು ವೃತ್ತಪತ್ರಗಳಲ್ಲಿ ಒಂದು ಪ್ರಕಟನೆಯನ್ನು ಕೊಟ್ಟು ಜನ ತಮ್ಮಲ್ಲಿರುವ ಪು.ಲ. ಅವರ ಕಾಗದಗಳನ್ನು ನನಗೆ ನೀಡಿ ಸಹಕರಿಸಬೇಕೆಂದು ಕರೆ ಕೊಟ್ಟಿದ್ದೆ. ನನ್ನ ಈ ಕರೆಗೆ ಕೂಡ ಜನ ಚೆನ್ನಾಗಿಯೇ ಓಗೊಟ್ಟರು. ಹಲವಾರು ಜನ ತಮ್ಮಲ್ಲಿರುವ ಪು.ಲ. ಅವರ ಕಾಗದಗಳನ್ನು ಕಳಿಸಿಯೂ ಕೊಟ್ಟರು. ಅವುಗಳನ್ನು ಕಂಡು ಒಂದು ಸಂಗತಿ ಮಾತ್ರ ನನ್ನ ಗಮನಕ್ಕೆ

ಬಾರದೇ ಇರಲಿಲ್ಲ. ಅದೆಂದರೆ ಪು.ಲ. ಎಣಿಕೆಯಿಲ್ಲದಷ್ಟು ಕಾಗದಗಳನ್ನು ಬರೆಯುವವರಾದರೂ ಯಾವ ಸಮಕಾಲೀನ ದೊಡ್ಡ ಬರಹಗಾರನೊಂದಿಗೂ ಅವರ ಪತ್ರವ್ಯವಹಾರವೆಂಬುದೇ ಇರಲಿಲ್ಲವೆಂಬುದು. ಪು.ಲ. ವರ್ಷವೊಂದಕ್ಕೆ ಸುಮಾರು ಒಂದು ಸಾವಿರ ಕಾಗದಗಳನ್ನಾದರೂ ಬರೆಯುತ್ತಿರುತ್ತಾರೆ. ಆದರೆ ಅವುಗಳಲ್ಲಿಯ ಒಂದೆರಡು ಕೂಡ ಹಿರಿಯ, ಪ್ರತಿಷ್ಠಿತ ಬರಹಗಾರರಿಗೆಂದು ಬರೆದವುಗಳಲ್ಲ. ಇದಕ್ಕೇನು ಕಾರಣವಿದ್ದೀತು? ಪು.ಲ. ಅವರೇ ಹೇಳುವಂತೆ ಅದಕ್ಕೆ ಅಂತಹ ಕಾರಣವೇನೂ ಇಲ್ಲ. ಪ್ರತಿಷ್ಠಿತರಾದ ಸಮಕಾಲೀನ ಬರಹಗಾರರಿಗೆ ಕಾಗದ ಬರೆಯಬೇಕೆಂಬ ಭಾವನೆ ಎಂದಿಗೂ ತಮ್ಮಲ್ಲಿ ಉಂಟಾಗಲೇ ಇಲ್ಲ. ಅದಕ್ಕೆ ಅಂತಹ ಅವಕಾಶವೂ ಬಾರದೇ ಹೋಯಿತಷ್ಟೆ. ಪು.ಲ. ಅವರ ಪತ್ರವ್ಯವಹಾರವೆಲ್ಲ ಹೆಚ್ಚಾಗಿ ಹೊಸ ಬರಹಗಾರರು. ಅವರಿಗಿಂತಲೂ ಹೆಚ್ಚಾಗಿ ದಲಿತ ಬರಹಗಾರರು ಹಾಗೂ ಇವರೆಲ್ಲರಿಗಿಂತ ಹೆಚ್ಚಾಗಿ ಸಾಮಾನ್ಯ ಓದುಗರೊಂದಿಗೆ! ಇವುಗಳಲ್ಲಿಯ ಯಾವ ಕಾಗದವನ್ನೂ ಕೇವಲ ಒಂದು ಉಪಚಾರಕ್ಕಾಗಿ ಬರೆದಂತೆ ಕಾಣುವುದಿಲ್ಲ. ಅವು ಎಲ್ಲಿಯೇ ಆಗಲಿ ಹೊಸತೇನಾದರೂ ನಡೆದಿದ್ದರೆ, ಹೊಸ ಸಾಮಾಜಿಕ ಕಾಳಜಿ ಕಂಡುಬಂದರೆ ಅವುಗಳನ್ನು ಎತ್ತಿ ಹಿಡಿಯಲೆಂದಾಗಲಿ, ಅವುಗಳೊಂದಿಗೆ ಸಮರಸವಾಗಲೆಂದಾಗಲಿ, ಇಲ್ಲವೆ ತಮಗನಿಸಿದುದನ್ನು ಹೇಳಲೆಂದಾಗಲಿ, ಅವರು ಒಳ್ಳೆಯ ಹುರುಪು ಹುಮ್ಮಸ್ಸುಗಳಿಂದ ಬರೆದ ಕಾಗದಗಳಾಗಿವೆ.

ಪು.ಲ. ಅವರ ಕಾಗದಗಳು ಹೆಚ್ಚಾಗಿ ಹರಹಿನಿಂದ ಕೂಡಿದವುಗಳು. ಆದರೆ ಒಂದೊಂದು ಬಾರಿ ಪು.ಲ. ತಮ್ಮ ಮಾರುತ್ತರದಲ್ಲಿ ಹೆಚ್ಚಿಗೇನನ್ನೂ ಬರೆಯಲಾಗದಂತಹ ಕಾಗದಗಳೂ ಅವರಿಗೆ ಬರುವುದುಂಟು. ಇಂತಹ ಒಂದು ಕಾಗದ ಠಾಣೆ ನಗರದ ಸುಭಾಷ್ ಗೋಪಾಳ ಜೋಶಿಯವರಿಂದ ಬಂದಿದ್ದು. ಅದರಲ್ಲಿ ಅವರು ಪು.ಲ. ಅವರ ಸಾಹಿತ್ಯವು ತಮ್ಮ ಪರಿಚಯದ ಒಬ್ಬ ಮಹಿಳೆಗೆ ತನ್ನ ಬೇನೆಯಿಂದ ಬೇಗನೆ ಸುಧಾರಿಸಿಕೊಳ್ಳಲು ಸಹಾಯ ಮಾಡಿತೆಂದಿದ್ದಾರೆ. ಈ ಕಾಗದಕ್ಕೆ ಬರೆದ ತಮ್ಮ ಮಾರುತ್ತರದಲ್ಲಿ ಪು.ಲ. ಹೆಚ್ಚಿಗೇನೂ ಬರೆಯದೇ ಹೋದರು. ಅವರನ್ನು ಈ ಬಗೆಗೆ ಕೇಳಿದಾಗ, "ನಾನೇನು ಬರೆಯಲಿ? ನಿಮಗೆ ಇಂತಹ ಕಾಗದ ಬಂದಿದ್ದರೆ ನೀವೇನು ಬರೆಯುತ್ತಿದ್ದೀರಿ? ಎಂಬ ಮರು ಪ್ರಶ್ನೆ ಅವರದು. ಚೀನ-ಭಾರತ ಯುದ್ಧ ನಡೆದ ಕಾಲಕ್ಕೆ ಗಡಿಯಲ್ಲಿನ ಒಬ್ಬ ಮರಾಠಿ ಸೈನಿಕ ಅಲ್ಲಿಯ ತೀವ್ರವಾದ ಚಳಿಯಿಂದ ಥರಗುಟ್ಟುತ್ತಿದ್ದನು. ಅವನ ಮೈಮೇಲೆ ಹೆಚ್ಚಿನ ಉಣ್ಣೆಯ ಬಟ್ಟೆಗಳೂ ಇರಲಿಲ್ಲ. ಹೀಗಾಗಿ ಅವನು ಕಾಯಿಸಿಕೊಳ್ಳಲೆಂದು ತನ್ನಲ್ಲಿದ್ದ ಮರಾಠಿಯ ದೀಪಾವಳಿಯ ಸಂಚಿಕೆಗಳನ್ನು ಒಂದೊಂದಾಗಿ ಸುಡಹತ್ತಿದನು. ಬೆಂಕಿಯಲ್ಲಿ ಎಸೆಯುವ ಮೊದಲು ತಿರುವಿ ಹಾಕುತ್ತಿರುವಾಗ ಒಂದು ಸಂಚಿಕೆಯಲ್ಲಿ ಅವನಿಗೆ ಪು.ಲ. ದೇಶಪಾಂಡೆಯವರ ಹೆಸರು ಕಂಡಿತು. ಅವರ ಬರಹದ ಹೆಸರು ನನ್ನ 'ಖಾದ್ಯ ಜೀವನ' ಸೈನಿಕನು ಅದನ್ನು ಇಡಿಯಾಗಿ ಓದಿದನು. ಆಗಲೇ ಬಾಳಿಗೆ ಬೇಸತ್ತು ಹೋಗಿದ್ದ ಅವನು ಇಷ್ಟೆಲ್ಲ ತಿಂಡಿ ತಿನಿಸುಗಳನ್ನು ತಿನ್ನಲಿಕ್ಕಾಗಿಯಾದರೂ ತಾನು ಬದುಕಲೇಬೇಕೆಂದುಕೊಂಡನು. ತರುವಾಯ ನಿಮ್ಮ ಬರಹವನ್ನೋದಿಯೇ ನಾನು ಬದುಕಿ ಉಳಿಯಲು ಬಯಸಿದ್ದು ಎಂದು ಬರೆದ ಕಾಗದ ಆತನಿಂದ ಬಂದಾಗಲೂ ಪು.ಲ. ಅವರದು ಅದೇ ಅವಸ್ಥೆಯಾಯಿತು. ಇದೇ 'ನನ್ನ ಖಾದ್ಯ ಜೀವನ'ದಲ್ಲಿ ಪು.ಲ. ಅವರು ಚಿವಡಾ ಕುರಿತು ಈ ರೀತಿಯಾಗಿ ಬರೆದಿದ್ದಾರೆ. "ಚಿವಡಾ ಎಂದ ಬಳಿಕ ಸೊಲ್ಲಾಪುರಕ್ಕಿಂತ ಕೊಲ್ಲಾಪುರದ್ದೇ ಸರಿ! ಅದು ಛತ್ರೆಯವರದಾಗಿದ್ದರೆ ಮಾತ್ರ! ಇಂದಿನವರೆಗೆ ಒಟ್ಟು ಮೂವರು ಛತ್ರೆಯವರು ಮಹಾರಾಷ್ಟ್ರವನ್ನು ತುಂಬ ಉಪಕರಿಸಿದ್ದಾರೆ. ಒಬ್ಬರೆಂದರೆ ಚಿವಡಾವಾಲೆ ಛತ್ರೆ, ಎರಡನೆಯವರು ಸರ್ಕಸ್ಸಿನವರಾದರೆ ಮೂರನೆಯವರು ಗಣಿತಜ್ಞರಾದ ಕೇರುನಾನಾ ಛತ್ರೆಯವರು! ಉಪಕಾರವನ್ನು ಇಳುಗಡೆಯ ಕ್ರಮದಲ್ಲಿ ನಮೂದಿಸಬೇಕಿದೆ! ಏಕೆಂದರೆ, ಕೊಲ್ಲಾಪುರದ 'ರಮ್'ಗೆ ಛತ್ರೆಯವರ ಚಿವಡಾ ನೀಡಿದ ಜತೆಗಾರಿಕೆಯು ದಿಟ್ಟ ರುಮಾಲುಗಳ ಹಾರಾಡುವ ಅಂಚುಗಳನ್ನು ಕಳ್ಳ ಪಗಡಿಗಳ ಓಲಾಡುವ ಹೊಳಪಿನ ರೇಶಿಮೆಯ ಎಳೆಗಳನ್ನು ಗಗನಕ್ಕೇರಿಸಿ ಬಂದಿತು...."

[illegible]
ಚಿವಡಾದ ಆದ್ಯ ನಿರ್ಮಾತೃಗಳಾದ ಛತ್ರೆಯವರ ಎದೆ ತುಂಬಿ ಬಂದಿತು. ಅವರು ತಮ್ಮ ಮುಪ್ಪು ಮರೆತು ಪು.ಲ. ಅವರಿಗಾಗಿ ತಾವೇ ನಿಂತು ಚಿವಡಾ ತಯಾರಿಸಿದರು. ಹದಿನೈದು ಹದಿನಾರು ವರ್ಷಗಳ ಕೆಳಗಿನ ಮಾತಿದು. ಅವರು ತಾವು ಕೈ ಯಿಂದ ತಯಾರಿಸಿದ ಚಿವಡಾವನ್ನು ಸ್ವೀಕರಿಸಿರೆಂದು ಪು.ಲ. ಅವರನ್ನು ಕೇಳಿಕೊಂಡರಂತೆ. ಈ ರೀತಿಯಾಗಿ ಒಂದು ಡಬ್ಬಿ ತುಂಬಿ ಕಳಿಸಿದ ಚಿವಡಾದೊಂದಿಗೆ ಅವರು ಒಂದು ಮಾತನ್ನು ಹೇಳಿ ಕಳಿಸಿದ್ದರಂತೆ. ಅದೆಂದರೆ, ಅವರು ಈ ಮೊದಲು ಕೂಡ ಒಂದು ಬಾರಿ ಇದೇ ರೀತಿಯಾಗಿ ಒಬ್ಬರಿಗಾಗಿ ತಮ್ಮ ಚಿವಡಾ ಕಳಿಸಿಕೊಟ್ಟಿದ್ದರಂತೆ, ಯಾರಿಗೆ ಗೊತ್ತೆ? ಲೋಕಮಾನ್ಯ ಟಿಳಕರಿಗಾಗಿ! ಲೋಕಮಾನ್ಯರು ಅಂದು ವಿದೇಶ ಯಾತ್ರೆಗೆ ಹೊರಟು ನಿಂತಿದ್ದರಂತೆ!

ಇಂತಹ ಕೆಲವೊಂದು ಕಾಗದಗಳಿಗೆ ಮಾರೋಲೆಗಳನ್ನು ಬರೆಯುವಲ್ಲಿ ಪು.ಲ. ಸಂಕೋಚ ಗೊಂಡಿದ್ದನ್ನು ಕಾಣಬಹುದಾದರೂ ತಮ್ಮ ಬೇರೆ ಕಾಗದಗಳಲ್ಲಿ ಅವಲ್ಲೊಬ್ಬ ಹರಟೆಯ ಮಲ್ಲರಾಗಿರುವುದನ್ನು ಕಾಣಬಹುದು ಎಂತಹ ಕಾಗದವೇ ಬಂದಿರಲಿ. ಪು.ಲ. ಅವರ ಮಾರೋಲೆ ಮಾತ್ರ ಹರಟೆಗಳಿಂದ ತುಂಬಿದ್ದು. ಕೆಲವೇ ಮಹತ್ವದ ಕಾಗದಗಳನ್ನು ಮಾತ್ರ ಈ ಹೊತ್ತಿಗೆಯಲ್ಲಿ ಸೇರಿಸಲು ಸಾಧ್ಯವಾಯಿತು. ಆದರೆ ಉಳಿದ ಚಿಕ್ಕ ಪುಟ್ಟ ಕಾಗದಗಳಿಂದಲೂ ಅವರ ಹೆಚ್ಚಿನ ಪರಿಚಯವಾಗುತ್ತದೆ. ನನಗಾದ ಅವುಗಳ ಉಪಯೋಗವಂತೂ ಹೇಳತೀರದ್ದು.

ಪು.ಲ. ಅವರ ಮನೆತನ ಬಡತನದ್ದೇನಲ್ಲ. ಅಂದ ಮಾತ್ರಕ್ಕೆ ಅವರು ಹಣವಂತರೆಂದೂ ಅಲ್ಲ. ಅವರ ತಂದೆ ಒಂದು ಸಾಧಾರಣವಾದ ನೌಕರಿಯಲ್ಲಿದ್ದವರು. ಆದರೆ ಬಲು ಹುಮ್ಮಸ್ಸಿನವರು. ಅವರಿಗೆ ಹಾಡು, ನಾಟಕಗಳ ಎಲ್ಲಿಲ್ಲದ ಗೀಳು, ವಾರ ವಾರಕ್ಕೂ ಮನೆಯವರನ್ನೆಲ್ಲ ನಾಟಕ ನೋಡಲು ಕರೆದೊಯ್ಯುತ್ತಿದ್ದರು. ಜ್ಯೋತಿಷಶಾಸ್ತ್ರವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅವರು ಪು.ಲ. ಅವರ [illegible]
ವನ್ನು ಬರೆದಿಟ್ಟಿದ್ದರು. ಅದೊಮ್ಮೆ ಪು.ಲ. ಅವರ ಕೈಗೆ ಬಿದ್ದು ತಮ್ಮ ಆಯುಷ್ಯ ಕೇವಲ ಮೂವತ್ತೆರಡೇ ವರ್ಷಗಳದೆಂದು ಭಾವಿಸಿದ ಪು.ಲ. ಹಾಗೂ ಅವರ ಮಡದಿ ಸುನೀತಾಬಾಯಿಯವರು ಕಂಗೆಟ್ಟಿದ್ದರು. ತಮ್ಮ ತಂದೆಗೆ ಮುಂದಿನ ಭವಿಷ್ಯವನ್ನು ಬರೆಯಲು ಆಗಿರಲಿಕ್ಕಿಲ್ಲವೆಂಬ ಸಂಗತಿಯು ಪು.ಲ. ಅವರ ಗಮನಕ್ಕೆ ಬಂದದ್ದು ತಮ್ಮ ಬಾಳಿನ ಮೂವತ್ತೆರಡು ವರ್ಷಗಳು ದಾಟಿದ ಬಳಿಕವೇ!

ಪು.ಲ. ಅವರ ತಾಯಿಯವರ ಹೇಳಿಕೆಯಂತೆ ಪು.ಲ. ಅವರ ತಂದೆಗೆ ತಮ್ಮ ಸಾವಿನ ದಿನ, ಸಮಯ ಎಲ್ಲ ನಿಖರವಾಗಿ ಗೊತ್ತಿದ್ದುವಂತೆ, ಅವರು ತಮ್ಮ ನಡು ಹರೆಯದಲ್ಲಿಯೇ ಅಭಂಗಗಳನ್ನು ಹೇಳ ಹಚ್ಚಿದರಂತೆ, 'ಜೇಥೇ ಜಾತೋ ತೇಥೆ, ತೂ ಮಾಝಾ ಸಾಂಗಾತಿ' (ನಾನು ಹೋದೆಡೆಗಳಲ್ಲೆಲ್ಲ ನೀನೆ ನನ್ನ ಸಂಗಡಿಗ') ಹಾಗೂ 'ಆಮೀ ಜಾತೋ ಆಮುಚಾ ಗಾವಾ' (ನಾವು ಹೋಗುವೆವು ನಮ್ಮೂರಿಗೆ) ಎನ್ನುವುದನ್ನು ಪೂರ್ತಿಯಾಗಿ ಕೇಳಿದ ತರುವಾಯವೇ ಅಸುನೀಗಿದರು. ಅವರು ಕೊನೆಯುಸಿರನ್ನು ಎಳೆಯುವ ಮೊದಲೇ ಹೆಂಡತಿಯನ್ನು (ಪು.ಲ. ಅವರ ತಾಯಿ) ತಮ್ಮ ಹತ್ತಿರಕ್ಕೆ ಕರೆದು, "ನೀನು ಈತನಿಗೆ ದೊರಕುವ ಹಲವಾರು ಗೌರವಗಳನ್ನು ಕಾಣುವಿ. ನಾನು ಏನನ್ನೂ ಕಾಣಲಾರೆ. ಇನ್ನೂ ಹೊರಟೆ...." ಎಂದರಂತೆ.

ತಂದೆಯ ಮರಣದ ತರುವಾಯ ಕೆಲವೇ ದಿನಗಳಲ್ಲಿ ಪು.ಲ. ಮುಂಬಯಿಯನ್ನು ತೊರೆದರು. ಅವರಿಗೆ ತಮ್ಮ ಹೊಟ್ಟೆ, ಓದುಗಳಿಗಾಗಿ ಬಹಳ ಪರದಾಡಬೇಕಾಯಿತು. ಕಂಡ ಕಂಡಲ್ಲಿ ಚಿಕ್ಕ ಪುಟ್ಟ ನೌಕರಿಗಳನ್ನು ಹಿಡಿದು ನಾಟಕ, ಚಿತ್ರಪಟಗಳಲ್ಲಿ ದುಡಿದು, ಚಿತ್ರಗಳಿಗಾಗಿ ಸಂಭಾಷಣೆಗಳನ್ನು ಬರೆದು, ನಾಲ್ಕು ದುಡ್ಡುಗಳಿಸುತ್ತ ಕೈಲಾದ ಮಟ್ಟಿಗೆ ಓದನ್ನು ಮುಂದುವರಿಸಿದರು. 20 ಫೆಬ್ರುವರಿ 1950 ರಂದು ನಾಟಕಕಾರ ಚಿಂತಾಮಣಿರಾವ್ ಕೋಲ್ಹಟಕರರಿಗೆ ಬರೆದ ಅವರ ಕಾಗದ ನೋಡುವಂಥದು. ಚಿಂತಾಮಣಿರಾಯರಿಂದ ನಾಟ್ಯ ಕಲೆಯ ಪಾಠಗಳನ್ನು ಹೇಳಿಸಿಕೊಳ್ಳುವ ಕಾಲಕ್ಕೆ ಅವರು

ಕಾಲೇಜಿನಲ್ಲೂ ಓದುತ್ತಿದ್ದರು. ಮುಂದೆ ಸಾಂಗಲಿಗೆ ಕವಿ ಗಿರೀಶರಲ್ಲಿಗೆ ಹೋದರು. ಸಾಂಗಲಿಯಿಂದ ಬರೆದ ಕಾಗದವಿದು.

"ನಿನ್ನೆ ತಾನೆ ಶ್ರೀ ರಾಜಾಧ್ಯಕ್ಷರಿಂದ ಕಾಗದ ಬಂದಿದೆ. ತಾವು 'ಜೀವ ಶಿವರ ಭೆಟ್ಟಿ' ಚಿತ್ರ ನಡೆದುದನ್ನು ಕಂಡುದಾಗಿ ಬರೆದಿದ್ದಾರೆ. ದಿಗ್ದರ್ಶನವನ್ನು ಕುರಿತು ಹೆಚ್ಚಿಗೆ ಬರೆದಿದ್ದಾರೆ. ಆದರೆ ಪ್ರೇಕ್ಷಕರ ಸಂದಣಿ ಬೇಕಿದ್ದಷ್ಟು ಕೂಡು ತ್ತಿಲ್ಲವಂತೆ. ಅವರ ಈ ಕೊನೆಯ ಅಭಿಪ್ರಾಯ ದಿಂದ ನನಗೆ ಏನೂ ಅನಿಸಲಿಲ್ಲ. ಅದಕ್ಕ ಕಾರಣವಿಷ್ಟೇ ಅದೆಂದರೆ ಜನರ ಎಮೋಶನಲ್ ಲೆವೆಲ್ ಇಷ್ಟೊಂದು ಕೆಳಮಟ್ಟದಲ್ಲಿರುವಾಗ ಅವರು ಒಳ್ಳೆಯ ಸಂಗತಿಗಳಿಗೆ ಆಶ್ರಯವನ್ನು ನೀಡಲಾರರೆಂಬುದನ್ನು ನಾಟಕ, ಸಿನೆಮಾ ಕ್ಷೇತ್ರಗಳ ಕೆಲವು ವರ್ಷಗಳ ಅನುಭವ ದಿಂದಾಗಿ ಕಂಡುಕೊಂಡಿದ್ದೇನೆ.

"ಸದ್ಯಕ್ಕೆ ಎಮ್.ಎ. ಪರೀಕ್ಷೆಯ ಸಿದ್ಧತೆಗಾಗಿ ಇಲ್ಲಿಗೆ ಬಂದಿದ್ದೇನೆ. ಬಿ.ಎ.ಯನ್ನಂತೂ ನಿಮ್ಮಲ್ಲಿ ನಾಟ್ಯಕಲೆಯ ಪಾಠಗಳನ್ನು ಹೇಳಿಸಿ ಕೊಳ್ಳುತ್ತಲೇ ಸಾಗಿಸಿದ್ದೆ. ಸಿನೇಮಾದ ವಾತಾವರಣದಲ್ಲಿ ಓದಿಗೆ ಅವಕಾಶ ಇಲ್ಲದ್ದ ರಿಂದ ಅದರಿಂದ ದೂರ ಸರಿದೆ. ನಾನು ಸಾಂಗಲಿಗೆ ಬಂದ ಹಿನ್ನೆಲೆಯಲ್ಲಿ ಏನೇನೋ ತರ್ಕ ಕುತರ್ಕಗಳು ಸಾಗಿದುವಂತೆ. ಅವುಗಳ ಬಗೆಗೆ ಓದುತ್ತಿರುತ್ತೇನೆ: ಕೇಳುತ್ತಿರುತ್ತೇನೆ. ಮೋಜೆನ್ನಿಸುತ್ತದೆ. ಎಲ್ಲ ಸಂಗತಿಗಳನ್ನು ರೂಪಾಯಿ, ಆಣೆ ಪೈಗಳಲ್ಲಿ ಅಳೆಯಲು ಆರಂಭವಾದ್ದರಿಂದ ನನ್ನ ಓದಿನ ಬಗೆಗೆ ಈ ತರಹದ ಕುಚೋದ್ಯ ನಡೆದುದದರಲ್ಲಿ ಅಚ್ಚರಿ ಯೇನಿಲ್ಲ. ಚಿತ್ರಪಟದ ವ್ಯವಸಾಯದಲ್ಲಿ ಕಳೆದ ಎರಡು ಎರಡೂವರೆ ವರ್ಷಗಳಲ್ಲಿ ನಾನು ಒಟ್ಟು ಹನ್ನೆರಡು ಚಿತ್ರಗಳಲ್ಲಿ ಕೆಲಸ ಮಾಡಿ ದಂತಾಗಿದೆ. ಪುಣೆಯನ್ನು ಬಿಟ್ಟು ಇಲ್ಲಿಗೆ ಬಾರದಿದ್ದರೆ ಕಳೆದ ಎರಡು ತಿಂಗಳುಗಳಲ್ಲಿ ಅವುಗಳ ಸಂಖ್ಯೆ ಇನ್ನಷ್ಟು ಹೆಚ್ಚಬಹುದಿತ್ತು. ಹೆಸರು ಹಾಗೂ ಹಣಗಳಿಸಲು ಅಲ್ಲಿಯ ಗದ್ದಲದೊಡನೆ ನಾನೂ ದನಿಗೂಡಿಸಬೇಕಿತ್ತು. ಆದರೆ ಅದು ನನಗೆ ಸರಿ ಕಾಣಲಿಲ್ಲ. ಕಡ್ಡಾ ಯದ ವಿಶ್ರಾಂತಿ ಅದಕ್ಕೂ ಹೆಚ್ಚಿಗೆ ಕಡ್ಡಾಯದ ಓದಿಗಾಗಿ ಇಲ್ಲಿಗೆ ಬಂದಿದ್ದೇನೆ. ಪರೀಕ್ಷೆ ಮೇ ತಿಂಗಳಲ್ಲಿದೆ. ತರುವಾಯ ಪುಣೆಗೆ ಹಿಂದಿರುಗು ವೆನು. ನನ್ನ ಕೆಲವು ಚಿತ್ರಪಟಗಳು ಪುಣೆ, ಮುಂಬಯಿಗಳಲ್ಲಿ ಪ್ರದರ್ಶನಗೊಳ್ಳುತ್ತಿವೆ. ನೀವು ಅವುಗಳನ್ನು ನೋಡಕೂಡದು!"

ಪು.ಲ ಅವರ ಕೊನೆಯ ಚಿತ್ರಪಟ 'ಗುಳಾಚಾ ಗಣಪತಿ' (ಬೆಲ್ಲದ ಬೆನಕ). ಅದು ಇಡಿಯಾಗಿ ಪು.ಲ.ಮಯವಾಗಿತ್ತು. ಕಥೆ, ಪಟಕಥೆ, ಸಂಭಾಷಣೆ, ಗೀತ. ಸಂಗೀತ ದಿಗ್ದರ್ಶನವೂ ಅಲ್ಲದೆ ನಾಯಕನ ಪಾತ್ರವೂ ಅವರದೇ! ಈ ಚಿತ್ರಪಟವು ಎಲ್ಲೆಡೆಗಳಲ್ಲೂ ಚೆನ್ನಾಗಿಯೇ ವಿಜೃಂಭಿಸಿತು. ಆದರೆ ಅದರಿಂದ ಪು.ಲ. ಗಳಿ ಸಿದ್ದೇನು? 'ಗುಳಾಚಾ ಗಣಪತಿ' ಪುಣೆಯಲ್ಲಿ ಬಿಡುಗಡೆಯಾದ ದಿನ ನೋಡಲು ಪು.ಲ. ಅವ ರಿಗೆ ಕರೆ ಹೋಗಲಿಲ್ಲ. ಪು.ಲ., ಸುನೀತಾ ಬಾಯಿ ಹಾಗೂ ಮಂಗೇಶ ವಿಠ್ಠಲ ರಾಜಾಧ್ಯ ಕ್ಷರು. ಚಿತ್ರದ ಮೊದಲ ಆಟವನ್ನೇ ತಿಕೀಟು ಪಡೆದು ನೋಡಬೇಕಾಯಿತು!

ಇಷ್ಟಾಗಿಯೂ ಪು.ಲ. ಅವರು ತಮ್ಮ ಮನ ದಲ್ಲಿ ಯಾವ ತರಹದ ಕಹಿಯನ್ನುಳಿಸದೆ ಚಿತ್ರೋದ್ಯಮವನ್ನು ತೊರೆದು ಶಿಕ್ಷಣ ರಂಗ ವನ್ನು ತಮ್ಮದನ್ನಾಗಿ ಮಾಡಿಕೊಂಡರು. 1950ರ ಜೂನಿನಲ್ಲಿ ಎಮ್.ಎ. ಪಾಸು ಮಾಡಿ ನವೆಂಬರಿನಲ್ಲಿ ಬೆಳಗಾವಿಯ 'ರಾಣಿ ಪಾರ್ವತಿದೇವಿ' ಕಾಲೇಜಿನಲ್ಲಿ ಮರಾಠಿಯ ಪ್ರಾಧ್ಯಾಪಕರಾಗಿ ಸೇರಿದರು. ಪು.ಲ. ಹಾಗೂ ಮಂಗೇಶ ವಿಠ್ಠಲ ರಾಜಾಧ್ಯಕ್ಷ ಇಬ್ಬರಿಗೂ ಮಿತ್ರರಾದ ಬಾಬುರಾವ್ (ಆರ್.ಎಸ್.) ರೇಗೆ ಆಗ ಆ ಕಾಲೇಜಿನ ಉಪಪ್ರಾಚಾರ್ಯ ರಾಗಿದ್ದರು. ಅವರು ಬೇಕೆಂದೇ ಪು.ಲ. ಅವ ರನ್ನು ಬೆಳಗಾವಿಗೆ ಕರೆದೊಯ್ದರು. ಪು.ಲ. ಪ್ರಾಧ್ಯಾಪಕರಾದುದು ಅವರ ಅಜ್ಜ ಋಗ್ವೇದಿ ಯವರನ್ನು ಮಾತ್ರ ಬಲುಮುದಗೊಳಿಸಿತು. ಅವರು ತಮ್ಮ ತುಂಟ ಕಿಡಿಗೇಡಿ ಹಾಗೂ ದಾರಿ ಗೆಟ್ಟ ಮೊಮ್ಮಗ ಈಗಲಾದರೂ ದಾರಿಗೆ ಬಂದ ನೆಂದುಕೊಂಡರು. ಅವರು ಪು.ಲ. ಅವರಿಗೆ "ಏನೋ! ಈಗ ನೀನು ಪ್ರೊಫೆಸರನಾದಿ. ಇನ್ನು ಮೇಲಾದರೂ ತುಸು ಗಂಭೀರವಾಗಿ ನಡೆದು ಕೊಳ್ಳಲು ಕಲಿತುಕೊ! ಜನ ನಿನ್ನನ್ನು ಒಬ್ಬ ವಿದ್ವಾಂಸನೆಂದು ಕಾಣಹತ್ತುವರು!" ಎಂದರು. ಆದರೆ ಅಂತಹದೇನೂ ಆಗಲಿಲ್ಲ 'ಪು.ಲ ತಮ್ಮ

ವಿದ್ಯಾರ್ಥಿಗಳಿಗೆ ಅಚ್ಚು ಮೆಚ್ಚಿನವರು. ಕಾಲೇಜಿನ ವ್ಯವಸ್ಥಾಪಕರಿಗೂ ಅವರಿಗೂ ಆಗದಂತಾಯಿತು. ಹೀಗಾಗಿ ಮುಂದಿನ ಎರಡೇ ಎರಡು ವರ್ಷಗಳಲ್ಲಿ ಬೆಳಗಾವಿಯ ಕಲಾಪ್ರೇಮಿಗಳ ಮಮತೆ ಹಾಗೂ 'ರಾವಸಾಹೇಬ' ಹರಿಹರರಂತಹ ಮಿತ್ರರನ್ನು ಗಳಿಸಿದ ಪು.ಲ. ಬೆಳಗಾವಿಯನ್ನು ಬಿಟ್ಟು ಹೊರಡುವಂತಾಯಿತು. ಪ್ರಾಧ್ಯಾಪಕರು ಹಾಗೂ ವಿದ್ಯಾರ್ಥಿಗಳು ಕೂಡಿಕೊಂಡು ಕಾಲೇಜಿನ ವ್ಯವಸ್ಥಾಪಕರೊಂದಿಗೆ ಜಗಳಕ್ಕೆ ಇಳಿಯು ತ್ತಲೇ ಪು.ಲ. ಯಾವುದೇ ಮುಚ್ಚು ಮರೆಯಿಲ್ಲದೆ ನೇರವಾಗಿ ವ್ಯವಸ್ಥಾಪಕರನ್ನು ಎದುರು ಹಾಕಿಕೊಂಡರು. ಅವರೊಂದಿಗೆ ಜಗಳ ಕಾದು. ಪಂಥ ಹೂಡಿ ಕೊನೆಗೆ ಬೆಳಗಾವಿಯನ್ನು ತೊರೆದು ಮುಂಬಯಿಯನ್ನು ಸೇರಿಕೊಂಡರು. ಅಲ್ಲಿಯ ಕೀರ್ತಿ ಕಾಲೇಜಿನಲ್ಲಿ ಮರಾಠಿಯ ಪ್ರಾಧ್ಯಾಪಕತ್ವ, ತರುವಾಯ ಮಾಲೆಗಾವಿಯ ಮಹಾತ್ಮಾ ಗಾಂಧಿ ವಿದ್ಯಾಮಂದಿರದ ಮುಖ್ಯಸ್ಥ; ಮುಂದೆ ಪುಣೆ, ಮುಂಬಯಿ, ದಿಲ್ಲಿ, ಆಕಾಶವಾಣಿಯಲ್ಲಿ, ಯುನೆಸ್ಕೋ ಶಿಷ್ಯ ವೇತನ ಪಡೆದು, ಲಂಡನ್ನಿನಲ್ಲಿ ಬ್ರಾಡ್ ಕಾಸ್ಟಿಂಗ್ ಹಾಗು ಟೆಲಿವಿಜನ್ ತರಬೇತಿ, ಅಲ್ಲಿಂದ ಮರಳಿ ಮತ್ತೆ ದಿಲ್ಲಿಯ ಟೆಲಿವಿಜನ್ನಿನಲ್ಲಿ ಭಾರತದಲ್ಲಿ ಮೊದಲ ಟೆಲಿವಿಜನ್ ಕಾರ್ಯಕ್ರಮವನ್ನು ಸಾದರಪಡಿಸುವ ಗೌರವ.

ಈ ರೀತಿ ಎಲ್ಲವೂ ಸರಿಯಾಗಿ ಸಾಗಿತ್ತು. ಉಳಿದವರ ಕಣ್ಣಲ್ಲಿ ಅವರು ಸುಖವಾಗಿಯೇ ಇದ್ದರು. ಪಂಡಿತ ನೆಹರೂರವರೆಗಿನ ಎಲ್ಲರೂ ಅವರ ಬಗೆಗೆ ಸಮಾಧಾನಿಗಳಾಗಿದ್ದರು. 'ಪಾಂಡೇಜಿ' ತಮ್ಮೆಲ್ಲ ಸಹಕಾರಿಗಳಲ್ಲಿ ಬೇಕಾದವರಾಗಿದ್ದರು. ಆದರೆ ಒಂದೆಡೆಯಲ್ಲಿ ನೆಲೆಗೊಳ್ಳುವುದು ಅವರ ಜಾಯಮಾನವೇ ಅಲ್ಲ. ಶಾಸನದ ಇಲಾಖೆಗಳ ಬಗೆಗೆ ಅವರಲ್ಲಿ ಒಮ್ಮೆಲೆ ಜಿಗುಪ್ಸೆ ಕಾಣಿಸಿಕೊಂಡಿತು. ತಮ್ಮಲ್ಲಿಯ ಕಲಾವಿದ ಉಸಿರುಗಟ್ಟುತ್ತಿದ್ದಾನೆನ್ನಿಸಿತು ಅವರಿಗೆ. ನಿಂತ ಕಾಲ ಮೇಲೆ ರಾಜೀನಾಮೆಯನ್ನು ಕೊಟ್ಟು ತಮ್ಮ ದಿಲ್ಲಿಯ ಡೇರೆಯನ್ನು ಕಿತ್ತಿದರು. ಮುಂದೇನು? ಎಂಬುದು ಅವರಿಗೂ ಹೊಳೆದಿರಲಿಲ್ಲ. ಆಗಷ್ಟೆ ಏಕಪಾತ್ರ ಪ್ರಯೋಗಗಳನ್ನು ನೀಡಲು ಆರಂಭಿಸಿದ್ದರು. ಇನ್ನೂ ಅವುಗಳ ಅದೃಷ್ಟ ತಿಳಿದಿರಲಿಲ್ಲ.

## ಮಾಸ್ತಿ ಮುತ್ತು

"ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನನ್ನ 'ತುಝೆ ಆಹೆ ತುಜ ಪಾಶಿ' ನಾಟಕದ ಕನ್ನಡ ಪ್ರಯೋಗವನ್ನು ಹವ್ಯಾಸೀ ತಂಡವೊಂದು ಕರ್ನಾಟಕದಲ್ಲಿ ಆಡುತ್ತಿತ್ತು. ಆ ಪ್ರಯೋಗಗಳ ರೌಪ್ಯ ಮಹೋತ್ಸವ ಬೆಂಗಳೂರಲ್ಲಿ ದಿವಂಗತ ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ನಡೆಯಿತು- ತುಂಬ ಉತ್ಸಾಹದ ವಾತಾವರಣದಲ್ಲಿ. ಆ ಕಾಲಕ್ಕೆ ನಾನು ಅಲ್ಲಿ ಉಪಸ್ಥಿತನಿದ್ದೆ. ನಾಟಕ ಮುಗಿಯುವವರೆಗೆ ಮಾಸ್ತಿ ಒಂದೇ ಸಮನೇ ನಗುತ್ತಲೇ ಇದ್ದರು. ನಾಟಕ ಮುಗಿಯುವುದಕ್ಕೆ ಮುನ್ನ ವೇದಿಕೆಗೆ ನನ್ನನ್ನು ಕರೆತಂದು ಗೌರವಿಸಿದರು. ಆ ಹಿರಿಯರಿಗೆ ನನ್ನ ಈ ನಾಟಕ ಹಿಡಿಸಿದೆಯೆಂಬುದೇ ನನಗೆ ಸಂತೃಪ್ತಿ ತಂದಿತ್ತು. ಆ ಒಂದು ತೃಪ್ತಿ ಭಾವದಿಂದ ನಾನು ಅವರ ಹಿಂದಿನಿಂದಲೇ ವೇದಿಕೆಯನ್ನೇರಿದೆ. ಆದರೆ ಮುಂದೆ ನಡೆದದ್ದು ನನ್ನ ಊಹೆಯನ್ನು ಮೀರಿತ್ತು. ಎಲ್ಲರೂ ನೋಡ ನೋಡುತ್ತಿರುವಂತೆಯೇ ಮಾಸ್ತಿ ನನ್ನನ್ನು ಅಲ್ಲಿಯೇ ಅಪ್ಪಿಕೊಂಡು ಮುದ್ದಾಡಿ ಬಿಟ್ಟರು- ಮೊಮ್ಮಗನ ಹುಡುಗಾಟ ಕಂಡು ಹರ್ಷಿಸುವ ಅಜ್ಜನಂತೆ! ನನ್ನ ಜೀವಮಾನದಲ್ಲಿ ನಾನು ಅದೆಷ್ಟೋ ಪ್ರಶಸ್ತಿ ಪದಕಗಳನ್ನು ಪಡೆದಿದ್ದೇನೆ. ಆದರೆ ಮಾಸ್ತಿಯವರ ಆ ಮುತ್ತು, ಆ ಆಲಿಂಗನ ಮಾತ್ರ ನನ್ನ ಮನಸಿನಲ್ಲಿ ಚಿರಸ್ಥಾಯಿಯಾಗಿ ಉಳಿದ ಆಶೀರ್ವಾದ ರೂಪೀ ಪ್ರಶಸ್ತಿ. ಒಬ್ಬ ಲೇಖಕ ಬಯಸುವ ಮನ್ನಣೆಯ ಚರಮಾವಸ್ಥೆಯೇ ಇದು."

(ಪ್ರಕಟವಾಗಲಿರುವ ಪುಸ್ತಕದಲ್ಲಿ ಸೇರಿಸಲೆಂದು ಪು.ಲ. ದೇಶಪಾಂಡೆಯವರು ಕೊಟ್ಟ, ವಿಶೇಷ ಸಂದರ್ಶನದಿಂದ.)

ಹಾಗೆಂದು ಅದಕ್ಕಾಗಿ ಕಾದು ಕುಳಿತವರಲ್ಲ, ಒಂದೆಡೆಯಲ್ಲಿ ಹೆಚ್ಚು ಕಾಲ ನೆಲೆನಿಲ್ಲದೆ ಹಿಂದಿನ ಸಿಹಿ ಕಹಿ ಅನುಭವಗಳನ್ನು ತಮ್ಮೊಂದಿಗೆ ಸಾಗಿಸದೆ ಹೊಸ ಊರಿನಲ್ಲಿ ಹೊಸ ಹುಮ್ಮಸ್ಸಿನ ಬಾಲಕನಂತೆ ಅಲೆದಾಡಿ ಇನ್ನೊಮ್ಮೆ ಹಸಿಬೆಯನ್ನು ಹೆಗಲಿಗೇರಿಸಿ ಮುಂದಿನ ದಾರಿ ಹಿಡಿಯುವುದು.....ಅವರು ಸಾಗುತ್ತ ಬಂದ ಬಗೆ ಹೀಗಿದೆ.

ಪು.ಲ. ಹಾಗೂ ಮರಾಠಿ ರಸಿಕರ ಸುದೈವದಿಂದಾಗಿ ಪು.ಲ. ಅವರ ಏಕಪಾತ್ರ ಪ್ರಯೋಗಗಳಾಗಲಿ, ಬಹುರೂಪಿಯ ಆಟಗಳಾಗಲಿ ತುಂಬ ಯಶಸ್ವಿಯಾದವು. 'ಬಟಾಟ್ಯಾಚೀ ಚಾಳ್' (ಬಟಾಟೆಯ ಚಾಳು) ಅಸಾ ಮೀ ಅಸಾ ಮೀ' (ನಾನು ಹೀಗೆ ನಾನು ಹೀಗೆ) 'ವಾರ್ಯಾವರಚೀ ವರಾತ (ಗಾಳಿದಿಬ್ಬಣ), 'ವಟವಟ (ವಟವಟ) ಪ್ರಯೋಗಗಳೆಲ್ಲ ಬಹಳ ಹೆಸರಾದವು. 'ಚಾಳ್'ಂತೂ ಜನರಿಗೆ ಹುಚ್ಚು ಹಿಡಿಸಿತೆನ್ನಬೇಕು.

ಈ ಆಟಗಳಿಂದಾಗಿಯೂ ಅವರ ಬರವಣಿಗೆಗಳಿಂದಾಗಿಯೂ ಪು.ಲ. ಅವರಿಗೆ ಅಪಾರ ಹಣಗಳಿಸಲು ಸಾಧ್ಯವಾಯಿತು. ಬೇರೆಯವರಾಗಿದ್ದರೆ ಬಂದ ಹಣವನ್ನು ಸೂರೆಗೊಳ್ಳಲಾಗಲಿ, ವಿಲಾಸಕ್ಕಾಗಲಿ, ಮುಂಬರುವ ದಿನಗಳಿಗೆಂದು ಕಾಯ್ದಿಡಲಾಗಲಿ ವಿನಿಯೋಗಿಸಬಹುದಿತ್ತು. ಆದರೆ ಪು.ಲ. ಅದಾವುದನ್ನೂ ಮಾಡಲಿಲ್ಲ. ತಾವು ಗಳಿಸಿದ ಹಣದ ದೊಡ್ಡಪಾಲನ್ನು ಒಂದು ಟ್ರಸ್ಟ್ ತಯಾರಿಸಿ ಅದರ ಮುಖಾಂತರ ಸಾರ್ವಜನಿಕ ಸೇವಾಕಾರ್ಯಗಳಿಗಾಗಿ ಕೊಡಮಾಡಿದರು. ಅನಾಥ ವಿದ್ಯಾರ್ಥಿಗೃಹ, ಅಂಧಶಾಲೆ, ಬಾಬಾ ಆಮ್ಟೆಯವರ ಕುಷ್ಠಾಶ್ರಮ, ಆಸ್ಪತ್ರೆ, ರಕ್ತದ ಬ್ಯಾಂಕುಗಳಂತಹ ಅದೆಷ್ಟೋ ಸಂಸ್ಥೆಗಳಿಗೂ ಕಾರ್ಯಗಳಿಗೂ ಅವರು ಬಿಡುಗೈಯಿಂದ ಲಕ್ಷಾವಧಿ ರೂಪಾಯಿಗಳನ್ನು ಕೊಟ್ಟಿದ್ದಾರೆ.

ಈ ಹೊತ್ತಿಗೆಯು ಬಿಡುಗಡೆಗೊಂಡು ಮಾರಾಟಕ್ಕೆ ಮಾರುಕಟ್ಟೆಗೆ ಬರುವ ಮೊದಲೇ ಇದ ರಿಂದಾಗಿ ಬರುವ ಗೌರವ ಧನದ ಹೆಚ್ಚಿನ ಪಾಲನ್ನೆಲ್ಲ ಒಂದು ಸಾರ್ವಜನಿಕ ಸಂಸ್ಥೆಗಾಗಿ ಮೀಸಲಿಟ್ಟಿದ್ದಾರೆ. ಆ ಹಣವೇ ಕೆಲವು ಸಾವಿರ ರೂಪಾಯಿಗಳಷ್ಟಾಗಿತ್ತು!

ಪು.ಲ. ಅವರ ವ್ಯಕ್ತಿತ್ವದಲ್ಲಿ ಸಾಮಾಜಿಕ ಬಾಧ್ಯತೆಯ ಅಂಶವು, ಉಳಿದೆಡೆಯಲ್ಲಿ ಸಹಜವಾಗಿ ಕಾಣಸಿಗದಂತಹದು. ನನಗದು ಬಹಳ ಆಕರ್ಷಕವಾಗಿ ಕಂಡು ಬರುತ್ತದೆ. ದುಡ್ಡು ದುಡ್ಡೆಂದು ದುಡ್ಡಿಗಾಗಿ ಬಾಯಿ ಬಿಡುತ್ತ ನಾವು ದುಡ್ಡಿಗಾಗಿ ಏನೆಲ್ಲ ಮಾಡುತ್ತಿಲ್ಲ! ಸುಳ್ಳುತನದ ದಾರಿಗಳನ್ನು ಅವಲಂಬಿಸುತ್ತೇವೆ. ಹೀಗಿರುವಾಗ ನಮ್ಮಲ್ಲಿಯ ಒಬ್ಬನಾದ ಮಧ್ಯಮ ವರ್ಗದ ಸಾದಾಮನುಷ್ಯನೊಬ್ಬ ಮಾತ್ರ ಜನರ ಬಾಳಿನ ನೆಮ್ಮದಿಗಾಗಿ ಕಲೆಯಿಂದ ಗಳಿ ಸಿದ ತನ್ನ ಹಣವನ್ನು ಅವರಿಗೆ ಅರ್ಪಿಸುತ್ತಾನೆ. ಸಾಮಾಜಿಕ ಬಾಧ್ಯತೆಯ ಈ ಮನೋಧರ್ಮವು ನನಗೆ ಪೂಜನೀಯವಾಗಿ ಕಂಡು ಬರುತ್ತದೆ. ಈ ಮನೋಧರ್ಮವನ್ನು ನಾವೂ ಬೆಳೆಯಿಸಿಕೊಳ್ಳಬೇಕು ಎನ್ನಿಸುತ್ತದೆ. ಕೊಡುಗೈ ದಾನಿಯಾಗಿ ಏನೆಲ್ಲ ಕೊಟ್ಟಿದ್ದರೂ ಅದನ್ನು ಕುರಿತು ಅವರು ಎಲ್ಲಿಯೂ ಬಾಯ್ಬಿಟ್ಟವರಲ್ಲ. ಅದೆಷ್ಟೋ ಬಾರಿ ಅವರೊಂದಿಗೆ ಹರಟುತ್ತ ಕುಳಿತವ ನಾನು. ಆದರೆ ಒಂದು ಸಲವೂ ತಪ್ಪಿ ಕೂಡ ತಾವು ಇಂಥಿಂಥ ಸಂಸ್ಥೆಗೆ ಇಷ್ಟಿಷ್ಟು ಹಣವನ್ನು ನೀಡಿದೆವು ಎಂದವರಲ್ಲ. ಅವರ ತಿಂಗಳ ಆದಾಯವೆಂದರೆ ಒಬ್ಬ ಮಧ್ಯಮ ವರ್ಗದ ವ್ಯಕ್ತಿಯ ಬಾಳಿಗೆ ತೀವ್ರ ಅಗತ್ಯವನಿಸುವಷ್ಟು ಹಣ ಮಾತ್ರ! ಅಷ್ಟು ಹಣ ಬಡ್ಡಿಯ ರೂಪದಲ್ಲಿ ಬರುವಂತೆ ಮಾಡಿದ್ದಾರೆ. ವಿಲಾಸಿ ಜೀವನವನ್ನು ಸಾಗಿಸುವುದು ಅವರಿಗೇನೂ ಕಷ್ಟದ ಮಾತಾಗಿರಲಿಲ್ಲ. ಇಂದಿಗೂ ಅದು ಸುಲಭ ಸಾಧ್ಯವಾದುದು. ಆದರೆ ನಿಜವಾದ ಒಂದು ವೈರಾಗ್ಯಭಾವ ಅವರಲ್ಲಷ್ಟೇ ಅಲ್ಲದೆ ಮಡದಿ ಸುನೀತಾಬಾಯಿಯವರಲ್ಲೂ ಇದೆ. ರೇಶನ್ ಅಂಗಡಿಗಳಲ್ಲಿ ಕಳಪೆ ಅಕ್ಕಿಯಾದರೆ ಕಳ್ಳ ಸಂತೆಯಲ್ಲಿ ಉತ್ತಮ ದರ್ಜೆಯ ಅಕ್ಕಿ ದೊರಕುತ್ತಿದ್ದ ಕಾಲದಲ್ಲಿ, ಅದನ್ನು ದುಬಾರಿ ಬೆಲೆಗೆ ಕೊಂಡುಕೊಳ್ಳುವ ಯೋಗ್ಯತೆ ತಮ್ಮಲ್ಲಿದ್ದೂ ಕೂಡ ಸುನೀತಾಬಾಯಿ ಸಾಲಿನಲ್ಲಿ ಕಾದು ನಿಂತು ತಂದ ರೇಶನ್ ಅಕ್ಕಿಯನ್ನೇ ಉಪಯೋಗಿಸುತ್ತಿದ್ದರು. ಹಾಗೆಯೇ ಪು.ಲ. ಅವರ ವೇಷವಾದರೂ ಎಂಥದೆನ್ನುವಿರಿ? ಖಾದಿ ಬಟ್ಟೆಯ ಪಾಯಜಮಾ ಹಾಗು ಕೈಮಗ್ಗದ ದಪ್ಪನೆಯ ಸಡಿಲಾದ ಅಂಗಿ. ಪಂಡಿತ ವಸಂತರಾವ ದೇಶಪಾಂಡೆ ಪು.ಲ. ಅವರ ಬಟ್ಟೆಗಳು ಸಿಂಪಿಗನು ಹೊಲಿದವು

ಗಳಲ್ಲ; ಎಂದು ಪರಿಹಾಸ್ಯ ಮಾಡುತ್ತಿದ್ದರು.

ಸ್ವಯಂಸ್ಫೂರ್ತಿಯಿಂದ ಪ್ರಭಾವಿತಗೊಳ್ಳು ವುದು ಪು.ಲ. ಅವರ ಸ್ವಭಾವ. ಅವರ ಈ ಸ್ವಭಾವವು ಅಪಾರ್ಥಕ್ಕೆ ಎಡೆಮಾಡಿಕೊಡುತ್ತದೆ. ಅದೊಂದು ಸೋಗು ಎನ್ನಲಾಗುತ್ತಿದೆ. ದಿಲೀಪ ಪುರುಷೋತ್ತಮ ಚಿತೆ ಹಾಗೂ ಭಾಲಚಂದ್ರ ನೇಮಾಡೆ ಬಹಿರಂಗವಾಗಿಯೇ ಇಂತಹ ಟೀಕೆಗಳನ್ನು ಮಾಡಿದ್ದಾರೆ. ಹಳೆಯ ದೇನಿದ್ದರೂ ಅದನ್ನು ಕುರಿತು ಪು.ಲ. ಅವರಲ್ಲಿ ಒಂದು ಕೋಮಲ ಭಾವ ಮೂಡುತ್ತದೆ. ಕಳೆದು ಹೋದ ದಿನಗಳು ಮತ್ತೆ ಬರಬೇಕೆನಿಸುತ್ತದೆ. ಚಿತ್ರೆ, ನೇಮಾಡೆಯವರ ಕಣ್ಣಲ್ಲಿ ಮಾತ್ರ ಪು.ಲ. ಬೇಕೆಂದೇ ಹೀಗೆ ಮಾಡುತ್ತಾರೆ, ಜನರನ್ನು ಖುಶಿ ಪಡಿಸಲೆಂದೇ ಸುಳ್ಳಿನ ದಾರಿಯನ್ನು ತುಳಿಯುತ್ತಾರೆ!

ಇವು ಅನ್ಯಾಯದ ಅಪವಾದಗಳು. ಇವು ಅಸೂಯೆಯಿಂದ ಹುಟ್ಟಿ ಬಂದಿರಲೂ ಸಾಕು. ಈವರೆಗೂ ಪು.ಲ. ಅವರಿಗೆ ದೊರೆತಂತಹ ವಾಚಕವರ್ಗಶ್ರೋತೃವರ್ಗ ಹಾಗೂ ಪ್ರೇಕ್ಷಕ ವರ್ಗಗಳು ಇನ್ನಾವ ಮರಾಠಿಯ ಲೇಖಕನ ಪಾಲಿಗೂ ಬಂದಿಲ್ಲ. ಪು.ಲ. ಹಾಗೂ ಜನ ಇವರಲ್ಲಿ ಬೆಳೆದಂತಹ ತೀರ ಹತ್ತಿರದ ನಂಟು ಇನ್ನೆಲ್ಲಿಯೂ ಕಂಡುಬಾರದು. ಅದರಿಂದಾಗಿ ಕೇವಲ ಜನರನ್ನು ಖುಶಿಪಡಿಸಲೆಂದೇ ಹಳೆಯ ದರ ಬಗೆಗೆ ಪು.ಲ. ನಿಟ್ಟುಸಿರು ಹಾಕುತ್ತಾರೆ ಎನ್ನಿಸುತ್ತಿರಬಹುದು. ಆದರೆ ಹಳೆಯದರಲ್ಲಿ ಚೆನ್ನಾಗಿರುವ ಅಂಶವೇನಾದರೂ ಕಂಡರೆ ಅದರ ಬಗೆಗಿನ ತಮ್ಮ ಆಕರ್ಷಣೆಯನ್ನು ಅವರು ವ್ಯಕ್ತಪಡಿಸುವುದರಲ್ಲಿ ತಪ್ಪೇನಿದೆ? ಪು.ಲ. ಅವರೇ ಒಂದೆಡೆ ಹೇಳಿದಂತೆ "ಚೆಂದ ಚೆಂದದ ಬೀಸುವಕಲ್ಲಿನ ಹಾಡುಗಳನ್ನು ಕೇಳಿದ್ದೇನೆ. ಅವುಗಳ ಬಗೆಗೆ ನನಗೆ ಎಲ್ಲಿಲ್ಲದ ಆಕರ್ಷಣೆ. ಆದರೆ ಅದಕ್ಕಾಗಿ ಯಾರಾದರೂ ಬೀಸುವ ಕಲ್ಲನ್ನು ತಿರುವುತ್ತ ಕೂಡಬೇಕೆಂದು ಮಾತ್ರ ನನಗನ್ನಿಸುವುದಿಲ್ಲ."

ಮಂಗೇಶ ವಿಠಲ ರಾಜಾಧ್ಯಕ್ಷರು ಹತ್ತಿರದಿಂದ ಪು.ಲ. ಅವರನ್ನು ಬಹಳ ಕಾಲದಿಂದಲೂ ಬಲ್ಲವರು. ಅಲ್ಲದೆ ಗುಣಗಳಿಗಿಂತಲೂ ಅವ ಗುಣಗಳನ್ನು ಹೆಚ್ಚು ಮಾರ್ಮಿಕವಾಗಿ ವಿಶ್ಲೇಷಿಸುವವರು! ಇತ್ತೀಚೆಗೆ ಅವರೊಂದಿಗೆ ಪು.ಲ. ಅವರನ್ನು ಕುರಿತು ಸಾಕಷ್ಟು ಚರ್ಚಿಸಿದೆ. ಅವರೆನ್ನುವಂತೆ ಪು.ಲ.ಅವರಲ್ಲಿ ಹಳೆಯದರ ಬಗೆಗಾಗಲಿ, ಸಂಸ್ಕೃತಿಯ ಒಳ್ಳೆಯ ಅಂಶಗಳ ಬಗೆಗಾಗಲಿ ಇರುವ ಆಕರ್ಷಣೆಯನ್ನು ಅರ್ಥಮಾಡಿಕೊಳ್ಳಬೇಕಿದ್ದರೆ ಅವರ ಬಾಲ್ಯದ ವಿಶಿಷ್ಟ ಹಿನ್ನೆಲೆಯನ್ನು ಅರಿತುಕೊಳ್ಳಬೇಕು, ಅವರ ಅಂದಿನ ಮನೆ ಹಾಗೂ ಆ ಕಾಲದ ವಿಲೇಪಾರ್ಲೆಗಳನ್ನು ಕುರಿತು ಯೋಚಿಸಬೇಕು.

ಸಾಮಾನ್ಯವಾಗಿ ನಾವೆಲ್ಲ ಯಾವುದ ರಿಂದಲೂ ಪ್ರಭಾವಿತರಾಗುವದೇ ಕಡಿಮೆ ಯಾದ್ದರಿಂದ ಪ್ರಭಾವವನ್ನೆ ಒಂದು ದೋಷ ವೆಂದು ಭಾವಿಸುತ್ತೇವೆ. ಆದರೆ ಪು.ಲ. ಬರಿ ಪ್ರಭಾವಿತರಾಗುವವರಷ್ಟೇ ಅಲ್ಲ; ತಾವಾಗಿಯೇ ಪ್ರಭಾವಕ್ಕೊಳಗಾಗುವವರು. ಬಾಲ ಗಂಧರ್ವರು ಎಲ್ಲಿಯೇ ಕಾಣಲಿ ಪು.ಲ. ಬಾಗಿ ನಮಸ್ಕರಿಸುತ್ತಿದ್ದರು. ಅವರು ಎಂದಿಗೂ ಯಾವ ದೇವರಿಗೂ ಕೈ ಮುಗಿದವರಲ್ಲ, ಅವರು ಪಂಡರಪುರದ ವಿಠಲನ ಪಾದಗಳಿಗೆ ತಮ್ಮ ಹಣೆಯನ್ನೊತ್ತಿದ್ದು ಅವನ ದೇವತ್ವಕ್ಕೆ ಮಾರುಹೋಗಿಯಲ್ಲ, ಆದರೆ ಹಿಂದೆಂದೋ ಅವೇ ಪಾದಗಳನ್ನು ಜ್ಞಾನೇಶ್ವರ ತುಕಾರಾಮರಂತಹ ಸಂತಶ್ರೇಷ್ಠರ ಹಣೆಗಳು ಸ್ಪರ್ಶ ಮಾಡಿದ್ದವು ಎಂಬುದಕ್ಕಾಗಿ! ಪು.ಲ. ರೇಡಿಯೋದಲ್ಲಿ ಕೆಲಸಕ್ಕಿರುವಾಗ ಒಂದು ಬಾರಿ ತಿರಖವಾ ಅವರು ತಬಲೆಗಳನ್ನು ಹೊತ್ತು ತಂದದ್ದನ್ನು ಕಂಡು ಎಂತಹ ದೊಡ್ಡ ಕಲಾವಿದನಿಗೆ ತಬಲೆಗಳನ್ನು ಎತ್ತಬೇಕಾಯಿತಲ್ಲ ಎಂದು ಪು.ಲ. ಅವರಿಗೆ ಕೆಡಕೆನಿಸಿ ಉಳಿದವರ ಮೇಲೆ ಸಿಟ್ಟೂ ಬಂದಿತಂತೆ! ವಿದೇಶದ ಒಂದು ಥಿಯೇಟರಿನಲ್ಲಿ ಒಮ್ಮೆ ಅವರಿಗೆ ದೂರದಲ್ಲಿ ಚಾರ್ಲಿಚಾಪ್ಲಿನ್ ಕಂಡಾಗ ತಕ್ಷಣ ಅವರ ಕಣ್ಣುಗಳು ಹನಿಗೂಡಿದುವಂತೆ. ನಿಂತಲ್ಲಿಂದಲೇ ಪು.ಲ. ಕೈಜೋಡಿಸಿದರಂತೆ. ಇದು ಅವರ ಸ್ವಭಾವ. ಮದುವೆಯಾಗುತ್ತಲೇ ಮದುಮಗಳು ಅತ್ತೆಯ ಮನೆಗೆ ಹೊರಟ ದೃಶ್ಯವನ್ನು ತಮ್ಮಿಂದ ನೋಡಲಾಗುವುದಿಲ್ಲ ಎನ್ನುತ್ತಾರೆ. ಒಂದೊಂದು ಸ್ವಭಾವದ ಗುಣಧರ್ಮವೇ ಅಂಥದು. ಹಳೆಯದರ ಬಗೆಗಿನ ಆಕರ್ಷಣೆ ಎಂದ

ಮಾತ್ರಕ್ಕೆ ಸನಾತನ ರೂಢಿ, ಪರಂಪರೆಗಳ ಆಕರ್ಷಣೆ ಎಂದೇನೂ ಅಲ್ಲ. ಅವುಗಳ ಬಗೆಗೆ ಅವರಲ್ಲಿ ಜಿಗುಪ್ಸೆಯಿದೆ. ತಂದೆ ತೀರಿಕೊಂಡಾಗ ಪು.ಲ. ಇಪ್ಪತ್ತು ಇಪ್ಪತ್ತೆರಡು ವಯಸ್ಸಿನವರಿದ್ದರು: ಆ ಕಾಲಕ್ಕೂ ಅವರು ತಂದೆಯ ಮರಣೋತ್ತರ ಕರ್ಮಕಾಂಡವನ್ನು ಆಚರಿಸಲಿಲ್ಲ.

ರಾಜಾಧ್ಯಕ್ಷರ ಅಭಿಪ್ರಾಯದಂತೆ ಪು.ಲ. ತೀರ ಆಧುನಿಕರು. ಗಂ.ಬಾ. ಸರದಾರರಂತಹ ವಿಖ್ಯಾತರಾದ ವಿಚಾರವಂತರ ಪ್ರಭಾವದಲ್ಲಿ ಬೆಳೆದವರು. ಅವರು ಎಲ್ಲ ಹೊಸ ಹೆಸ ಪ್ರಗತಿ ಪರವಾದ ವಿಚಾರಗಳನ್ನು ಸ್ವಾಗತಿಸಿದ್ದಾರೆ. ಹಳೆಯ ಗೊಡ್ಡು ಸಂಪ್ರದಾಯಗಳಿಗೆ ತಪ್ಪಿಯೂ ಶರಣಾದವರಲ್ಲ. ಅವರ ಮನೋಧರ್ಮವೇನೊ ತುಸು ಹಿಡಿದು ಬಿಟ್ಟು ಮಾಡುವಂತಹದು. ಏನಾದರೂ ಹೊಸದು ಚೆನ್ನಾಗಿರುವದನ್ನು ಕಂಡರಾಯಿತು; ಅದಕ್ಕೆ ಧುಮುಕಿ ತಾವೂ ಅದರೊಂದಿಗೆ ಮುಂದಕ್ಕೆ ಸಾಗಿಯಾರು. ಆದರೆ ಬಹಳ ಕಾಲ ಅದರೊಂದಿಗೇನೆ ಉಳಿದಾರೆಂಬ ಭರವಸೆ ಯಿಲ್ಲ. ಧುಮುಕುವ ಮುನ್ನ ಏನನ್ನಾದರೂ ತಡೆಯುವ ಯೋಚನೆಯಿರದು. ಹೊರಳಿ ಬರು ವಾಗಲೂ ಏನನ್ನಾದರೂ ಸಾಧಿಸುವ ಛಲ ವಿರದು.

ಪು.ಲ. 1942ರ ಸುಮಾರಿಗೆ ರಾಷ್ಟ್ರ ಸೇವಾ ದಲ ಸಮಾಜವಾದಿ ಪಕ್ಷಗಳ ಬದಿಯವರಾಗಿ ದ್ದರು. ಮುಂದೆ ಆ ಪಕ್ಷದಲ್ಲಿ ಕಂಡುಬಂದ ವಿಸಂಗತಿಗಳಿಂದಾಗಿ ಸಮಾಜವಾದಿಗಳೆಲ್ಲ ಅವರ ಚೇಷ್ಟೆಗೆ ಗುರಿಯಾದರು. ಬಾಲಗಂಧ ರ್ವರ ಬಗೆಗೆ ತುಂಬ ಭಕ್ತಿಯಿದ್ದೂ ಮುಪ್ಪಿನ ಬಾಲಗಂಧರ್ವರು ತರುಣ ನಾಯಿಕೆಯರ ಪಾರ್ಟುಗಳನ್ನು ಮಾಡುವ ಹಟ ತೊಟ್ಟದ್ದು ಇವರ ಚೇಷ್ಟೆಯ ವಿಷಯವಾಯಿತು. 1945ರ ಸುಮಾರಿಗೆ 'ಬಿಚ್ಚಾರೇ ಸೌಭದ್ರ' (ಪಾಪದ ಸೌಭದ್ರ) ಎಂಬ ಮೂರಂಕಿನ ಒಂದು ಫಾರ್ಸು ಬರೆದು ಬಾಲ ಗಂಧರ್ವರ ಹಟವನ್ನು ವ್ಯಂಗ್ಯಕ್ಕೆ ಡುಮಾಡಿದ್ದರು. ವಿನೋಬಾರ ಭೂದಾನದ ಕೆಲಸವು ಸುರುವಾದ ಮೊದಲಲ್ಲಿ ಇವರು ಕೆಲ ಕಾಲ ವಿನೋಬಾ ಭಕ್ತರಾಗಿ ಪಾದಯಾತ್ರೆಗಳಲ್ಲೂ ಭಾಗವಹಿಸುತ್ತಿದ್ದರು. ಆದರೆ ತುರ್ತು ಪರಿಸ್ಥಿತಿಯಲ್ಲಿ ವಿನೋಬಾ ತಳೆದ ನಿಲುವಿಗಾಗಿ ಕಠೋರವಾದ ಮಾತಿನ ಚಾಟಿಯೇಟುಗಳನ್ನು ಬೀಸಿದರು.

ಹೊಸದೇನಿದ್ದರೂ, ಸಮಾಜ ಹಿತದ್ದೇನೆ ಇದ್ದರೂ ಹುಮ್ಮಸ್ಸಿನಿಂದ ಅಷ್ಟೆ ಅಲ್ಲ, ತುಸು ಅತಿಯೆನಿಸುವ ಹುಮ್ಮಸ್ಸಿನಿಂದಲೇ ಪು.ಲ. ಅದರಲ್ಲಿ ಧುಮುಕುವರು. ವಿನೋಬಾರ ಅಂದಿನ ಭೂದಾನ ಕಾರ್ಯವೇ ಇರಲಿ, ಬಾಬಾ ಅಮ್ಟೆಯವರ ಇತ್ತೀಚಿನ ಕುಷ್ಠಾಶ್ರಮದ ಕಾರ್ಯವಿರಲಿ, ಪು.ಲ. ಅವು ಗಳಲ್ಲಿ ಪೂರ್ತಿ ಮುಳುಗಿಬಿಡುತ್ತಾರೆ. ಅವರು ಎಷ್ಟೇ ಹುರುಪಿನಿಂದ ಕುಣಿಯಲಿ, ತಮ್ಮ ಹುಮ್ಮಸ್ಸಿನ ರಭಸದಲ್ಲಿಯೂ ಮೌಲ್ಯಗಳನ್ನು ಮರೆತವರಲ್ಲ. ಉದಾಹರಣೆಯನ್ನೇ ಹೇಳ ಬೇಕೆಂದರೆ, ಸತ್ಯ ಸಾಯೀ ಬಾಬಾ, ಆಚಾರ್ಯ ರಜನೀಶರಂಥವರ ಮಹಾಪೂರಗಳು ಬಂದಾ ಗಲೂ ಪು.ಲ. ಅವುಗಳಲ್ಲಿ ಹಾರಿ ಕೊಚ್ಚಿ ಹೋದವರಲ್ಲ. ಇದಕ್ಕೆ ವಿಪರೀತವಾಗಿ ಅಂಥವರನ್ನು ಗೇಲಿ ಮಾಡದೆ ಇರರು!

ಪು.ಲ. ಅವರ ಇನ್ನೊಂದು ವಿಶಿಷ್ಟತೆಯು ಹೆಗ್ಗಳಿಕೆಯಿಂದ ಕೂಡಿದ್ದು ನನಗೆ ಅನು ಕರಣೆಯವೆನ್ನಿಸುತ್ತದೆ. ಅದೆಂದರೆ ಚಿತ್ರಪಟ ಸೃಷ್ಟಿಯಲ್ಲಾಗಲಿ ಬೆಳಗಾವಿಯ ಕಾಲೇಜಿನಲ್ಲಾ ಗಲೀ ಏನನ್ನಾದರೂ ಪಡೆಯಲೆಂದು ಎಂದಿಗೂ ಒಪ್ಪಂದವನ್ನು ಮಾಡಿಕೊಂಡವ ರಲ್ಲ, ದೀನರಾದವರೂ ಅಲ್ಲ. ಮಾಲೇಗಾವಿಯ ಪ್ರಕರಣವಂತೂ ಅವರಷ್ಟೇ ಅಲ್ಲದೆ ಸುನೀತಾಬಾಯಿಯವರ ನೇರ ನಡೆ ನುಡಿಯ ಒಂದು ಉತ್ತಮ ಉದಾಹರಣೆ. ಭಾವುಸಾಹೇಬ ಹಿರೇಯವರು ಮಂತ್ರಿಗಳಿ ದ್ದಾಗ ಮಾಲೇಗಾವಿಯಲ್ಲಿ ಮಹಾತ್ಮಾ ಗಾಂಧಿ ವಿದ್ಯಾಮಂದಿರವನ್ನು ತೆರೆದರು. ಪು.ಲ. ಅವರನ್ನು ಮುಖ್ಯಸ್ಥರನ್ನಾಗಿ ನೇಮಿಸಿದರು: ಸುನೀತಾಬಾಯಿಯವರನ್ನು ಆ್ಯಡಮಿನಿಸ್ಟ್ರೆಟಿವ್ ಆಫೀಸರ್ ಹಾಗೂ ವಸತಿಗೃಹದ ಮುಖ್ಯಸ್ಥೆ ಯನ್ನಾಗಿಯೂ ನೇಮಿಸಿದರು. ವಿದ್ಯಾಮಂದಿರದ ಧ್ಯೇಯವಾದವು ಇವರಿಬ್ಬ ರನ್ನೂ ತನ್ನತ್ತ ಸೆಳೆದಿತ್ತು. ಪು.ಲ. ಅವರಿಗೆ ಎಂದಿನಿಂದಲೂ ಶಾಂತಿನಿಕೇತನದ ಹುಚ್ಚು. ತಾವೂ ಗಾಂಧೀಮಂದಿರವನ್ನು ಅದೇ ಮಾದರಿ ಯಲ್ಲಿ ನಡೆಸುತ್ತ ವಿದ್ಯೆ, ನಿಸರ್ಗ ಹಾಗೂ

ಬದುಕನ್ನು ಹಾಸು ಹೊಕ್ಕಾಗಿ ಹೆಣೆದು ಒಕ್ಕಲಿಗರ ಮಕ್ಕಳು ಬಾಳಿನಲ್ಲಿ ಮುನ್ನಡೆವಂತೆ ಮಾಡಬೇಕನ್ನುವ ಉನ್ನತವಾದ ಗುರಿಯನ್ನು ಹೊತ್ತು ದಂಪತಿಗಳಿಬ್ಬರೂ ಮಾಲೇಗಾವಿಯತ್ತ ತೆರಳಿದರು. ಸುನೀತಾಬಾಯಿ (ಠಾಕೂರರು)- ಮದುವೆಗೆ ಮೊದಲಿನ ಹೆಸರು ರಾಷ್ಟ್ರೀಯ ಚಳವಳಿ ರಾಷ್ಟ್ರ ಸೇವಾದಲ ಹಾಗೂ ಸಮಾಜವಾದಿ ವಿಚಾರಗಳೊಂದಿಗೆ ಸಂಪರ್ಕದಲ್ಲಿದ್ದರು. ಹೀಗಾಗಿ ಮಾಲೇಗಾವಿಯಲ್ಲಿ ಇಬ್ಬರಿಗಾಗಿಯೂ ಒಂದು ಹೊಸ ದಿಗಂತವೇ ಕಾದಿತ್ತೆನ್ನಬಹುದು. ಅಂದು ರಾಜಕೀಯ ಸತ್ತೆಯಿಂದಾಗಿ ಭಾವುಸಾಹೇಬ ಹಿರೇ ಒಂದು ಬಲಾಢ್ಯವಾದ ಹೆಸರಾಗಿತ್ತು. ಅದರೊಂದಿಗೆ ಹೊಂದಿಕೊಂಡಿದ್ದರೆ ಏನೆಲ್ಲ ಮಾಡಬಹುದಿತ್ತು, ಆದರೆ ಸಂಸ್ಥೆಯ ಚಟುವಟಿಕೆಗಳೆಲ್ಲ ಸಂದೇಹಾಸ್ಪದವಾಗಿ ಕಂಡದ್ದರಿಂದ ಪು.ಲ. ಹಾಗೂ ಸುನೀತಾಬಾಯಿ ಕೆಲವೇ ದಿನಗಳಲ್ಲಿ ರಾಜೀನಾಮೆಯನ್ನು ನೀಡಿ ಮಾಲೆಗಾವಿಯನ್ನು ಬಿಟ್ಟರು. ತಮ್ಮ ಗುರಿಯತ್ತ ಸಾಗುವದೊಂದನ್ನೇ ಎಣಿಸುವದಿದ್ದರೆ, ಅವರು ಸಂಸ್ಥೆಯ ವ್ಯವಹಾರಗಳತ್ತ ಗಮನ ಹರಿಸದಿದ್ದರೆ ಸಾಕಿತ್ತು! ಆದರೆ ಪು.ಲ. ಇಂಥ ಸಂಗತಿಗಳಿಂದ ಯಾವಾಗಲೂ ನಾಲ್ಕು ಮಾರು ದೂರ ಇದ್ದವರು.

1977ರಲ್ಲಿ ಹೊಸ ಇತಿಹಾಸವನ್ನು ನಿರ್ಮಿಸಿದ ಲೋಕಸಭೆಯ ಚುನಾವಣೆಗಳು ನಡೆದವು. ಇಂದಿರಾಗಾಂಧಿ ಪರಿವಾರದ ಏಕಾಧಿಕಾರಶಾಹಿಯನ್ನು ಕಿತ್ತೆಸೆಯಬೇಕೆಂದು ಪು.ಲ. ಜನತಾ ಪಕ್ಷದ ವತಿಯಿಂದ ಪ್ರಚಾರದ ಕಣಕ್ಕಿಳಿದರು. ಇನ್ನಾವ ವಾಗ್ಮಿಯಲ್ಲೂ ಕಾಣಸಿಗದ ವ್ಯಂಗ್ಯದ ಅಲಗು ಪು.ಲ. ಅವರಲ್ಲಿ ಇತ್ತು. ಅವರ ಮಾತುಗಾರಿಕೆಯನ್ನು ಕೇಳಲು ಲಕ್ಷಗಟ್ಟಳೆ ಜನಸಂದಣಿ ಕೂಡತೊಡಗಿತು. ಅದರಿಂದಾಗಿ ಅಂದಿನ ಕೇಂದ್ರ ಗೃಹಮಂತ್ರಿ ಯಶವಂತರಾವ ಚವಾಣ, ಮಹಾರಾಷ್ಟ್ರದ ಮುಖ್ಯಮಂತ್ರಿ ಶಂಕರರಾವ ಚವಾಣರು ಪು.ಲ. ಅವರ ಮೇಲೆ ಹರಿಹಾಯುವುದು ಸ್ವಾಭಾವಿಕವೇ ಆಗಿತ್ತು. ಪು.ಲ. ಅವರ ಪ್ರಚಾರವು ಖಂಡಿತ ಪ್ರಭಾವವನ್ನು ಬೀರಬಲ್ಲದೆಂಬುದನ್ನು ಅವರಿಬ್ಬರೂ ಮನಗಂಡಿದ್ದರು. 'ಹೀಗಾಗಿ ಪು.ಲ. ಅವರನ್ನು, ವಿದೂಷಕ' ನೆಂದು ಜರಿದು ತಡಯಿಲ್ಲದೆ ಟೀಕೆಯ ಬಾಣಗಳನ್ನೆಸೆಯಲು ಆರಂಭಿಸಿದರು. ಆ ದಿನಗಳಲ್ಲಿ ನನ್ನ ಒಬ್ಬ ಬರಹಗಾರ ಮಿತ್ರನು ನನ್ನೊಂದಿಗೆ ಮಾತಾಡುತ್ತ ನುಡಿದಿದ್ದ ಸಂಗತಿಯಿದು "ಯಶವಂತರಾಯರು ಇದೇ ಪು.ಲ.ನ ಮೇಲೆ ಅದೆಷ್ಟು ಉಪಕಾರಗಳನ್ನು ಮಾಡಿದ್ದಾರೆ ಗೊತ್ತೆ? ಈತ ಬರೆದ ಹಲವಾರು ಕಾಗದಗಳು ಯಶವಂತರಾಯರಲ್ಲಿವೆ. ಅವರು ಅವುಗಳನ್ನು ಪ್ರಕಟಿಸಿದರೆ ಈತನ ಗತಿ ಏನಾಗಲಿಕ್ಕಿಲ್ಲ?" ಎಂದಿದ್ದರು.

ಅವನ ಮಾತನ್ನು ನಾನಂತೂ ನಂಬಿರಲಿಲ್ಲ. ಪು.ಲ. ತಮಗಾಗಿ ಯಾರನ್ನೂ ಏನನ್ನು ಕೇಳಿದವರಲ್ಲ; ಸತ್ತೆಯ ಎದುರಿನಲ್ಲಂತೂ ಎಂದಿಗೂ ಕೈಚಾಚಿದವರಲ್ಲ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಈ ಹೊತ್ತಿಗೆಯ ಕೆಲಸವನ್ನು ಕೈಕೊಂಡ ಬಳಿಕ ಪು.ಲ. ಅವರ ಕಾಗದಗಳೇನಾದರೂ ಇದ್ದರೆ ಕಳಿಸಿರೆಂದು ಯಶವಂತರಾಯರಿಗೂ ಇತ್ತೀಚೆಗಷ್ಟೇ ಬರೆದಿದ್ದೆ. ತಮ್ಮ ಮಾರೋಲೆಯಲ್ಲಿ (ಜುಲೈ 1979) ಯಶವಂತರಾವ್ ಬರೆದಿದ್ದಾರೆ.

"ಪು.ಲ. ಅವರ ಕಾಗದಗಳಿಗಾಗಿ ಬರೆದಿರುವಿರಿ. ಅವರೂ ನಾನೂ ಹಲವು ವರ್ಷಗಳಿಂದ ಗೆಳೆಯರು. ಆದರೆ ನಮ್ಮಿಬ್ಬರಲ್ಲಿ ಯಾವುದೇ ವ್ಯವಹಾರ ಕುದುರಲಿಲ್ಲ. ಅಂತಹ ಸಂದರ್ಭವೇ ಒದಗಿಬರಲಿಲ್ಲ ಎಂದರೂ ಆದೀತು. ಒಂದೆರಡು ಪ್ರಸಂಗಗಳ ನಿಮಿತ್ತವಾಗಿ ಬಿಟ್ಟರೆ ಅವರಿಂದ ನನಗೆ ಬೇರೆ ಕಾಗದಗಳೇ ಬಂದಂತಿಲ್ಲ. ನಾನು ಮಹಾರಾಷ್ಟ್ರದ ಮುಖ್ಯ ಮಂತ್ರಿಯಾಗಿದ್ದ ಕಾಲಕ್ಕೆ ಅವರು ಬಾಲಗಂಧರ್ವರನ್ನು ಕುರಿತು ನನಗೆ ಬರೆದಿದ್ದರು. ಅವು ಬಾಲ ಗಂಧರ್ವರ ಕೊನೆಯ ದಿನಗಳಾಗಿದ್ದವು, ಪು.ಲ. ಅವರು ತಮ್ಮ ಕಾಗದದಲ್ಲಿ ಬಾಲ ಗಂಧರ್ವರ ಅಂದಿನ ವಿಕಲಾವಸ್ಥೆ ಹಾಗೂ ಮರಾಠಿಯ ನಾಟ್ಯಸೃಷ್ಟಿಯ ಮೇಲಿನ ಅವರ ಉಪಕಾರಗಳನ್ನು ಸ್ಮರಿಸಿ ರಾಜ್ಯ ಸರ್ಕಾರವು ಕೃತಜ್ಞತೆಯಿಂದ ಅವರಿಗೆ ಗೌರವಧನವನ್ನು ಅರ್ಪಿಸಬೇಕೆಂದು ಬರೆದಿದ್ದರು. ಅವರ ಸೂಚನೆಯನ್ನು ಒಪ್ಪಿ ಸರಿಯಾದ ಕ್ರಮ ತೆಗೆದುಕೊಳ್ಳಲು ಸಂಬಂಧಪಟ್ಟ ಇಲಾಖೆಗೆ ಅದನ್ನು ರವಾನಿಸಿದ್ದೆ. ಮಂತ್ರಾಲಯದ

ಯಾವುದಾದರೂ ಕರಡಿನಲ್ಲಿ ದೊರಕ ಬಹುದು..."

ಈ ಕಾಗದವು ಸಾಕಷ್ಟು ಅರ್ಥಪೂರ್ಣ ವಾಗಿದೆ.

ಪು.ಲ. ಅವರ ವ್ಯಕ್ತಿತ್ವವೇ ಬಲು ಮೋಜಿನದು. ಅಷ್ಟೇ ಸಂಕೀರ್ಣವಾದುದೂ ಅಹುದು. ಹಳೆಯದರಲ್ಲಿ ಒಳ್ಳೆಯದೇನಿದ್ದರೂ ಅವರಿಗೆ ಅದರ ಬಗ್ಗೆ ಆಕರ್ಷಣೆಯಿದೆ.ಆಧುನಿಕತೆಯ ಬಗೆಗೂ ಆಕರ್ಷಣೆಯಿದೆ. ಹೊಸ ವಿಚಾರ ಗಳೊಂದಿಗೆ ತಾದಾತ್ಮ್ಯರಾಗುತ್ತಾರೆ. ಅವರಲ್ಲಿ ದುರ್ದಮ್ಯವಾದ ಜಿಜ್ಞಾಸೆಯಿದೆ. ಅವರ ಓದು ವಿಶಾಲವಾದದ್ದು, ಮನ ಸೆರೆಹಿಡಿಯುವಂಥ ದನ್ನು ಏನನ್ನಾದರೂ ಓದಿದಾಗ ತಮ್ಮ ಹತ್ತಿರದ ವ್ಯಕ್ತಿಗಳಿಗೆ ಫೋನಿನಲ್ಲೊ, ಕಾಗದ ಗಳ ಮೂಲಕವೋ ಅದನ್ನು ಕುರಿತು ಹೇಳಿ ಹಂಚಿಕೊಳ್ಳುವ ಹುಮ್ಮಸ್ಸು ಅವರದು. ಮಾನವ ಪ್ರಾಣಿಯಲ್ಲಿ ಅವರಿಗೆ ಎಲ್ಲಿಲ್ಲದ ಆಸ್ಥೆ ತುಳಿಯಲ್ಪಡುವವರ ಬಗೆಗೆ ಆಂತರಿಕ ಕಳವಳ, ಎಲ್ಲರಂತೆಯೇ ಅವರಲ್ಲೂ ತಮ್ಮದೇ ಆದ ರಾಗ ಲೋಭಗಳಿವೆ. ಆದರೂ ಅವರಲ್ಲಿಯ ಸಾಹಿತಿ ಎಂದಿಗೂ ಎಚ್ಚರದಪ್ಪಿ ದವನಲ್ಲ, ನೇಮಾಡೆ ಪು.ಲ. ಅವರೊಂದಿಗೆ ಹೊಂದಿಕೊಳ್ಳಲಾಗಲಿಲ್ಲ ಅಂದ ಮಾತ್ರಕ್ಕೆ ನೇಮಾಡೆಯವರ 'ಕೋಸಲಾ' (ಗೂಡು) ಕಾದಂಬರಿಯ ರಸಗ್ರಹಣದಲ್ಲಿ ಅವರಲ್ಲಿಯ ಈ ಕಂದರವು ಒಂದು ಅಡ್ಡಿಯಾಗಿ ನಿಲ್ಲಲಿಲ್ಲ ಪು.ಲ. ಒಂದು ಬಾರಿ 'ಕೋಸಲಾ'ವನ್ನು ಹೊಗಳತೊಡಗಿದರೆಂದರೆ ಅವರ ಬಾಯಿ ಮುಚ್ಚಿಸುವುದೇ ಒಂದು ಕಷ್ಟದ ಕೆಲಸ, ಪು.ಶಿ.ರೇಗೆ ಪು.ಲ. ಅವರಿಗೆ ಹಿಡಿಸದವರು. ಆದರೆ ಅದೇ ಪು.ಶಿ.ರೇಗೆಯವರ ಕಾವ್ಯದ ಮೇಲೆ ಎಲ್ಲಿಲ್ಲದ ಮಮತೆ ಇವರಿಗೆ, ಒಂದು ಸಲ ಪು.ಲ. ಅವರು ಎಲ್‌ಫಿಲ್‌ಸ್ಟನ್ ಕಾಲೇಜಿನಲ್ಲಿ ಪು.ಶಿ.ಯವರ ಕವನಗಳನ್ನು ಸಭಿಕರ ಮನ ಮುಟ್ಟುವಂತೆ ಓದಿದ್ದರು. ಪು.ಶಿ. ಯವರಲ್ಲದೆ ಮರ್ಡೇಕರ, ಖಾನೋಳಕರ ರಲ್ಲದೆ ಗೋವಿಂದಾಗ್ರಜರಂತಹ ಬೇರೆ ಬೇರೆ ಕವಿಗಳ ಕವನಗಳನ್ನು ತುಂಬ ಚೆನ್ನಾಗಿ ಓದಿ ತೋರಿಸುತ್ತಾರೆ. ಕಾವ್ಯದ ಮೇಲೆ ವಿಶೇಷ ಮಮತೆ ಅವರಿಗೆ. ತಮಗೆ ಹಿಡಿಸಿದ ಕಾವ್ಯವನ್ನು ಮನಸಾರೆ ಹೊಗಳುವುದು ಅವರ ಸ್ವಭಾವ ಧರ್ಮ.

ಕೇಶವ ಮೇಶ್ರಾಮ ಒಬ್ಬ ಗಂಭೀರ ಸ್ವಭಾವದ ದಲಿತ ಕವಿ, ಕಾದಂಬರಿಕಾರ. ನನಗೆ ಬರೆದ ಒಂದು ಕಾಗದದಲ್ಲಿ ಅವರು, "ಸಾಮೂಹಿಕ ಚಳುವಳಿಯೊಂದಿಗೆ ಹೆಜ್ಜೆಯಿಕ್ಕುವಾಗ ಪು.ಲ. ಖಾಂಡೇಕರರಂತಹ ಹಿರಿಯರ ಅಪ್ರತ್ಯಕ್ಷವಾದ ಶಬ್ದಸ್ನೇಹವು ಕಾಯ್ದುಕೊಳ್ಳುವ ಯೋಗ್ಯತೆಯ ದಾಗಿರುತ್ತದೆ" ಎಂದಿದ್ದಾರೆ. ಅವರೇ ಇನ್ನೊಂದೆಡೆಯಲ್ಲಿ, "ಹೊಸ ಹೊಸ ಸಾಹಿತಿಗಳ ಬಗೆಗೆ ಜಾಗರೂಕರಾಗಿರುವ ಕಲಾವಿದರ ಪೀಳಿಗೆಯು ಬಲು ಶೀಘ್ರವಾಗಿ ನಶಿಸುತ್ತದೆ. ಹೊಗಳದವ ಗೆಳೆಯನೇ ಅಲ್ಲ, ಎನ್ನುವ ಮಾತೂ ಕೇಳಿ ಬರುತ್ತದೆ" ಎನ್ನುತ್ತಾರೆ. ಹೊಸ ವಾಙ್ಮಯ, ಹೊಸ ಲೇಖಕ, ಹಾಗೂ ಗೊತ್ತಿಲ್ಲದ ಅವರ ಜೀವನ ಸೃಷ್ಟಿಯನ್ನು ಅರಿತುಕೊಂಡು ಅದರೊಂದಿಗೆ ತುಂಬು ಮನಸ್ಸಿನಿಂದ ಸ್ಪಂದಿಸುವುದು ಪು.ಲ. ಅವರ ಪ್ರವೃತ್ತಿಯಾಗಿದೆ.

ಕೆಲವು ದಿನಗಳ ಹಿಂದೆ ವಾ.ಲ. ಕುಲಕರ್ಣಿ ಯವರೊಂದಿಗೆ ಹರಟುತ್ತ ಕುಳಿತಿದ್ದೆ. ವಿಷಯ ಪು.ಲ. ಅವರನ್ನು ಕುರಿತಾಗಿತ್ತು. ವಾ.ಲ. ಈಗ ಎಪ್ಪತ್ತರ ಹೊಸ್ತಿಲಲ್ಲಿದ್ದವರು. ಇತ್ತೀಚೆಗೆ ಅವರ ಆರೋಗ್ಯ ಅಷ್ಟು ಸರಿಯಾಗಿರುವುದಿಲ್ಲ. ಅಂಥದರಲ್ಲಿಯೂ ಪು.ಲ. ಅವರನ್ನು ಕುರಿತು ಅವರ ಕಳಕಳಿಯ ಮಾತನ್ನು ಕೇಳಿ ಧನ್ಯತೆಯ ಭಾವ ಮೂಡಿತು. ಅವನ ಬರವಣಿಗೆ ಮುಗಿಯಿತು. ಇವನದು ನಿಂತು ಹೋಯಿತು ಎಂದೆಲ್ಲ ಮಾತನಾಡುತ್ತಿರುತ್ತೇವೆ. ಅರವತ್ತರ ಹತ್ತಿರಕ್ಕಿರುವ ಒಬ್ಬ ಬರಹಗಾರ, ಅದ ರಲ್ಲಿಯೂ ಒಬ್ಬ ಹಾಸ್ಯ ಬರಹಗಾರರನ್ನು ಕುರಿತು ಕಳಕಳಿಯಿಂದ ಮಾತನಾಡು ವಂತಹದೇನೂ ಉಳಿದಿರಲಾರದು. ಹೀಗಿದ್ದೂ ವಾ.ಲ. ಅವರು ಇಂದಿಗೂ ಪು.ಲ.ಅವರಿಂದ ಬಹಳಷ್ಟನ್ನು ಅಪೇಕ್ಷಿಸುತ್ತಾರೆಂಬ ಸಂಗತಿಯು ನನಗೆ ತುಂಬ ಅರ್ಥಪೂರ್ಣವಾಗಿ ಕಂಡಿತು. ಅಂದವರು ನುಡಿಯುತ್ತಿದ್ದರು. "ಇಂದು ದೇಶದ ರಾಜಕೀಯ ಪರಿಸ್ಥಿತಿ ತೀರ ಹದ ಗೆಟ್ಟಿದೆ. ಪು.ಲ. ಅದನ್ನು ಕುರಿತು ವಿಡಂಬನೆಯ ನಾಟಕಗಳನ್ನು ಬರೆಯಬೇಕು.

ನಟನೆಯ ಅಸಾಮಾನ್ಯವಾದ ಅರಿವು ಉಳ್ಳವರಾಗಲಿ ಅಣುಕು, ವಿಡಂಬನೆಗಳನ್ನು ಅಳವಡಿಸಿ ನಾಟಕಗಳನ್ನು ಬರೆಯಬಲ್ಲ ಸಾಮರ್ಥ್ಯವುಳ್ಳವರೆಂದರೆ ಇಂದು ಪು.ಲ. ಅವರನ್ನು ಬಿಟ್ಟರೆ ಬೇರಾರೂ ಕಾಣುವದಿಲ್ಲ. ಎಲ್ಲ ತರಹದ ರಾಜಕೀಯ ತತ್ವ ವಿಚಾರಗಳನ್ನು ಅರಿತವರೆಂದಾಗಲಿ ಯಾವುದು ಅಳಿದು ಯಾವುದು ಬೆಳೆಯಬೇಕೆಂಬುದನ್ನು ಚೆನ್ನಾಗಿ ಬಲ್ಲವರೆಂದರೆ ಪು.ಲ. ಒಬ್ಬರೆ!"

ಇಲ್ಲಿ ಒಂದು ನೆನಪನ್ನು ಕುರಿತು ಹೇಳಬೇಕು. ದೇಶದ ತುರ್ತು ಪರಿಸ್ಥಿತಿಯ ಕಾಲಕ್ಕೆ ದುರ್ಗಾಬಾಯಿ ಭಾಗವತರನ್ನುಳಿದು ಇನ್ನಾವ ಮರಾಠಿ ಸಾಹಿತಿ ಹೊರಗಡೆಯಲ್ಲಾಗಲಿ, ಕದ್ದಾಗಲಿ ಹೆಚ್ಚೇನು ಮಾಡಿರಲಿಲ್ಲ. ಕದ್ದು ದುಡಿದವ ರಲ್ಲಿ ಪು.ಲ. ಅವರದು ಸಿಂಹದ ಪಾಲಿದೆ. ಭೂಮಿಗತರಾದವರಿಗೆ ಹಣ ಸಹಾಯ, ಗುಪ್ತ ಸಾಹಿತ್ಯವನ್ನು ಹಂಚುವುದು, ಜಯಪ್ರಕಾಶರ ದಿನಚರಿಯನ್ನು ಚೆನ್ನಾಗಿ ಅನುವಾದಿಸಿ, ಅಚ್ಚು ಹಾಕಿಸಿ ಎಲ್ಲೆಡೆಯಲ್ಲಿ ಹಂಚುವಂತಹ ಎಷ್ಟೋ ಕೆಲಸಗಳನ್ನು ಪು.ಲ. ಹಾಗೂ ಸುನೀತಾಬಾಯಿ ಮಾಡಿದ್ದರು. ಆ ಕಾಲಕ್ಕೆ ಪ್ರತೀಕಾರದ ಅದೆಷ್ಟೋ ಕೈಪತ್ರಗಳನ್ನು ಹೊರಡಿಸಲಾಗುತ್ತಿತ್ತು. ಈ ಕಾರ್ಯದಲ್ಲಿ ಪು.ಲ. ನಮ್ಮೆಲ್ಲರ ಮುಂದಾಳುಗಳಾಗಿದ್ದರು. ಅವರ ಸಲಹೆಗಳನ್ನು ಪಡೆಯಲಾಗುತ್ತಿತ್ತು. ಯಾವುದಕ್ಕೂ ಮೊದಲ ಸಹಿ ಅವರದಾಗಿರುತ್ತಿತ್ತು. ತುರ್ತು ಪರಿಸ್ಥಿತಿಯಿಂದಾಗಿ ಕರ್ಹಾಡ ಸಾಹಿತ್ಯ ಸಮ್ಮೇಳನದ ವಾತಾವರಣವು ತುಂಬ ಕಾಯ್ದಿತ್ತು. ಪು.ಲ ಅಲ್ಲಿದ್ದರು: ಖಾಂಡೇಕರರೂ ಬಂದಿದ್ದರು. ಅಲ್ಲಿ ನೆರೆದ ಹತ್ತು ಹದಿನೈದು ಸಾವಿರ ಜನವೆಲ್ಲ ಪು.ಲ. ತಮ್ಮ ಪದ್ಮಶ್ರೀಯನ್ನೂ ಖಾಂಡೇಕರರು ತಮ್ಮ ಪದ್ಮಭೂಷಣವನ್ನೂ ಧಿಕ್ಕರಿಸಿ ನಿರಾಕರಿಸಬೇಕೆಂದು ತೀವ್ರವಾಗಿ ಬಯಸಿತ್ತು. ಜನ ಕ್ಷಣಕ್ಷಣಕ್ಕೂ ಅದಕ್ಕಾಗಿ ಕಾದಿದ್ದರು. ಆದರೆ ಹಾಗೇನೂ ನಡೆಯಲಿಲ್ಲ. ಜನ ನೊಂದುಕೊಂಡರು. ಅದೇ ಸಮ್ಮೇಲನದಲ್ಲಿ ಪದ್ಮಶ್ರೀ ಪದ್ಮಭೂಷಣಗಳಿಂದ ಭೂಷಿತರಾದ ಅದೆಷ್ಟೋ ಬರಹಗಾರರಿದ್ದರು. ಆದರೆ ಜನ ಬಯಸಿದ್ದು ಈ ಇಬ್ಬರಿಂದ ಮಾತ್ರ. ಅವರಿಗೆ ಅದೊಂದು ಕಲಂಕವು ಶಾಶ್ವತವಾಗಿ ಅಂಟಿಕೊಂಡುಬಿಟ್ಟಿತು. ಇದಾದ ಕೆಲವೇ ದಿನಗಳ ತರುವಾಯ ಖಾಂಡೇಕರರನ್ನು ಕಾಣುವ ಪ್ರಸಂಗ ಬಂದಿತ್ತು. ಪ್ರಕಾಶಕ ರಾ.ಜ.ದೇಶಮುಖರ ವಾಡೆಯಲ್ಲಿ ಖಾಂಡೇಕರರು ಉಳಿದುಕೊಂಡಿದ್ದರು. ನಾನು, ಶ್ರೀ.ಜ. ಜೋಶಿ ಹಾಗೂ ವಿದ್ಯಾಧರ ಪುಂಡಲೀಕ ಈ ಮೂವರು ಬರಹಗಾರರು ಕೂಡಿ 'ಲಲಿತ' ಸಾಹಿತ್ಯಕ ಮಾಸಪತ್ರಿಕೆಗಾಗಿ ಖಾಂಡೇಕರರ ಸಂದರ್ಶನವನ್ನು ಪಡೆಯಲು ಅಲ್ಲಿಗೆ ಹೋದೆವು. ಶಿರೋಡೆಯಲ್ಲಿ ಇದ್ದಾಗಿನಿಂದಲೇ ಅವರನ್ನು ಹತ್ತಿರದಿಂದ ಬಲ್ಲವನಾಗಿದ್ದೆ. ಸಂದರ್ಶನ ಮುಗಿದ ಬಳಿಕ ಉಳಿದವರಿಬ್ಬರು ಹೊರಟು ಹೋದರು. ಖಾಂಡೇಕರರು ಹರಟೆಗಾಗಿ ನನ್ನನ್ನು ನಿಲ್ಲಿಸಿಕೊಂಡರು. ಅಂದು ಹರಟೆಯ ನಡುವೆ ಈ ಮಾತನ್ನೆತ್ತಿದ. ತಾವು ದೇಹದಿಂದಲೂ ಮನದಿಂದಲೂ ತುಂಬ ದುರ್ಬಲರಾಗಿದ್ದು ಆ ದಿನ ಪು.ಲ. ತಮ್ಮ ಬಿರುದನ್ನು ಬಿಟ್ಟುಕೊಟ್ಟದ್ದರೆ ತಾವು ಹಾಗೆಯೇ ಮಾಡುತ್ತಿದ್ದೆವು ಎಂದರು! ಅವರ ಮಾತಿಗೆ ನಾನು, 'ನೀವು ಹಿರಿಯರು: ಪು.ಲ. ನಿಮಗಿಂತ ಕಿರಿಯರು!" ಎಂದೆ. ಅದಕ್ಕೆ ಅವರು, "ಬರಿ ವಯಸ್ಸಿನಿಂದೇನು? ನಮ್ಮೆಲ್ಲರ ಮುಂದಾಳ್ತನ ಇಂದು ಪು.ಲ. ಅವರತ್ತ ಹೋಗಿದೆ. ಎಂಬುದನ್ನು ಅಲ್ಲಗಳೆಯಬಲ್ಲೆಯಾ? ಯಾವುದೇ ಸಮಸ್ಯೆಯನ್ನು ಕುರಿತು ಇಂದು ಪು.ಲ. ಏನನ್ನುತ್ತಾರೆ ಎನ್ನುವುದರತ್ತ ಎಲ್ಲರ ಗಮನ ಹರಿಯುವುದೋ ಇಲ್ಲವೋ ಅದೇ ನನ್ನತ್ತ ಯಾರಾದರೂ ಹೊರಳಿ ನೋಡುವರೇ? ಅಂದು ಸಮ್ಮೇಲನದಲ್ಲಿ ಪು.ಲ. ತಾವಾಗಿಯೇ ಮುಂದಕ್ಕೆ ಬರಬೇಕಿತ್ತು. ಹಾಗಾಗಿದ್ದರೆ ಅವರಿಗೆ ಬೆಂಬಲವಾಗಿ ನಿಲ್ಲುತ್ತಿದ್ದೆ" ಎಂದರು.

ಬರಹಗಾರರ ಮುಂದಾಳ್ತನ ಪು.ಲ. ಅವರತ್ತ ಹೋದದ್ದೇನೋ ನಿಜವೇ. ಜನ ಅವರ ಬರವಣಿಗೆಯನ್ನು ಇಷ್ಟಪಡುತ್ತಾರೆ. ಬರಹಗಳಲ್ಲಾಗಲಿ, ಮಾತುಗಳಲ್ಲಾಗಲಿ ವ್ಯಕ್ತಗೊಳ್ಳುವ ಅವರ ವಿಚಾರಗಳು ಜನರಿಗೆ ಮಹತ್ವದವೆನ್ನಿಸುತ್ತವೆ. ಅವರಲ್ಲಿಯ ಸಮಾಜಿಕ ಕಾಳಜಿಯು ಜನರನ್ನು ಸೆಳೆದುಕೊಳ್ಳುತ್ತದೆ. ವ್ಯಕ್ತಿಗತವಾದ ಬಾಳಿನಲ್ಲಿಯೂ ಅವರ ನಡೆ ತುಂಬ ಹಸನಾದದ್ದು. ವಯಸ್ಸು, ವಿತ್ತ, ವ್ಯವಸಾಯ, ಜಾತಿಗಳ ಭೇದಗಳನ್ನು

## ಟಾಗೋರ್-ಕಾರಂತ

"ಭಾರತೀಯ ಸಾಹಿತ್ಯ ಹಾಗೂ ಕಲೆಯ ಕ್ಷೇತ್ರದಲ್ಲಿ ರವೀಂದ್ರರ ತರುವಾಯ ಆ ಎತ್ತರಕ್ಕೇರಿದವರೆಂದರೆ ಶಿವರಾಮ ಕಾರಂತರು. ಕಾರಂತರ ಸಾಹಿತ್ಯದಿಂದ ಕನ್ನಡ ಭಾಷೆ ಶ್ರೀಮಂತವಾಗಿದೆ, ಭಾರತೀಯ ಕಲೆ ಧೀಮಂತವೆನಿಸಿದೆ. ಶಾಂತಿನಿಕೇತನದ ರಂಗಭೂಮಿಯ ಮೇಲೆ ಮಕ್ಕಳಿಗಾಗಿ ರವೀಂದ್ರರು ಕಾಲಲ್ಲಿ ಗೆಜ್ಜೆ ಕಟ್ಟಿ ಕುಣಿದರು. ಕಾರಂತರು ಈಗ 80 ಮಿಕ್ಕಿದಾಗಲೂ ಯಕ್ಷಗಾನಕ್ಕಾಗಿ ಕಾಲಿಗೆ ಗೆಜ್ಜೆ ಕಟ್ಟುತ್ತಾರೆ-ಅಷ್ಟೇ ಉತ್ಸಾಹದಿಂದ. ರವೀಂದ್ರರು ಎಷ್ಟು ಭಾರತೀಯರೋ ಕಾರಂತರೂ ಅಷ್ಟೇ ಭಾರತೀಯ. ಅವರಿಬ್ಬರೂ ಯಾವುದೋ ಒಂದು ಭಾಷೆಯ ಸೊತ್ತಲ್ಲ."

(ಪ್ರಕಟವಾಗಲಿರುವ ಪುಸ್ತಕದಲ್ಲಿ ಸೇರಿಸಲೆಂದು ಪು.ಲ. ದೇಶಪಾಂಡೆಯವರು ಕೊಟ್ಟ ವಿಶೇಷ ಸಂದರ್ಶನದಿಂದ.)

ಮರೆತು ಎಲ್ಲ ವರ್ಗದವರೊಂದಿಗೆ ಸಂಪರ್ಕವನ್ನು ಅವರು ಇರಿಸಿಕೊಂಡಿದ್ದಾರೆ. ಸಾಹಿತ್ಯ, ನಾಟ್ಯ, ಸಂಗೀತಗಳ ಕ್ಷೇತ್ರಗಳಲ್ಲಿ ಇಂದು ಇಡಿಯ ರಾಷ್ಟ್ರದ ತುಂಬೆಲ್ಲ ಅರ್ಥಪೂರ್ಣ ಸಂಪರ್ಕವಿರಿಸಿಕೊಳ್ಳಲು ಸಾಧ್ಯವಾದುದು ಇವರೊಬ್ಬರಿಗೆ ಮಾತ್ರ. ಇವರದು ನಕ್ಕು ನಗಿಸುವ ಸ್ವಭಾವ. ಯಾವಾಗಲೂ ಪ್ರಫುಲ್ಲಿತರಾಗಿರುವರು. ಇವೆಲ್ಲವುಗಳ ಪರಿಣಾಮ ಎಂದರೆ ನಾವು ಬರಹಗಾರರೆಲ್ಲ ನಮ್ಮ ಮುಂದಾಳ್ತನವನ್ನು ಪು.ಲ. ಅವರಿಗೆ ಒಪ್ಪಿಸಿದ್ದು, ಅಷ್ಟೇ ಅಲ್ಲ, ಅದು ತಾನಾಗಿಯೇ ಅವರತ್ತ ನಡೆದುಕೊಂಡು ಹೋಗಿದೆ.

ಈ ಹಿನ್ನೆಲೆಯಲ್ಲಿ ಇನ್ನೊಬ್ಬರೊಂದಿಗೆ ವಾದಕ್ಕಿಳಿಯುವ, ಅಷ್ಟೇ ಅಲ್ಲದೆ ಸಾರ್ವಜನಿಕವಾಗಿ ವಾಗ್ಯುದ್ಧದ ಕಣಕ್ಕಿಳಿಯುವ ಪು.ಲ. ಅವರ ಹುಮ್ಮಸ್ಸನ್ನು ಕಂಡಾಗ ಮಾತ್ರ ಮನಸ್ಸಿಗೆ ಆಘಾತವಾಗುತ್ತದೆ. ಇವರು ಅವರೇ ತಾನೆ? ಎಂಬ ಪ್ರಶ್ನೆಯೂ ಧುತ್ತೆಂದು ಎದ್ದು ನಿಲ್ಲುತ್ತದೆ. ಇದೊಂದನ್ನು ಅವರು ಮಾಡದೆ ಹೋಗಿದ್ದರೆ ಚೆನ್ನಾಗಿತ್ತು ಎಂದು ನನಗೆ ಅನೇಕ ಸಲ ಅನಿಸಿದೆ. ಮುಂಬಯಿಯ ಮರಾಠಿ ಸಂಘಕ್ಕೆ ಕೊಡಲಾದ ಪರದೆ, ತಮಾಶಾ ಪರಿಷತ್ತು ಮತ್ತು ದುರ್ಗಾಬಾಯಿ ಭಾಗವತ. ಕೊಂಕಣಿ, ಮರಾಠಿ ವಾದಗಳಲ್ಲದೆ ತೀರ ಇತ್ತೀಚೆಗೆ ವಿಖ್ಯಾತ ಸಮೀಕ್ಷಕ ಮಾಧವ ಮನೋಹರರ ಮೇಲೆ 'ಲಲಿತ'ದಲ್ಲಿ ಪ್ರಕಟಗೊಂಡ ಹಲ್ಲೆಗಳನ್ನು ಕಂಡಾಗ ಅನೇಕರಿಗೆ ಅಚ್ಚರಿಯಾಗಿದೆ. 'ಅಭಿರುಚಿ' ಮಾಸಪತ್ರಿಕೆಯ ಬಗೆಗೆ ಅವರು ತೋರಿದ ಸಂಯಮ ಮಾತ್ರ ವಿಶಿಷ್ಟವಾದುದು. 'ಅಭಿರುಚಿ'ಯ ಆರಂಭ ಕಾಲದಲ್ಲಿ ಅದರೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ಅದಕ್ಕಾಗಿ ತುಂಬ ಬರವಣಿಗೆಯನ್ನೂ ಮಾಡಿದವರು ಅವರು. 'ಅಭಿರುಚಿ'ಗೆ ದೊರೆತ ಪ್ರತಿಷ್ಠೆಯಲ್ಲಿ ಪು.ಲ. ಅವರದು ದೊಡ್ಡ ಪಾಲು. ಆದರೆ ಇತ್ತೀಚೆಗಷ್ಟೇ ತನ್ನ ಹೊಸ ಅವತಾರದಲ್ಲಿ ಹೊರಡುತ್ತಿರುವ 'ಅಭಿರುಚಿ'ಯಲ್ಲಿ ಮಾತ್ರ ಪು.ಲ. ಅವರ ಬಗೆಗೆ ಕದ್ದು ಮುಚ್ಚಿಯೂ ಮುಚ್ಚು ಮರೆಯಿಲ್ಲದೆಯೂ ಹಲವಾರು ಕೆಟ್ಟ ಮಾತುಗಳನ್ನು ಬರೆಯಲಾಯಿತು. ಅದನ್ನು ಕಂಡು ಪು.ಲ.ಶೆಡ್ಡು ಹೊಡೆದು ನಿಂತಾರೆಂದೆನಿಸಿತ್ತು. ಆದರೆ ಈ ಪತ್ರಿಕೆಯ ಬಗ್ಗೆ ಹಳೆಗಾಲದ ನಿಷ್ಠೆಯಿಂದಲೋ ಮಮತೆಯಿಂದಲೋ ಪು.ಲ ಸಂಯಮವನ್ನು ಕಾಯ್ದುಕೊಂಡರು. ಬೇರೆಲ್ಲಿಯೂ ಇಂಥ ಸಂಯಮವನ್ನು ತೋರಿಸದವರಲ್ಲ. ಅವರು ಹೂಡಿದ ವಾದ ವಿವಾದಗಳನ್ನು ಕುರಿತು ಕೆಣಕಿದರೆ ಕುಳಿತಲ್ಲಿಯೇ ತಮ್ಮ ಅಂಗಿಯ ಎರಡೂ ತೋಳುಗಳನ್ನು ಮೇಲಕ್ಕೇರಿಸುತ್ತ ತಾನು ಹೇಗೆ ಏಟು ಕೊಟ್ಟೆ, ಗುದ್ದು ಹಾಕಿದೆ ಎಂದೆಲ್ಲ ಅವರು ಹೇಳುವುದನ್ನು ಕಂಡಾಗ ಮೋಜೆನ್ನಿಸುತ್ತದೆ.

ನನಗೊಂದು ಕಾಗದ ಬಂದಿದೆ. ಏಕನಾಥ ಬಾಗೂಲೆ ಬರೆದಿದ್ದಾರೆ. ಈಗ ಅವರು

ಪುಣೆಯ 'ಕೇಸರಿ' ವೃತ್ತಪತ್ರಿಕೆಯಲ್ಲಿದ್ದಾರೆ. ಅವರು ತಮ್ಮ ಕಾಗದದಲ್ಲಿ 'ಮರಾಠಿ ತಮಾಶಾ ಕಲೆಯನ್ನು ಕೆಡಿಸಿದವರ್ಯಾರು?' ಎಂದು 1961ರಲ್ಲಿ ದುರ್ಗಾಬಾಯಿ ಭಾಗವತ, ವಸಂತ ಬಾಪಟ ಹಾಗೂ ಪು.ಲ. ಅವರಲ್ಲಿ ನಡೆದ ವಾಗ್ಯುದ್ಧದ ಬಗೆಗೆ ಉಲ್ಲೇಖಿಸಿದ್ದಾರೆ. ಅಂದು ಪು.ಲ. ಅವರು ದುರ್ಗಾಬಾಯಿ ಭಾಗವತರ ಮೇಲೆ ಭೀಕರವಾದ ದಾಳಿಯನ್ನು ಮಾಡಿದ್ದರಂತೆ. ಏಕನಾಥ ಬಾಗೂಲರು ಅದರ ಬಗೆಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿ ಪು.ಲ. ಅವರಿಗೆ ಬರೆದರಂತೆ. ಪು.ಲ. ಅವರ ಮಾರುತ್ತರ (14 ಅಕ್ಟೋಬರ್ 1961) ನೋಡುವಂತಿದೆ.

"...... ದುರ್ಗಾಬಾಯಿಯವರಿಗೆ ಬರೆದ ನನ್ನ ಮಾರುತ್ತರ ನಿಮಗೆ ಸಿಟ್ಟು ತರಿಸಿದೆ. ಅದಕ್ಕೂ ಮೊದಲು ದುರ್ಗಾಬಾಯಿಯವರು ಠಾಣೆಯಲ್ಲಿ ಮಾಡಿದ ತಮ್ಮ ಭಾಷಣದಲ್ಲಿ ನಾನು ವಸಂತ ಬಾಪಟ ತಮಾಶಾವನ್ನು ಕೆಡಿಸಿದೆವೆಂದು ದೂರಿ ಹೊಣೆಗೇಡಿತನದ ಮಾತುಗಳನ್ನಾಡಿದ್ದರು. ಇದೊಂದು ಗಮ್ಮತ್ತೆಂದು ತಿಳಿದು ಮನಸ್ಸಿಗೆ ಹಚ್ಚಿಕೊಳ್ಳದೆ ಬಿಟ್ಟುಬಿಟ್ಟಿದ್ದೆ; ತರುವಾಯ ಅವರು ತಮ್ಮ ರಾಜೀನಾಮೆಯನ್ನು ಜಾಹೀರಪಡಿಸದೇ ಹೋಗಿದ್ದರೆ ಅತ್ತ ಗಮನವನ್ನು ಹರಿಸುವ ಕಾರಣವಿರಲಿಲ್ಲ; ಆದರೆ ನನಗೆ ಸಂಬಂಧಿಸಿದ ಸಂಗತಿಗಳನ್ನು ನನ್ನ ಮೇಲೆ ಹೇರಿದಾಗಲೂ ಅದನ್ನು ಹಾಸ್ಯವೆಂದು ತಳ್ಳಿ ನಾನು ಸುಮ್ಮನಿರಬೇಕಿತ್ತೆಂದು ಅನ್ನಿಸುತ್ತದೆಯೇ ನಿಮಗೆ?

"ನನ್ನ ಬುದ್ಧಿಮತ್ತೆಯನ್ನು ಕುರಿತು ನಿಮ್ಮಲ್ಲಿ ಸಂದೇಹವಿದೆ. ಇರಲಿ ಹಾಗೆಯೇ ಇರಿ! ನಾನು ಒಬ್ಬ ವಿದ್ವಾಂಸನೆಂಬ ಹೆಮ್ಮೆ ನನ್ನಲ್ಲಿಲ್ಲ ಮರಾಠಿಯ ಗುಣ ಹೋಗಿಲವೆ. ಯಾವ ಗುಣವದು? ನನ್ನ ಬಗೆಗೆ ನೀವು 'ತಥಾಕಥಿತ' ವಿದ್ವಾಂಸ ಹೆಂಗಸರಂತೆ ಆವೇಶಕ್ಕೊಳಗಾಗಿ ಮಾತಾಡುವವ ಎಂದೆಲ್ಲ ವಿಶೇಷಣಗಳನ್ನು ಉಪಯೋಗಿಸಿ ಬರೆಯುವುದು ಯಾವ ಮನುಷ್ಯನ ಗುಣ?

"ನಾನೊಬ್ಬ ಮರಾಠಿಗ. ಒಬ್ಬ ಮರಾಠಿಗನಲ್ಲಿರಬಹುದಾದ ಗುಣದೋಷಗಳೆಲ್ಲವೂ ನನ್ನಲ್ಲಿದೆ ಅವುಗಳಿಂದಾಗಿ ನಾನೊಬ್ಬ ಅಪ್ಪಟ ಮರಾಠಿಗನೆಂಬ ಹೆಮ್ಮೆ ನನ್ನಲ್ಲಿದೆ. ದಯವಿಟ್ಟು ನನ್ನ ಸುತ್ತಲೂ ಸ್ಥಿತಪ್ರಜ್ಞನ ಪ್ರಭಾವಲಯವನ್ನು ಅಂಟಿಸಬೇಡಿ! ಸಾಮಾನ್ಯ ಮನುಷ್ಯನ ಎಲ್ಲ ಗುಣದೋಷಗಳನ್ನೂ ಉಳ್ಳ ಒಬ್ಬ ಸಾಮಾನ್ಯನಾಗಿಯೇ ನನ್ನನ್ನು ಇರಲು ಬಿಡಿ!

"ತಾಜಾ ಕಲಮು: ಕಾಗದದ ಕೊನೆಯಲ್ಲಿಯ 'ಆದರೂ ತಮ್ಮವನೇ' ಎಂದುದನ್ನು ತುಂಬಾ ಮೆಚ್ಚಿಕೊಳ್ಳಲೇಬೇಕು! ಸಿಟ್ಟು ಬಂದಾಗ ಅದನ್ನು ಹೊರಗೆ ಹಾಕಿ ಮನಸ್ಸನ್ನು ಹಗುರು ಮಾಡಿಕೊಂಡು ಬಿಡುವುದೆಂದರೇನೇ ಮನಮೋಹಕವಾದ ಆ ಮರಾಠಿಯ ಗುಣ! ಇದರಲ್ಲಿ ತಪ್ಪೇನಿದೆ?"

ಜಗಳಗಳನ್ನು ಕುರಿತಾದ ಅವರ ಮಾನಸಶಾಸ್ತ್ರವನ್ನು ವಿವರಿಸುವ ಕಾಗದವೇ ಇದಾಗಿದೆ. ಪು.ಲ. ಅವರು ತಕ್ಷಣ ಮಿಂಚಿಸುವ ಹಾಸ್ಯವಂತೂ ವಿಲಕ್ಷಣವಾದುದು. ಮರಾಠಿಯ ನಾಟ್ಯ ರಂಗ ಚಲನಚಿತ್ರಗಳಲ್ಲಿ ಹೆಸರು ಮಾಡಿದ ನಟ ದಾಮು ಅಣ್ಣಾ ಮಾಲವಣಕರರ ಮೆರುಳುಗಣ್ಣುಗಳನ್ನು ಹಿಂದಿನ ಪೀಳಿಗೆಯವರೆಲ್ಲ ಬಲ್ಲರು: ಒಂದು ಬಾರಿ ಚೆಲುವೆಯಾದ ಅವರ ಮಗಳು ಭಾರತಿಯನ್ನು ಕಂಡು ಪು.ಲ. "ಈ ಹುಡುಗಿ ಅಪ್ಪನ ಕಣ್ಣು ತಪ್ಪಿಸಿ ಹುಟ್ಟಿ ಬಂದಿದ್ದಾಳೆ" ಎಂದಿದ್ದರು. ಗೋವೆಯ ಮರಾಠಿಯ ಕವಿವರ್ಯರಾದ ಬಾ.ಬ. ಬೋರಕರ ಒಂದು ಸಲ ತೀವ್ರ ಕಾಹಿಲೆಯಿಂದ ಮಲಗಿದ್ದರು. ಅವರನ್ನು ಕಾಣಲು ಪು.ಲ. ಹೋಗಿದ್ದಾಗ ಡಾಕ್ಟರರ ಸಲಹೆಯ ಮೇರೆಗೆ ಬೋರಕರರಿಗೆ ಗೋವೆಯ ತಮ್ಮ ಪ್ರಿಯವಾದ 'ಪೇಯ'ವನ್ನು ಬಿಡಬೇಕಾಗಿ ಬಂದದ್ದು ತಿಳಿಯಿತು. ತರುವಾಯ ಪು.ಲ. ರಾಜಾಧ್ಯಕ್ಷರಿಗೆ ಬರೆದ ತಮ್ಮ ಕಾಗದದಲ್ಲಿ ಡಾಕ್ಟರರು ಬೋರಕರರಿಗೆ ಪೇಯಾಂತ ಪ್ರಾಯಶ್ಚಿತ್ತದ ಶಿಕ್ಷೆಯನ್ನು ವಿಧಿಸಿದ್ದಾರೆ:' ಎಂದಿದ್ದಾರೆ.

ಪಟಾಕಿಗಳಂತೆ ಫಟ್ ಫಟ್ ಎಂದು ಹಾಸ್ಯವಿನೋದಗಳನ್ನು ಹಾರಿಸಿ ನಗಿಸುವುದರಲ್ಲಂತೂ ಪು.ಲ. ಸಿದ್ಧಹಸ್ತರು. ಈ ಕಸುಬಿನಲ್ಲಿ ಇವರಿಗೆ ಯಾರೂ ಸರಿ ಸಾಟಿಯಿಲ್ಲ. ಅವರ ಇಂತಹ ಹಾಸ್ಯ ಚಟಾಕಿಗಳು ಒಂದು ಸಂಗ್ರಹ ರೂಪದಲ್ಲಿ ಬರಬೇಕಾದದ್ದು ಅಗತ್ಯ. ಮರಾಠಿ ನಾಟ್ಯ ಸಂಗೀತದಲ್ಲಿ ಹೆಸರು ಮಾಡಿದ ನಟಿ ಗಾಯಕಿ ಜ್ಯೋತ್ಸ್ನಾ ಭೋಳೆಯವರು

ಹೇಳಿದ ಒಂದು ತಮಾಷೆಯ ಪ್ರಸಂಗ ನನಗೆ ತುಂಬ ಹಿಡಿಸಿತು. ಮೋ.ಗ. ರಾಂಗಗೇಕರರ ನಾಟಕ ಮಂಡಳಿಯಲ್ಲಿ ಪು.ಲ. ಕೆಲಸಕ್ಕಿದ್ದ ದಿನಗಳವು. ನಾಟಕ ಮಂಡಳಿ ನಾಗಪುರದಲ್ಲಿ ತಳವೂರಿತ್ತು. ಆಗ ವಿಪರೀತ ಚಳಿಯಿರುತ್ತಿತ್ತು. ದಿನಾಲು ಬೆಳಿಗ್ಗೆ ಏಳುತ್ತಲೇ ಪ್ರತಿಯೊಬ್ಬರೂ "ಏನಪ್ಪಾ ಈ ಚಳಿ:" ಎನ್ನುವವರೇ. ಅಂದು ಬೆಳಿಗ್ಗೆ ತಬಲಜಿ ಮಾಮಾ ಹೇಳುತ್ತಿದ್ದರು "ನಿನ್ನೆ ರಾತ್ರಿಯಂಥ ಚಳಿ ಎಂದಿಗೂ ಬಿದ್ದಿರಲಿಕ್ಕಿಲ್ಲ! ಹಲ್ಲುಗಳು ಕೂಡ ಕಟಕಟಿಸುತ್ತಿದ್ದವು!" ಅವರ ಮಾತಿಗೆ ತಕ್ಷಣ ಪು.ಲ. "ಮಾಮಾ ನಿನ್ನೆ ರಾತ್ರಿ ಬಟ್ಟಲಲ್ಲಿ ತೆಗೆದಿಟ್ಟ ನಿಮ್ಮ ಕೃತಕ ಹಲ್ಲುಗಳ ಜೋಡಿಗಳು ಕಟಕಟಿಸುವ ಸದ್ದು ಕೇಳಿಯೇ ನಾನು ಎಚ್ಚೆತ್ತೆ", ಎಂದು ನುಡಿದರು. ಈ ತಮಾಷೆಯ ಮಾತುಗಳು ಸಾಗಿದ್ದು ಬೆಳಗಿನ ಚಹದ ವೇಳೆಗೆ. ಹೀಗಾಗಿ ಪು.ಲ. ಅವರ ಮಾತು ಕೇಳಿದವರ ಗಂಟಲುಗಳಲ್ಲಿಳಿಯದೇ ಚಹ ಬಾಯಿ-ಮೂಗುಗಳಿಂದ ಹೊರಚಿಮ್ಮಿತು.

ಅವರು ಇಂತಹ ಹಾಸ್ಯ ಚಟಾಕಿಗಳನ್ನು ಯಾವಾಗಲೂ ಹಾರಿಸುತ್ತಲೇ ಇರುತ್ತಾರೆ. ಇದಲ್ಲದೆ ಅವರು ಎಷ್ಟೋ ಸಲ ತಮ್ಮ ವಯಸ್ಸನ್ನು ಮರೆತು ಒಬ್ಬ ತುಂಟ ಹುಡುಗನಂತೆ ವರ್ತಿಸುತ್ತಾರೆ. ಆರೇಳು ವರ್ಷಗಳ ಹಿಂದಿನ ಸಂಗತಿ. ಒಂದು ದಿನ ನಾನು, ಕೇಶವ ರಾವ ಕೋರಾವಳೆ ಹಾಗೂ ಡಾ. ಸ.ಗಂ. ಮಾಲಶೆಯವರು ಕೂಡಿಕೊಂಡು ಪು.ಲ. ಅವರನ್ನು ಕಾಣಲು ವರಳಿಯಲ್ಲಿ ಅವರ ಮನೆಗೆ ಹೋಗಿದ್ದೆವು. ಕೆಲಸಕ್ಕೆ ಸಂಬಂಧಪಟ್ಟ ಮಾತುಕತೆಗಳು ಮುಗಿದ ತರುವಾಯ ಪು.ಲ. "ಹೇಗೋ ಸಂಜೆಯಾಗಿದೆ, ಕುಡಿಯಲು ಏನಾದರೂ?" ಎಂದು ಕೇಳಿದರು. ಅವರಾಗಿ ಅಷ್ಟೊಂದು ಕೇಳುತ್ತಿರುವಾಗ ಬೇಡೆನ್ನುವವರಾರು? "ಆಗಲಿ" ಎಂದೆವು. ಕೂಡಲೆ ಪು.ಲ. ಧ್ವನಿಯೇರಿಸಿ, "ಏಯ್ ಸುನೀತಾ, ನಾವು ತಂದಿರುವ ಫ್ರೆಂಚ್ ವಾಯಿನ್ ಇದೆಯಲ್ಲ; ಅದನ್ನು ಎಲ್ಲರಿಗೂ ತುಸು ತುಸು ತಂದು ಕೊಡು." ಎಂದರು. ತುಸು ಹೊತ್ತಿನಲ್ಲೆ

## ಧೂಮೋಪಾಖ್ಯಾನ

ಕಳಂಕ ತರುವ ಕೆಲಸವೇನಾದರೂ ನಡೆದರೆ 'ಮುಖಕ್ಕೆ ಮಸಿ ಬಳಿದ ಹಾಗಾಯಿತು' ಎಂದು ಉದ್ಗರಿಸುತ್ತಾರೆ. ಹೀಗೆ ಮುಖಕ್ಕೆ ಬಳಿಯಬಹುದಾದಂಥದ್ದು ಹೊಗೆಯ ಮಸಿಯೇ ಇರಬೇಕು. ಆದರೆ ಹೊಗೆ ಮಸಿಯನ್ನು ಇಂಥ ದುಷ್ಟ ಉಪಮೆಯಾಗಿ ಬಳಸುವವರಿಗೆ ಅದರ ನಿಜವಾದ ಮಹತ್ವ ತಿಳಿದಿಲ್ಲ.

ಮೋಟಾರು ಯಂತ್ರ, ಸೀಮೆ ಎಣ್ಣೆ, ಸ್ಟೋವ್, ಮೋಂಬತ್ತಿ, ಔದ್ಯಮಿಕ ಕುಲುಮೆ ಮುಂತಾದ ಬೇರೆ ಬೇರೆ ಬೆಂಕಿ ಉರಿಸುವ ಯಂತ್ರಗಳಲ್ಲಿ ಅರ್ಧಂಬರ್ಧ ದಹನ ಕ್ರಿಯೆ ನಡೆದಾಗ ಉಂಟಾಗುವ ವಸ್ತು ಹೊಗೆ ಮಸಿ. ನೀಲಿಯಾದ ಶುದ್ಧ ಜ್ವಾಲೆಯ ಬದಲು, ಹಳದಿ, ಕೆಂಪು, ಬಣ್ಣದ ಜ್ವಾಲೆ ಉರಿದಲ್ಲಿ, ಅಲ್ಲಿ ಮಸಿ ಕಟ್ಟುತ್ತದೆ. ಉದ್ಯಮ ಜಗತ್ತಿನಲ್ಲಿ ಇದೊಂದು ಅನಿವಾರ್ಯ, ಅತ್ಯವಶ್ಯ ಉಪವಸ್ತು.

ಹೊಗೆ ಮಸಿ ಇಲ್ಲದಿದ್ದರೆ ರಸ್ತೆಯಲ್ಲಿ ಚಕ್ರಗಳು ಉರುಳಲಾರವು ಎಂದರೆ ನೀವು ನಂಬುತ್ತೀರಾ? ಜಗತ್ತಿನಲ್ಲಿ ಉತ್ಪಾದನೆಯಾಗುವ ಒಟ್ಟು ಹೊಗೆ ಮಸಿಯ ಶೇಕಡಾ 95ರಷ್ಟು ಭಾಗ ರಬ್ಬರ್ ಕೈಗಾರಿಕೆಯಲ್ಲಿ, ವಿಶೇಷವಾಗಿ ಟೈರ್ ನಿರ್ಮಾಣಕ್ಕಾಗಿ ವಿನಿಯೋಗವಾಗುತ್ತಿದೆ. ದೊಡ್ಡ ದೊಡ್ಡ ಪ್ರಮಾಣದಲ್ಲಿ ಹೊಗೆ ಮಸಿಯ ಉತ್ಪಾದನೆ ಪುರಾತನ ಚೀನೀಯರಿಗೆ ತಿಳಿದಿತ್ತು. ಸೀಮೆ ಎಣ್ಣೆಯ ಬುಡ್ಡಿಯ ಮೇಲೆ ಲೋಹದ ತಗಡನ್ನು ಜೋಡಿಸಿದಾಗ ಕೆಲವೇ ಗಂಟೆಗಳಲ್ಲಿ ಹೊಗೆ ಮಸಿ ಸಂಗ್ರಹವಾಗುವುದನ್ನು ನೋಡಬಹುದು. ಟೈರ್ ಉದ್ಯಮಕ್ಕೆ ಬೇಕಾದಷ್ಟು ಹೊಗೆ ಮಸಿಯನ್ನು ಸಂಗ್ರಹಿಸಲು ಆಧುನಿಕ ತಂತ್ರಗಳನ್ನು ಬಳಸಲಾಗುತ್ತದೆ.

ಒಂದು ಸಾಧಾರಣ ರಬ್ಬರ್ ಚಕ್ರದ ಶೇಕಡ 35 ರಷ್ಟು ಭಾಗ ಬರಿಯ ಇಂಗಾಲ. ಇಷ್ಟು ಪ್ರಮಾಣದಲ್ಲಿ ಹೊಗೆ ಮಸಿಯನ್ನು ಬಳಸಿದರೆ, ಅದು ಚಕ್ರದ ಬಾಳಿಕೆ ಮತ್ತು ದೃಢತೆಯನ್ನು ಹೆಚ್ಚಿಸುವುದನ್ನು 1906ರಷ್ಟು ಹಿಂದೆಯೇ ಕಂಡುಕೊಳ್ಳಲಾಯಿತು. ಹೊಗೆ ಮಸಿಯಲ್ಲಿ 50ಕ್ಕೂ ಹೆಚ್ಚು ವೈವಿಧ್ಯಗಳಿವೆ. ಟೈರುಗಳ ನಾನಾ ಅವಶ್ಯಕತೆಯನ್ನು ಅನುಸರಿಸಿ ವಿವಿಧ ಬಗೆಯ ಮಸಿಗಳನ್ನು ಬಳಸಲಾಗುತ್ತದೆ.

ಹೊಗೆ ಮಸಿಯು ರಬ್ಬರ್ ಉದ್ಯಮದಲ್ಲಿ ಮಾತ್ರವಲ್ಲ, ಹಲವು ನಮೂನೆಯ ಪೇಂಟ್, ಮುದ್ರಣ ಶಾಯಿ, ಕಾರ್ಬನ್ ಹಾಳೆ, ಟೈಪ್‌ರೈಟರ್ ರಿಬ್ಬನ್ ಮತ್ತು ಗ್ರಾಮೊಫೋನ್ ಧ್ವನಿ ಮುದ್ರಿಕೆಗಳಲ್ಲಿಯೂ ಪ್ಲಾಸ್ಟಿಕ್, ಬಟ್ಟೆ ಮುಂತಾದವುಗಳಿಗೆ ಬಣ್ಣ ಕೊಡುವುದಕ್ಕಾಗಿಯೂ ಬಳಕೆಯಾಗುತ್ತದೆ.

ಜಗತ್ತಿನ ಒಟ್ಟು ಉತ್ಪಾದನೆಯ ಶೇಕಡಾ 90ರಷ್ಟು ಹೊಗೆ ಮಸಿಯನ್ನು ಕುಲುಮೆ ವಿಧಾನದಿಂದ ಸಂಗ್ರಹಿಸಲಾಗುತ್ತದೆ. ಘನ ತೈಲಗಳನ್ನು ಅರೆದಹನಕ್ಕೆ ಒಳಪಡಿಸಿದಾಗ ಇಂಗಾಲದ ಕಣಗಳನ್ನು ಹೊತ್ತ ಅನಿಲಗಳು ಉಂಟಾಗುತ್ತವೆ. ಅವನ್ನು ತಣಿಸಿ ಇಂಗಾಲವನ್ನು ಶೇಖರಿಸಬಹುದು. ಹೀಗೆ ದೊರೆತ ಹೊಗೆ ಮಸಿಯಲ್ಲಿ ಸ್ವಲ್ಪ ಭಾಗವನ್ನು ಮಾತ್ರ ಪುಡಿಯ ರೂಪದಲ್ಲಿ ಸಂಗ್ರಹಿಸಲಾಗುತ್ತದೆ. ಹೆಚ್ಚಿನ ಭಾಗವನ್ನು ಹರಳುಗಳಾಗಿ ಪರಿವರ್ತಿಸುವುದರಿಂದ ದೂರ ಸ್ಥಳಗಳಿಗೆ ಅದರ ಸಾಗಾಟ ಸುಲಭ.

— ಗೌರಿ ಅಭಿ

ಸುನೀತಾಬಾಯಿಯವರು ಒಂದು ಟ್ರೇಯಲ್ಲಿ ಎತ್ತರ ಗೋಣಿನ ಕಾಜಿನ ಪಾತ್ರೆಗಳನ್ನಿಟ್ಟುಕೊಂಡು ಬಂದು ಹಾಜರಾದರು. ಅವುಗಳಲ್ಲಿ ಕೆಂಪು ಬಣ್ಣದ ವಾಯಿನ್ ತುಂಬಿತ್ತು. ಒಬ್ಬೊಬ್ಬರೂ ಗ್ಲಾಸುಗಳನ್ನೆತ್ತಿಕೊಂಡೆವು. 'ಚೀಯರ್ಸ್ ಚೀಯರ್ಸ್' ಗಳೆಲ್ಲ ಸರಿಯಾಗಿಯೇ ನಡೆದು ನಾವು ಇನ್ನೇನು ತುಟಿಗೆ ಗ್ಲಾಸ್ ಹಚ್ಚಬೇಕು. "ಸಿಪ್ ಮಾಡಿ ಸಿಪ್," ಎಂದರು. ನಾವೆಲ್ಲ ಪಾತ್ರೆಗಳನ್ನು ತುಟಿಗಳಿಗೆ ತಗುಲಿಸಿದೆವು. ಏನಾಗುತ್ತಿದೆಯೆಂದೇ ಅರೆಕ್ಷಣ ನಮಗೆಲ್ಲ ಅರ್ಥವಾಗದೇ ಹೋಯಿತು. ಪಾತ್ರೆಯನ್ನು ಪೂರ್ತಿ ಬುಡಮೇಲು ಮಾಡಿದರೂ ಫ್ರೆಂಚ್ ವಾಯಿನಿನ ಒಂದೇ ಒಂದು ಹನಿಯಾದರೂ ನಮ್ಮ ನಾಲಗೆಯ ಮೇಲೆ ಬಿದ್ದಿದ್ದರೆ ಆಣೆ: ಶರ್ಟಿನ ಮೇಲೆ ಬಿತ್ತೇನೋ ಎಂದು ತಡಕಾಡಿ

ನೋಡಿದೆವು. ಕೋಶಾವಳಿ ಪಾತ್ರೆಯನ್ನು ತಮ್ಮ ತೆರೆದ ಬಾಯಲ್ಲೇ ಬುಡಮೇಲು ಮಾಡಿ ಸುರಿದುಕೊಂಡರು. ನಾನು ನನ್ನ ಗ್ಲಾಸಿನಲ್ಲಿ ನಾಲಿಗೆಯನ್ನಾಡಿಸಿದೆ.... ಪು.ಲ. ಒಮ್ಮೆಲೆ ಎಂಟು ಹತ್ತು ಬಾಟಲಿಗಳನ್ನು ಒಡೆದಂತೆ ದೊಡ್ಡದಾಗಿ ನಗಹತ್ತಿದರು. ಆಗಲೆ ನರಿಯ ಮನೆಗೆ ಬಂದ ಬಕಪಕ್ಷಿಗಳಂತಾಗಿದೆ ನಮ್ಮ ಅವಸ್ಥೆ ಎಂಬುದು ಗಮನಕ್ಕೆ ಬಂದದ್ದು. ಆಗ ಪು.ಲ. ಅವರೇ ತಮ್ಮ 'ಅಪೂರ್ವಾಯಿ' (ಅಪರೂಪ)ಯ ವಿದೇಶ ಯಾತ್ರೆಯಲ್ಲಿ ಬಣ್ಣಿಸಿದಂತೆ ನಾವು ಮೂವರೂ ಒಮ್ಮೆಲೇ ದ್ರಾಕ್ಷಾ ಸಂಸ್ಕೃತಿಯಿಂದ ರುದ್ರಾಕ್ಷ ಸಂಸ್ಕೃತಿಗೆ ಇಳಿದು ಬಂದೆವು.

ಪ್ಯಾರಿಸ್ನಿಂದ ಮರಳಿ ಬರುವಾಗ ಗ್ಲಾಸುಗಳನ್ನು ನಾಟಕದ ಪ್ರಯೋಗಗಳಿಗೆಂದು ತಂದಿದ್ದರಂತೆ. ಅವುಗಳ ಅಂಚು ಪೊಳ್ಳಾಗಿದ್ದವು. ಪೊಳ್ಳು ಭಾಗದಲ್ಲಿ ವಾಯಿನಿನಂತೆ ಕಾಣುವ ಕೆಂಪು ದ್ರವವನ್ನು ತುಂಬಲಾಗಿತ್ತು. ಗ್ಲಾಸು ಮಾತ್ರ ಬರಿದಾದದ್ದೆ; ಗ್ಲಾಸನ್ನು ಬಾಯಿಗೆ ಹಚ್ಚುತ್ತಲೇ 'ಕೆಂಪು ವಾಯಿನಿ'ನ ಪಾತಳಿ ಬದಲಾಗಿ ಅದು ಬಾಯಿಗೆ ಬಂದಂತೆ ಕಾಣುತ್ತಿತ್ತು. ಕಿಡಿಗೇಡಿ ಬಾಲಕನೇ ಇಂತಹ ಮಂಗ ಚೇಷ್ಟೆಗಳನ್ನು ಮಾಡಬೇಕು. ಆದರೆ ಆ ಕಿಡಿಗೇಡಿ ಬಾಲಕ ಪು.ಲ. ಅವರ ಸ್ವಭಾವದಲ್ಲೂ ಅಡಗಿ ಕುಳಿತಿದ್ದಾನೆ. ಅವರಾದರೂ ಏನು ಮಾಡುವರು?

ಈಗೀಗ ಅವರ ಆರೋಗ್ಯ ಸರಿಯಿರುವುದಿಲ್ಲ. ಮೊಳಕಾಲುಗಳಲ್ಲಿ ಅಪಾರ ವೇದನೆ. ನಡೆಯುವುದೂ ಕಾಲು ಮಡಚಿ ಕುಳಿತುಕೊಳ್ಳುವುದೂ ಕಷ್ಟಸಾಧ್ಯವಾಗುತ್ತದೆ. ಇನ್ನಾರಾಗಿದ್ದರೆ ಬೇಸತ್ತು ಹೋಗುತ್ತಿದ್ದರು. ಪು.ಲ. ಮಾತ್ರ ವೇದನೆಗಳಲ್ಲೂ ಗೇಲಿ ಮಾಡುತ್ತ ಸಂತೋಷಚಿತ್ತರೂ ಪ್ರಫುಲ್ಲಿತರೂ ಆಗಿರುತ್ತಾರೆ' ಇತ್ತೀಚೆಗಷ್ಟೇ ಅವರಿಂದ ಬಂದ ಕಾಗದದಲ್ಲಿ ತಮ್ಮ ಬೇನೆಯನ್ನು ಕುರಿತು ಈ ರೀತಿ ಬರೆದಿದ್ದಾರೆ.

"ಸುನೀತಾ, ನಾನು ಒಂದು ತಿಂಗಳ ಕಾಲ ಘಟಪ್ರಭೆಯಲ್ಲಿದ್ದೆವು. ಮೊನ್ನೆಯೇ ಮರಳಿದೆವು. ಮೊಳಕಾಲುಗಳು ಈಗ ಪರವಾಗಿಲ್ಲ. 'ಸಾಹಿತಿ' ಎಂಬ ಒಮ್ಮೆ ಅಂಟಿಕೊಂಡ ಬೇನೆ ಮತ್ತೆ ಬೆನ್ನು ಬಿಡದು. ಸಂಧಿವಾತವೂ ಅಂಥದೇ. ಹವೆಯಲ್ಲಿ ತುಸು ಏರುಪೇರಾದರೂ ಸಾಕು. ನನ್ನ ಮೊಳಕಾಲುಗಳು ಹವಾಮಾನ ಇಲಾಖೆಯವರಿಗಿಂತ ಮೊದಲೇ ಅದನ್ನು ಕಂಡುಹಿಡಿದುಬಿಡುತ್ತವೆ. ಮುಗಿಲಲ್ಲಿ ಮೋಡಗಳು ತೇಲುತ್ತಲೇ ಮೊಳಕಾಲುಗಳು ಬಿಗಿದುಕೊಳ್ಳುತ್ತವೆ. ಹೀಗಾಗಿ ಮೋಡಗಳೆಂದರೆ ನನಗೆ ಎಲ್ಲಿಲ್ಲದ ಭಯ! ರೇಡಿಯೋದಲ್ಲಿ ಶ್ರೀಪಾದರಾವ್ ನೇವಲೇಕರರ ನಾಟಕದ 'ನಭ ಮೇಘಾನಿ ಆಕ್ರಮಿಲೆ' (ಮೋಡಗಳು ಮುಗಿಲನ್ನು ಆಕ್ರಮಿಸಿದಾಗ) ಎನ್ನುವ ಹಾಡು ಕೇಳಿಬರುತ್ತಲೇ ರೇಡಿಯೋದ ಕಿವಿಯನ್ನೇ ಹಿಂಡಿಬಿಡುತ್ತೇನೆ (ಕಿವಿಯನ್ನು ಕುರಿತೂ ಒಂದು ಗಮ್ಮತ್ತನ್ನು ಹೇಳುವವನಿದ್ದೆ ಹೋಗಲಿ;) ಸದ್ಯಕ್ಕಂತೂ ಕಪಾಟಿನಲ್ಲಿರುವ 'ಮೇಘದೂತ'ವನ್ನೂ ಹಾಫ್ ರೇಟಿನಲ್ಲಿ ಮಾರಲು ತೆಗೆದಿದ್ದೇನೆ. ಮೂರು ಜನ್ಮಗಳ ಸಂಧಿವಾತಕ್ಕೆ ಸಾಕಾಗುವಷ್ಟು ಸಲ ಅದರಲ್ಲಿ ಮೋಡಗಳು ಬರುತ್ತವೆ. ಸಂಸ್ಕೃತದ 'ಮೇಘದೂತ'ವನ್ನು ಕೊಂಡುಕೊಳ್ಳುವವರಿಗೆ ಅದರ ಮರಾಠಿಯ ಭಾಷಾಂತರಗಳೆಲ್ಲ ಪುಕ್ಕಟೆ! ಚಳಿ ಹೆಚ್ಚಾದರೂ ತೊಂದರೆ: ಮೇ ತಿಂಗಳ ಇಂದಿನ ಬೇಸಿಗೆಯಲ್ಲಿ ಮೋಡಗಳು ಬಂದರೆ ನನ್ನ ಗತಿ, ಆ ದೇವನೆ ಬಲ್ಲ! ಇರಲಿ.

---

Printed and published by M.H. BELGAUMKAR on behalf of Lokashikshana Trust at "SAMYUKTA KARNATAKA PRESS" No. 2, Residency Road, Bangalore-560 025, Phone: 213265, Hubli Phone: 64303. Managing Editor K. SHAMA RAO. Rep: Bombay: V. Satyamurthi. Phone: 5510502, Madras, S.K. Murti Phone: 414870. New Delhi: V.K. Chopra Phone: 7114785. Hyderabad: S. Shankaranarayana, Phone: 65700.

*Registered with the Registrar of Newspapers for India under No. 35/3957*

KASTURI PRICE: Rs. 3.00 Reg. no. KRNG 43
Licence No. L2120/wpp No.33



Cover printed at Rajhans Enterprises Phone - 357070